# ಬೀಜ ಮತ್ತು ಭೂಮಿ



ಶಿವರಾಮು ಕಾಡನಕುಪ್ಪೆ

ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ
ಆ ಕಲ್ಲು ಕಲ್ಲ ಮೇಲೆ ಕೆಡೆದಡೆ, ದೇವರೆತ್ತ ಹೋದರೊ?
ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ - ಗುಹೇಶ್ವರಾ

-ಅಲ್ಲಮಪ್ರಭು

# ಬೀಜ ಮತ್ತು ಭೂಮಿ

'ಸುಧಾ' ವಾರಪತ್ರಿಕೆಯ 'ವಿಚಾರ ಲಹರಿ' ಅಂಕಣದಲ್ಲಿ ಬರೆದ ವೈಚಾರಿಕ ಬರಹ


**ಶಿವರಾಮು ಕಾಡನಕುಪ್ಪೆ**






**ಸಂವಹನ**

೧೨/೧ಎ, ಈವ್ನಿಂಗ್ ಬಜಾರ್ ಹಿಂಭಾಗ

ಶಿವರಾಂಪೇಟೆ, ಮೈಸೂರು - ೫೭೦ ೦೦೧

**BEEJA MATTU BHOOMI**

A Collection of Rationalistic Articles

*By*

Prof. Shivaramu Kadanakuppe
1256, 'Nesara', 4th Cross, Paduvana Road, Kuvempunagara
Mysore - 570 023
Mob : 9845326819

*Published by* :
Samvahana
No. 12/1A, Behind Evening Bazaar
Shivarampet, Mysore-1.

Pages : 276

ಮೊದಲ ಮುದ್ರಣ : 2017

First Edition : 2017



ಬೆಲೆ : ಎರಡು ನೂರು ಇಪ್ಪತ್ತೈದು ರೂಪಾಯಿ
Price : ₹ **225/-**

ರಕ್ಷಾಕವಚ ವಿನ್ಯಾಸ : ಶಿವಲಿಂಗಪ್ಪ ವಿ. ಹೂಗಾರ್
ರಕ್ಷಾಪುಟದ ಲೇಖಕರ ಛಾಯಾಚಿತ್ರ : ಶ್ರೀಮತಿ ಆರ್. ಸುವರ್ಣ ಕಾಡನಕುಪ್ಪೆ

ಮುದ್ರಕರು :
ಶ್ರೀ ರಾಜೇಂದ್ರ ಪ್ರಿಂಟರ್ಸ್ & ಪಬ್ಲಿಷರ್ಸ್
೧೨/೧, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು - ೫೭೦ ೦೦೧ ದೂರವಾಣಿ : ೨೪೭೬೦೧೯

ಹಿರಿಯ ಸಮಾಜವಾದಿಗಳೂ ಪ್ರಗತಿಪರ ಹೋರಾಟಗಾರರೂ ಆದ
ಹಿರಿಯ ಮಿತ್ರರಾದ

**ಶ್ರೀ ಪ. ಮಲ್ಲೇಶ್**

ಮತ್ತು

ಹಿರಿಯ ಸಮಾಜವಾದಿಗಳೂ ಶಿಸ್ತು ಬದ್ಧ ಜೀವನಕ್ಕೆ ಆದರ್ಶಪ್ರಾಯರೂ
ಆದ ಸನ್ಮಿತ್ರ

**ಪ್ರೊ. ಬಿ.ಎನ್. ಶ್ರೀರಾಮ**

ಅವರಿಗೆ ಈ ಕೃತಿ ಅರ್ಪಿತ

# ಲೇಖಕರ ಮಾತು

೨೦೦೪ರ ಜನವರಿ ತಿಂಗಳಿಂದ 'ಸುಧಾ' ವಾರಪತ್ರಿಕೆಯ 'ವಿಚಾರ ಲಹರಿ' ಅಂಕಣಕ್ಕೆ 'ಶಿಕಾಕು' ಎಂಬ ಹೆಸರಿನಿಂದ ವೈಚಾರಿಕ ಲೇಖನಗಳನ್ನು ಬರೆಯಲಾರಂಭಿಸಿದೆ. ನಿರಂತರವಾಗಿ ೯ ವರ್ಷಗಳವರೆಗೆ ಈ ಅಂಕಣದಲ್ಲಿ ಬರವಣಿಗೆ ಮಾಡಿದೆ. ನನ್ನ ಈ ಬರಹಗಳು ನಾಡಿನಾದ್ಯಂತ ಓದುಗರ, ವಿಚಾರವಂತರ ಮೆಚ್ಚುಗೆಯನ್ನು ಗಳಿಸಿದವು. ವರ್ತಮಾನದ ಅರಿವಿನ ನೆಲೆಯಲ್ಲಿ ಭಾರತೀಯ ಭೂತಕಾಲದ ಸಾಹಿತ್ಯ, ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳನ್ನು ಪುನರ್‌ಮಂಡಿಸುವ ಕೆಲಸವನ್ನು ಈ ಲೇಖನಗಳು ಮಾಡಿದವು. ಭವಿಷ್ಯತ್ತಿನ ಭಾರತೀಯ ಬದುಕು ಜಾತಿ ಸಮಾನತೆಯ, ಲಿಂಗ ಸಮಾನತೆಯ ಆಧಾರದ ಮೇಲೆ ಭೌತಿಕವಾಗಿ, ಬೌದ್ಧಿಕವಾಗಿ ಅರಳಬೇಕೆಂಬ ಆಶಯವನ್ನು ಈ ಲೇಖನಗಳು ಧ್ವನಿಸುತ್ತವೆ.

'ವಿಚಾರ ಲಹರಿ' ಅಂಕಣದಲ್ಲಿ ನನಗೆ ನನ್ನ ಆಲೋಚನೆಗಳನ್ನು ಒಳನೋಟಗಳನ್ನು ಅಭಿವ್ಯಕ್ತಿಸಲು ಅವಕಾಶ ಮಾಡಿಕೊಟ್ಟ ಸುಧಾ ವಾರಪತ್ರಿಕೆಯ ಸಂಪಾದಕೀಯ ವರ್ಗಕ್ಕೆ ನನ್ನ ಕೃತಜ್ಞತೆಗಳು ಸಲ್ಲಬೇಕು. ಅದರಲ್ಲೂ ಮುಖ್ಯವಾಗಿ ಶ್ರೀ ಬಿ.ಎಂ. ಹನೀಫ್, ಶ್ರೀಮತಿ ಸಿ.ಜಿ. ಮಂಜುಳ ಮತ್ತು ಗುಡಿಹಳ್ಳಿ ನಾಗರಾಜ ಅವರಿಗೆ ನನ್ನ ಪ್ರೀತಿಪೂರ್ವಕ ವಂದನೆಗಳು.

'ಸುಧಾ' ಪತ್ರಿಕೆಯ 'ವಿಚಾರ ಲಹರಿ' ಅಂಕಣದಲ್ಲಿ ನಾನು ಬರೆದ ಮೊದಲ ನಾಲ್ಕು ವರ್ಷದ ವೈಚಾರಿಕ ಲೇಖನಗಳು 'ಬಯಲ ಬೆಳೆ' ಎಂಬ ಪುಸ್ತಕವಾಗಿ ೨೦೦೮ರಲ್ಲಿ ಪ್ರಕಟಗೊಂಡಿತು. ಅನಂತರದ ೫ ವರ್ಷಗಳ ಬರಹಗಳು ಈ ಕೃತಿಯಲ್ಲಿ ಪ್ರಕಟಗೊಳ್ಳುತ್ತಿವೆ. 'ಸುಧಾ' ಪತ್ರಿಕೆಯ 'ವಿಚಾರ ಲಹರಿ' ಅಂಕಣದಲ್ಲಿ ನಿರಂತರ ೧೦ ವರ್ಷಗಳ ಕಾಲ ಬರೆದು ನಿಲ್ಲಿಸಬೇಕೆಂದು ಇಚ್ಛೆ ಪಟ್ಟಿದ್ದೆ. ಆದರೆ ೨೦೧೩ರ ಡಿಸೆಂಬರ್ ತಿಂಗಳಲ್ಲಿ ನನ್ನ ಆರೋಗ್ಯವು ತೀರ ಗಂಭೀರವಾಗಿ ಹದಗೆಟ್ಟಿದ ಕಾರಣದಿಂದಾಗಿ ನನ್ನ ಬರವಣಿಗೆಯನ್ನು ನಿಲ್ಲಿಸಬೇಕಾಯಿತು. ಆದರೂ ೯ ವರ್ಷಗಳ ನನ್ನ ಬರವಣಿಗೆಯ ಮೂಲಕ 'ಸುಧಾ' ಓದುಗರೊಂದಿಗೆ ನಾನು ನಡೆಸಿದ ಬೌದ್ಧಿಕ ಸಂವಾದವು ನನಗೆ ತೃಪ್ತಿ ತಂದಿದೆ. ಈ ಬರವಣಿಗೆಯ ಕಾರಣದಿಂದಾಗಿ ನನ್ನ ಓದು ವಿಸ್ತಾರವಾಯಿತು, ಬದುಕನ್ನು ನೋಡುವ ದೃಷ್ಟಿ ಸೂಕ್ಷ್ಮವಾಯಿತು. ಈ ಕಾರಣದಿಂದ 'ಸುಧಾ' ವಾರಪತ್ರಿಕೆ ನನಗೆ ನೆರವು ನೀಡಿದೆಯೆಂದು ನಾನು ಭಾವಿಸಿದ್ದೇನೆ. ನನ್ನ ಈ ಕೃತಿ 'ಬೀಜ ಮತ್ತು ಭೂಮಿ' ಪ್ರಕಟವಾಗುತ್ತಿರುವ ಸಂದರ್ಭದಲ್ಲಿ ನನ್ನ ಆತ್ಮೀಯ ಗುರುಗಳಾದ ಡಾ. ರಾಗೌ, ಗೆಳೆಯ ಪ್ರೊ. ಜಿ. ಚಂದ್ರಶೇಖರ್ ಅವರನ್ನು ನೆನೆಯುತ್ತೇನೆ. ಈ ಕೃತಿಯ ಅಂತಿಮ ಘಟ್ಟದ ಕರಡನ್ನು ತುಂಬ ಪ್ರೀತಿಯಿಂದ ತಿದ್ದಿ ಉತ್ತಮಗೊಳಿಸಿಕೊಟ್ಟ ಗೆಳೆಯ ಶ್ರೀ

ಕ್ಯಾತನಹಳ್ಳಿ ರಾಮಣ್ಣನವರ ಉಪಕಾರವನ್ನು ಮರೆಯಲಾರೆ. ಗೆಳೆಯರಾದ ಶ್ರೀ ಡಿ.ಎನ್. ಲೋಕಪ್ಪನವರು ನನ್ನನ್ನು ಕಳೆದ ಎರಡು ದಶಕಗಳಿಂದ ಅತ್ಯಂತ ತುಂಬು ಪ್ರೀತಿಯಿಂದ ನಿಸ್ವಾರ್ಥವಾಗಿ ನನ್ನನ್ನು ನೋಡಿಕೊಂಡಿದ್ದಾರೆ. ಅವರು ಈ ಕೃತಿಯನ್ನು ಪ್ರಕಟಿಸುತ್ತಿರುವುದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಈ ಕೃತಿಯ ರಕ್ಷಾಕವಚವನ್ನು ಅರ್ಥಪೂರ್ಣವಾಗಿ ಬಿಡಿಸಿರುವ ಕಲಾವಿದ ಶ್ರೀ ಶಿವಲಿಂಗಪ್ಪ ವಿ. ಹೂಗಾರ್ ಅವರಿಗೆ ನನ್ನ ನಮಸ್ಕಾರಗಳು.

ನನ್ನನ್ನು ಅತಿ ಪ್ರೀತಿಯಿಂದ ನೋಡಿಕೊಳ್ಳುತ್ತಿರುವ ನನ್ನ ಪತ್ನಿ ಶ್ರೀಮತಿ ಸುವರ್ಣ ಕಾಡನಕುಪ್ಪೆ, ನನ್ನ ಮಗಳು ಡಾ. ಸುಶಿ ಕಾಡನಕುಪ್ಪೆ ಮತ್ತು ನನ್ನ ಮಗ ಡಾ. ನೇಸರ ಕಾಡನಕುಪ್ಪೆ - ಇವರ ಒತ್ತಾಸೆಗಳಿಲ್ಲದಿದ್ದರೆ ಈ ಕೃತಿಯ ಹಸ್ತಪ್ರತಿ ಸಿದ್ಧಗೊಳ್ಳುವುದು ತಡವಾಗುತಿತ್ತು. ನನ್ನ ಸೊಸೆ ಮೇಘ ಕಾಡನಕುಪ್ಪೆ ಮತ್ತು ಮೊಮ್ಮಗ ಅಕ್ಷರ ಕಾಡನಕುಪ್ಪೆ ಅವರ ಪ್ರೀತಿಯನ್ನು ಮರೆಯಲಾರೆ. ಅವರ ಪ್ರೀತಿಗೆ ಕೃತಜ್ಞತೆ ಸೂಚಿಸುವುದು ಕೃತಕವಾಗುವುದೆಂದು ನಂಬುತ್ತೇನೆ.

೨೯ ಮಾರ್ಚಿ ೨೦೧೭ - ಶಿವರಾಮು ಕಾಡನಕುಪ್ಪೆ

ಮೈಸೂರು

# ಪರಿವಿಡಿ

# ನೀಮೆ ಗೆಲ್ವಿರ್ ತುದಿಗೆ

ಇದು ಸತ್ಯ!

ಚರಿತ್ರೆಯುದ್ದಕ್ಕೂ ಹೆಣ್ಣನ್ನು ಭೋಗವಸ್ತುವನ್ನಾಗಿ ಪರಿಗಣಿಸಿಕೊಂಡು ಅನುಭೋಗಿಸಿರುವುದು ಇಂದು ವಿವಾದಾಸ್ಪದ ವಿಷಯವಲ್ಲ. ಅವಳನ್ನು ಒಂದು ಕಡೆ ತಾಯೆಂದೂ ಸರ್ವಶಕ್ತಳೆಂದೂ ವೈಭವೀಕರಿಸಿ ಮತ್ತೊಂದೆಡೆ ಅವಳನ್ನು ದಾಸಿಯಂತೆ ಕಂಡಿರುವುದು ಮನುಕುಲದ ಇಬ್ಬಗೆ ಧೋರಣೆಯನ್ನು ಸೂಚಿಸುತ್ತದೆ. ಈ ಜಗತ್ತಿನ ಚರಾಚರ ವಸ್ತುಗಳನ್ನು ಜೀವಿಗಳನ್ನು ಸೃಷ್ಟಿಸಿದ ಭಗವಂತನು ಕೂಡ ತಾಯಿಯ ಮೂಲಕವೇ ಸೃಷ್ಟಿಗೊಂಡಿರುತ್ತಾನೆಂಬ ಆಸ್ತಿಕ ನಂಬಿಕೆಯು ಸ್ತ್ರೀಯ ಪಾರಮ್ಯವನ್ನು ಎತ್ತಿಹಿಡಿಯುತ್ತದೆ. (ಇದಕ್ಕೆ ಹೊರತಾಗಿ ಭಗವಂತನು ಸ್ವಯಂಭುವೆಂದು ವಾದಮಾಡುವವರೂ ಇದ್ದಾರೆ!) ಆದರೆ ಇದು ಸತ್ಯದ ಒಮ್ಮುಖ ಮಾತ್ರ, ವಾಸ್ತವ ಸತ್ಯ ಬೇರೆಯೇ ಇತ್ತು ಎಂಬುದು ಇಂದು ಗುಟ್ಟಾಗಿಲ್ಲ. ನಾಗರಿಕ ಪೂರ್ವ ಸಮಾಜದಲ್ಲಿ ಸ್ತ್ರೀಗೆ ಸಾಮಾಜಿಕ ಗೌರವಾದರವೂ ಹಕ್ಕೂ ಇತ್ತೆಂಬುದು ನಿಜ. ಆದರೆ ಪ್ರಕೃತಿಯನ್ನು ಸ್ತ್ರೀಗೆ ಹೋಲಿಸಿ ಅವಳನ್ನು ಆರಾಧಿಸುತ್ತಿದ್ದ ಯುಗ ಮುಗಿದು, ಬೀಜಪಾರಮ್ಯ ಸಿದ್ಧಾಂತದ ಉಗಮದ ಜೊತೆ ಪುರುಷಪ್ರಧಾನ ವ್ಯವಸ್ಥೆ ಸೃಷ್ಟಿಗೊಂಡಿತು. ಅನಂತರದ್ದು ಇತಿಹಾಸ - ಸ್ತ್ರೀಯ ಶೋಚನೀಯ ಸ್ಥಿತಿ ಇಪ್ಪತ್ತನೆಯ ಶತಮಾನದವರೆಗೆ ನಡೆದು ಬಂದಿತು. ಅವಳು ದಾಸಿ, ಭೋಗ ವಸ್ತು, ಮಾರಾಟದ ಸರಕು, ಅಧಿಕಾರ ರಹಿತಳು ಮತ್ತು ಗಂಡಸಿನ ವಂಶವನ್ನು ಮುಂದುವರಿಸಲು ಬೇಕಾದ ಸಾಧನ.

ತನ್ನ ಹಕ್ಕಿಗಾಗಿ ಆಧುನಿಕ ಮಹಿಳೆ ನಡೆಸಿದ ನಿರಂತರ ಹೋರಾಟದ ಫಲ ಆಧುನಿಕ ಮಹಿಳೆಯಾಗಿ ಪ್ರಕಾಶಗೊಂಡಿದ್ದಾಳೆ. ಓಟಿನ ಹಕ್ಕು, ಆಸ್ತಿಯ ಹಕ್ಕು, ಅಧಿಕಾರದ ಹಕ್ಕು, ಕೌಟುಂಬಿಕ ಹಕ್ಕು - ಇವೇ ಮುಂತಾದ ಹಕ್ಕುಗಳು ಲಿಂಗ ಸಮಾನತೆಯ ಆಧಾರದ ಮೇಲೆ ಇಂದು ಮಹಿಳೆಗೆ ದಕ್ಕುತ್ತಿವೆ. ಆದರೆ ಈ ಎಲ್ಲಾ ಹಕ್ಕುಗಳು ಮೀಸಲಾತಿಯ ಮೂಲಕ ಬರಬೇಕೆಂಬ ನಿರ್ಧಾರಗಳು ಮಾತ್ರ ಶೋಚನೀಯ. ಇನ್ನೂ ಪುರುಷ ಪ್ರಧಾನ ವ್ಯವಸ್ಥೆ ಸ್ತ್ರೀಯ ಬಗ್ಗೆ ಮುಕ್ತ ಮನಸ್ಸಿನಿಂದ ಚಿಂತಿಸುತ್ತಿಲ್ಲ. ಅಕ್ಷರ ಕಲಿತ ನವನಾಗರಿಕ ಮಹಿಳೆ ಎಲ್ಲ ಸವಲತ್ತುಗಳನ್ನು ಪಡೆದಂತೆ ಕಂಡುಬಂದರೂ ಅಕ್ಷರ ಕಲಿಯದ ಗ್ರಾಮೀಣ ಮಹಿಳೆ ಸಂಪ್ರದಾಯದ ಬಂಧನದಲ್ಲೇ ಬದುಕುತ್ತಿದ್ದಾಳೆ.

ಇದೂ ಸತ್ಯ!

ಮೇಲಿನ ಎಲ್ಲಾ ಸತ್ಯಗಳು ನಾಗರಿಕವೆಂದು ಆಯಾ ಕಾಲದಲ್ಲಿ ಕರೆಸಿಕೊಂಡ ಕೆನೆಪದರ

ವರ್ಗದಲ್ಲಿ ಕಾಣಿಸಿಕೊಂಡವು. ಈ ಕೆನೆಪದರದ ಬದುಕಿನ ನಡಾವಳಿಗಳನ್ನು ಸಮಾಜ ದಾಖಲು ಮಾಡಿರುವುದರಿಂದ ಇಂದು ನಾವು ಅದನ್ನೇ ಚರಿತ್ರೆಯೆಂದು ಬಗೆದು ವ್ಯಾಖ್ಯಾನಿಸುತ್ತಿದ್ದೇವೆ. ಆದರೆ ನಮ್ಮಲ್ಲಿ ಅಲಿಖಿತ ಸಾಮಾಜಿಕ ಚರಿತ್ರೆಯೊಂದಿದೆ. ನಮ್ಮ ಸಮಾಜದ ಅನಕ್ಷರಸ್ಥ ಬಹುಸಮುದಾಯದ ಬದುಕು ಈ ಚರಿತ್ರೆಯಲ್ಲಿ ಅಡಗಿದೆ. ಆದರೆ ಇದನ್ನು ನಮ್ಮ ಕೆನೆಪದರದಿಂದ ಬಂದ 'ವಿದ್ಯಾವಂತ' ಚರಿತ್ರೆಕಾರರು ಅದನ್ನು ನಿರ್ಲಕ್ಷಿಸಿದ್ದಾರೆ. ಏಕೆಂದರೆ ಅದು ಅವರಿಗೆ ಬದುಕೆಂದು ಕಾಣಲಿಲ್ಲ.

ಈ ಅಲಿಖಿತ ಬದುಕಿನಲ್ಲಿ ಬದುಕುಮಾಡುತ್ತಿದ್ದ ಮಹಿಳೆಗೆ ಸಾಮಾಜಿಕ ಜೀವನ ಮಟ್ಟದಲ್ಲಿ ಅಧಿಕಾರ ಕಂಡು ಬರದಿದ್ದರೂ ಕೌಟುಂಬಿಕ ನೆಲೆಯಲ್ಲಿ ಅವಳು ಅಧಿಕಾರವನ್ನು ಆರ್ಭಟಿಸಿ ಪಡೆಯುತ್ತಿದ್ದಳು. ತನ್ನ ಹಕ್ಕೆಂದು ಕೇಳಿ ಚಲಾಯಿಸುತ್ತಿದ್ದಳು. ತನ್ನ ಕುಟುಂಬದ ರಕ್ಷಣೆ, ಪಾಲನೆ ವಿಚಾರಗಳಲ್ಲಿ ಅವಳ ಅಭಿಪ್ರಾಯ ಬಹಳ ಮುಖ್ಯವಾಗುತ್ತಿತ್ತು. ಗಂಡಸು ಹೊರಗೆ ಎಷ್ಟೇ ದೊಡ್ಡವನೆಂದುಕೊಂಡು ಮೆರೆದಾಡಿದರೂ ಮನೆಯ ಒಡತಿಯ ಮುಂದೆ ತಲೆಬಗ್ಗಿಸಲೇಬೇಕಾಗಿತ್ತು. ಪತ್ನಿಯು ಗಂಡನಿಗೊಂದು ಕಡಿವಾಣವನ್ನೂ ಮೂಗುದಾರವನ್ನೂ ಹಾಕಿಯೇ ಇರುತ್ತಿದ್ದಳು. ತನ್ನ ಮಾತನ್ನು ಕೇಳದ ಗಂಡನ ವಿರುದ್ಧ ರೋದನ, ಮೌನ ಮುಂತಾದ ಅಸಹಕಾರ ಚಳವಳಿಗಳ ಮೂಲಕ ಹೋರಾಡಿ ಹದ್ದುಬಸ್ತಿಗೆ ತರುತ್ತಿದ್ದಳು.

ಈ ಅಂಶವನ್ನು ಸೂಕ್ಷ್ಮವಾಗಿ ಗಮನಿಸಿರುವ ನಮ್ಮ ರಸಋಷಿ ಕುವೆಂಪು ಅವರು ತಮ್ಮ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯದ ಕೊನೆಯಲ್ಲಿ ರಾವಣನ ಬಾಯಿಂದ 'ನೀಮೆ ಗೆಲ್ವಿರ್ ತುದಿಗೆ' ಎಂದು ಹೇಳಿಸುತ್ತಾರೆ. ಗಂಡಸರು ಗಂಡಸೆಂಬ ದರ್ಪದಿಂದ ಎಷ್ಟೇ ಹಾರಾಡಿದರೂ ಕೊನೆಗೆ ಸ್ತ್ರೀಯರ ಸತ್ತ್ವಕ್ಕೆ ಮಣಿಯಲೇಬೇಕೆಂದು ಕುವೆಂಪು ಹೇಳುವ ಮಾತಿನಲ್ಲಿ ಮಾನವ ಕುಲದ ಸತ್ಯದ ನಡೆ ಸ್ತ್ರೀಪರವಿರುವುದರಿಂದ ಕೊನೆಗೆ ಅವರೇ ಗೆಲ್ಲಬೇಕಾಗುತ್ತದೆ ಎಂಬ ಆಶಯ ಅಡಗಿದೆ.

೦೧-೦೧-೨೦೦೯

# ಮರಣಮಯ ಕರ್ಮ

ಚರಿತ್ರೆಯಲ್ಲಿ ಸಂಭವಿಸಿರುವ ಯುದ್ಧಗಳನ್ನು ಗಮನಿಸಿದರೆ ಧರ್ಮದ ಹೆಸರಿನಲ್ಲಿ ನಡೆದಿರುವುದೇ ಹೆಚ್ಚು ಕಂಡುಬರುತ್ತದೆ. ಧರ್ಮಾತೀತ ಕಾರಣಗಳಾದ ಸಾಮ್ರಾಜ್ಯ ವಿಸ್ತರಣೆ, ಲೂಟಿ-ಕೊಳ್ಳೆಗಳಿಗಾಗಿ ನಡೆದ ಯುದ್ಧಗಳು ಕಡಿಮೆಯೇನಲ್ಲ. ಅಲೆಗ್ಸಾಂಡರ್, ಅಶೋಕನಂಥ ರಾಜರುಗಳು ಯುದ್ಧಮಾಡಿ ಮಾಡಿರಬಹುದಾದ ನರಮೇಧ 'ಧರ್ಮಯುದ್ಧ'ಗಳಿಂದಾದ ನರಮೇಧಗಳಿಗೆ ಹೋಲಿಸಿದರೆ ಕಡಿಮೆ. ಇಂಥ ಕಡೆ ಸೈನ್ಯ ಸೈನ್ಯದ ನಡುವೆ ಯುದ್ಧ ನಡೆಯುತ್ತಿತ್ತು. ಸೈನಿಕರು ಹತರಾಗುತ್ತಿದ್ದರು. ಇಲ್ಲವೆ ಗಾಯಗೊಳ್ಳುತ್ತಿದ್ದರು. (ಲೂಟಿ-ಕೊಳ್ಳೆಗಳಲ್ಲಿ ಪ್ರಾಣಹಾನಿಗಳು ಇರಲಿಲ್ಲವೆಂದಲ್ಲ, ಕಡಿಮೆ. ಅಲ್ಲಿ ಆಸ್ತಿ ಹಾನಿ ಅಧಿಕವಾಗಿರುತ್ತಿತ್ತು). ಹಾಗೆ ನೋಡಿದರೆ ಆಧುನಿಕ ಯುದ್ಧಗಳು ಚರಿತ್ರೆಯ ಸಾಮ್ರಾಜ್ಯದಾಹಿ ಯುದ್ಧಗಳಿಗಿಂತ ಅಪಾಯಕಾರಿ! ಆಧುನಿಕ ಬಾಂಬರ್‌ಗಳಿಂದ ಅಮಾಯಕ ಜನರ ಪ್ರಾಣಹಾನಿ ಮತ್ತು ಆಸ್ತಿಹಾನಿಯನ್ನು ಇವು ಉಂಟುಮಾಡುತ್ತವೆ. ಚರಿತ್ರೆಯ ಇಂಥ ಯುದ್ಧಗಳಿಗೆ (ಮಧ್ಯಯುಗವನ್ನು ಹೊರತುಪಡಿಸಿದಂತೆ) ಕೆಲವು ನೀತಿ ನಿಯಮಗಳಿದ್ದವು; ನೈತಿಕ ಕಟ್ಟುಪಾಡುಗಳಿದ್ದವು. ಅವನ್ನು ಮೀರುವ ನೈತಿಕ ಸ್ಥೈರ್ಯವನ್ನು ರಾಜರುಗಳಾಗಲಿ ಸೈನ್ಯಾಧಿಕಾರಿಗಳಾಗಲಿ ತೋರುತ್ತಿರಲಿಲ್ಲ.

ಧರ್ಮದ ಹೆಸರಿನಲ್ಲಿ ನಡೆಯುವ ಯುದ್ಧಗಳು ಮೇಲ್ನೋಟಕ್ಕೆ ಮಹಾಯುದ್ಧಗಳಂತೆ ತೋರುವುದಿಲ್ಲ. ಪ್ರಾಂತೀಯ ನೆಲೆಗಳಲ್ಲಿಯೇ ನಡೆದರೂ ಅವು ಅತ್ಯಂತ ಘೋರವಾಗಿರುತ್ತಿದ್ದವು. ಮತಾಂಧತೆಯೆನ್ನುವುದು ಮತಮೋಹವನ್ನು ಸೃಷ್ಟಿಸಿ, ಶ್ರೇಷ್ಠತೆಯ ಭ್ರಮೆ ಹುಟ್ಟಿಸಿ ಇತರರನ್ನು ಅತ್ಯಂತ ಕೀಳೆಂದು ಭಾವಿಸುವ ಮನೋನೆಲೆಗೆ ವ್ಯಕ್ತಿಯನ್ನು ತಂದು ಮುಟ್ಟಿಸುತ್ತದೆ. ವ್ಯಕ್ತಿಯ ಈ ಸ್ವಭಾವಕ್ಕೆ ಧರ್ಮದ ಮತ್ತು ಆ ಧರ್ಮಾಧಾರಿತ ಸೀಮಿತ ಚೌಕಟ್ಟಿನ ಧೋರಣೆಗಳು ಬೆಂಬಲಕ್ಕೆ ನಿಲ್ಲುತ್ತವೆ. ಧರ್ಮಪ್ರಚಾರ ಮತ್ತು ಅದರ ವಿಸ್ತರಣೆಯ ಹೆಸರಿನಲ್ಲಿ ಮತಾಂಧನೊಬ್ಬ ಹರಿಸುವ ರಕ್ತವು ಸತ್ಕ್ರಿಯೆಯೆಂದು ಪರಿಗಣಿತವಾಗುತ್ತದೆ. ಆ ಸಮಾಜದಲ್ಲಿ ಅವನಿಗೆ ಮಾನ ಸನ್ಮಾನಗಳಾಗುತ್ತವೆ ಮತ್ತು ಸತ್ತ ಮೇಲೆ ಅವನು ದೇವರಿಗೆ ಹತ್ತಿರದವನಾಗುತ್ತಾನೆ! ಹೀಗಾಗಿ ಅವನು ಧರ್ಮದ ಹೆಸರಿನಲ್ಲಿ ಮಾಡುವ ಕೊಲೆ, ಸುಲಿಗೆ, ಅತ್ಯಾಚಾರಗಳು ದೇವರ ಕೆಲಸವಾಗಿ ಬಿಡುತ್ತವೆ! ಧರ್ಮದ ಹೆಸರಿನಲ್ಲಿ ಮಾನವತೆಯ ಕೊಲೆ ಮಾಡುತ್ತಿದ್ದೇನೆ; ತನ್ನಂತೆಯೇ ಇರುವ, ಬೇರೆ ಮತಧರ್ಮ ತತ್ವಗಳಲ್ಲಿ ನಂಬಿಕೆಯಿರುವ ಮಾನವ ಕೂಡ ಅವನ ನಂಬಿಕೆಯಂತೆ ಬದುಕು ಮಾಡುವ ಸ್ವಾಭಾವಿಕ ಹಕ್ಕುಳ್ಳವನೆಂದು ತಿಳಿಯುವ ವಿವೇಕ ರಹಿತನಾಗಿದ್ದೇನೆಂದು ಧರ್ಮಾಂಧ ಭಾವಿಸುವುದೇ ಇಲ್ಲ. ಮಾನವನ ಮೂಲಭೂತ ಹಕ್ಕುಗಳನ್ನು ಅವನು ಮಾನ್ಯ ಮಾಡುವುದಿಲ್ಲ.

ಅವನದೇನಿದ್ದರೂ ಒಮ್ಮುಖ ದೃಷ್ಟಿ. ಬದುಕನ್ನು ಸಮಗ್ರವಾಗಿ ಹಲವು ಮಗ್ಗಲುಗಳಿಂದ ನೋಡುವ ದೃಷ್ಟಿಕೋನವನ್ನು ಅವನು ಬೆಳೆಸಿಕೊಂಡಿರುವುದಿಲ್ಲ. ಈ ದೃಷ್ಟಿ ನೆಲೆಯ ಧರ್ಮಯುದ್ಧಗಳು ಅತ್ಯಂತ ಕ್ರೂರವೂ ಅಮಾನವೀಯವೂ ಆಗಿದ್ದವು.

ಈ ಧರ್ಮಯುದ್ಧಗಳ ಸೋದರರಂತೆ ಕಾಣುವ ಜನಾಂಗೀಯ ಯುದ್ಧವನ್ನು ನಾವು ಸಾಮಾನ್ಯವೆಂದು ಬಗೆಯಲಾಗದು. ಜನಾಂಗದ ಆಧಾರದ ಮೇಲೆ, ವರ್ಣದ ಆಧಾರದ ಮೇಲೆ ಚಿಂತಿಸುವ ವ್ಯಕ್ತಿಗೆ ಅಹಂಕಾರ ತನಗೆ ತಾನೇ ಮೂಡುತ್ತದೆ. ಇದು ಶ್ರೇಷ್ಠತೆಯ ಅಹಂಕಾರ. ಇದು ಹಿಟ್ಲರನಿಗೆ, ಮುಸಲೋನಿಗೆ ಇತ್ತು. ಬಿಳಿಯರು ಕರಿಯರನ್ನು ಪ್ರಾಣಿಗಳಿಗಿಂತ ಕೀಳಾಗಿ ಕಂಡು ಅಮಾನವೀಯವಾಗಿ ನಡೆಸಿಕೊಂಡಿರುವುದು ಈ ಧೋರಣೆಯಿಂದಲೇ. ಎರಡನೆಯ ಮಹಾಯುದ್ಧ ನಡೆದದ್ದೇ ಈ ಜನಾಂಗೀಯ ಶ್ರೇಷ್ಠತೆಯ ಅಹಂಕಾರದಿಂದ. ಎರಡನೆಯ ಮಹಾಯುದ್ಧ ಕಾಲದಲ್ಲಿ ಯುದ್ಧಗಳಿಂದ ಮಡಿದವರ ಸಂಖ್ಯೆಗಿಂತ ಜನಾಂಗೀಯ ದ್ವೇಷಕ್ಕೆ ತುತ್ತಾಗಿ ಮಡಿದ ಆರ್ಯೇತರರ ಸಂಖ್ಯೆ ದ್ವಿಗುಣವಾಗಿತ್ತು ಎಂದು ಅಧ್ಯಯನವೊಂದು ತಿಳಿಸುತ್ತದೆ. ಆಗ ಯಹೂದಿ ಜನಾಂಗ 'ಆರ್ಯ'ರ ತುಳಿತಕ್ಕೆ ಸಲುಗಿ ವಿನಾಶದ ಹಂತಕ್ಕೆ ಬಂದಿತ್ತು!

ಕುವೆಂಪು ಅವರು ತಮ್ಮ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಯುದ್ಧವನ್ನು 'ದೈತ್ಯ ದುರ್ಧರ ಧೂರ್ತ ಮರಣಮಯ ಕರ್ಮ' ಎಂದು ಕರೆಯುತ್ತಾರೆ. ಹೌದು, ಅದು ಯಾವ ಉದ್ದೇಶದಿಂದಲೇ ಸಂಭವಿಸಲಿ, ಅದು ಸಹಿಸಲಸಾಧ್ಯವಾದ ಅತ್ಯಂತ ಕ್ರೂರ ಮರಣಮಯ ಕರ್ಮವೆಂಬುದರಲ್ಲಿ ಅನುಮಾನವಿಲ್ಲ. ಪರಸ್ಪರ ದ್ವೇಷ, ದುರಾಸೆ, ಪೂರ್ವಗ್ರಹ ಪೀಡಿತ ನಂಬಿಕೆ-ಭ್ರಾಂತುಗಳು ಈ ಅಮಾನವೀಯ ಕೃತ್ಯಕ್ಕೆ ಕಾರಣವಾಗುತ್ತವೆ. ಇಂಥ ಸಂದರ್ಭದಲ್ಲಿ ಬುದ್ಧನ ಪ್ರಶಾಂತ ಮುಖಮುದ್ರೆ, ಗಾಂಧೀಜಿಯವರ ಅಹಿಂಸಾತತ್ವ ನಮಗೆ ದಾರಿದೀಪಗಳಾಗಬೇಕು. ಸೋದರತ್ವ-ಸ್ನೇಹಸಂಬಂಧಗಳು ಮಾತ್ರ ನಮ್ಮನ್ನು ಉಳಿಸಬಲ್ಲವು. ಜಗತ್ತಿನ ನೆಮ್ಮದಿ ಈ ಸಂಬಂಧಗಳಲ್ಲಿ ಅರಳಬಲ್ಲದು.

೧೫-೦೧-೨೦೦೯

# ಬೀಜ ಮತ್ತು ಮಣ್ಣು

ಬೀಜದ ಪರಿಕಲ್ಪನೆ 'ಪುರುಷ' ಪರಿಕಲ್ಪನೆಗೆ, ಮಣ್ಣು 'ಪ್ರಕೃತಿ' ಪರಿಕಲ್ಪನೆಗೆ ಹತ್ತಿರವಾಗಿರುವಂತೆ ತೋರುತ್ತದೆ. ನಮ್ಮ ಪ್ರಕೃತಿ ಮತ್ತು ಪುರುಷ ಪರಿಕಲ್ಪನೆಗಳು ಗಂಡು ಹೆಣ್ಣುಗಳನ್ನು ಸಂಕೇತಿಸುವಂತೆ ಕಂಡುಬಂದರೂ ಅದರಾಚೆ ವಿಸ್ತರಿಸಿ ಸೃಷ್ಟಿಗೂ ಸೃಷ್ಟಿಶಕ್ತಿಗೂ ರೂಪಕವಾಗಿ ನಿಲ್ಲುತ್ತವೆ. ಸ್ತ್ರೀಪುರುಷ ಸಂಬಂಧಗಳು ಸಂಕುಲವನ್ನು ಮುಂದುವರಿಸುವ ಮಟ್ಟಿಗೆ ನಿಲ್ಲದೆ ಅದರಾಚೆ ಸಾಂಸ್ಕೃತಿಕ ಕ್ರಿಯೆಗಳಾಗಿ ಅಭಿವ್ಯಕ್ತಗೊಂಡಾಗ ಪ್ರಕೃತಿ ಪುರುಷ ಪರಿಕಲ್ಪನೆಗಳು ಅಲೌಕಿಕತೆಯ ಅಮೂರ್ತತೆಯ ಅನುಭವವನ್ನು ತಂದುಕೊಡುತ್ತವೆ. ಅದು ಕುವೆಂಪು ಅವರು ತಿಳಿಸುವಂತೆ ಸದಾ ಬೆರಗುಮೂಡಿಸುವ 'ಮೂಕವಾಗಿಹ ಗುಟ್ಟು'. ಇದೇ ಅರ್ಥನೆಲೆಯಲ್ಲಿ ನಮ್ಮ ಶರಣರು 'ಶರಣಸತಿ ಲಿಂಗಪತಿ' ಎಂದು ಕರೆದು ಅಲೌಕಿಕತೆಯನ್ನು ಲೌಕಿಕದಲ್ಲಿ ಅನುಭಾವಗೊಳಿಸಲು ಯತ್ನಿಸಿದರು.

ಸೃಷ್ಟಿಕ್ರಿಯೆಯಲ್ಲಿ ಬೀಜ ಮುಖ್ಯವೋ ಮಣ್ಣು ಮುಖ್ಯವೋ ಎಂಬ ಚರ್ಚೆ ಪುರಾತನವಾದರೂ ಆಧುನಿಕ ಕಾಲದಲ್ಲಿ ಇದು ಸೈದ್ಧಾಂತಿಕ ಚರ್ಚೆಯಲ್ಲಿ ನರಳಿರುವುದೂ ಉಂಟು. ಬೀಜ ಹೇಗಿದ್ದರೂ ಮಣ್ಣು ಸರಿ ಇಲ್ಲದಿದ್ದಲ್ಲಿ ಸೃಷ್ಟಿ ಸರಿಯಾಗಿ ಆಗುವುದಿಲ್ಲವೆಂಬ ವಾದ ಮತ್ತು ಮಣ್ಣು ಎಷ್ಟೇ ಫಲವತ್ತಾಗಿದ್ದರೂ ಬೀಜ ಸರಿ ಇಲ್ಲದಿದ್ದಲ್ಲಿ ಒಳ್ಳೇ ಬೆಳೆ ಬಾರದೆಂಬ ವಾದಗಳಲ್ಲಿ ಸತ್ಯಾಂಶವಿದೆ. ಗೋಪಾಲಕೃಷ್ಣ ಅಡಿಗರು ತಿಳಿಸುವಂತೆ ಬಿತ್ತ ಅಬಾಧಿತವಾಗಿ ಬೆಳೆಯಲು ಶಾಖ ಗಾಳಿ ನೀರು ಗೊಬ್ಬರಗಳು ಬೆಳಕಿನೊಡಗೂಡಿ ಹದವಾಗಿ ಮಣ್ಣಿನಲ್ಲಿ ಬೆರೆತಾಗ ಮಾತ್ರ ಸಾಧ್ಯವಾಗುತ್ತದೆ. ಇಲ್ಲಿ ವ್ಯಕ್ತಿತ್ವ ವಿಕಸನಕ್ಕೆ ಸೂಕ್ತ ಪರಿಸರ - ಆವರಣ ಬೇಕೆಂದು ಹೇಳುತ್ತಿರುವಂತೆ ಕಾಣುತ್ತದೆ.

ಕಮ್ಯುನಿಸ್ಟ್ ಸಿದ್ಧಾಂತವು 'ಬೀಜ ಪಾರಮ್ಯ ಸಿದ್ಧಾಂತ'ವನ್ನು ಊಳಿಗಮಾನ್ಯ ವ್ಯವಸ್ಥೆಗೆ ಹೋಲಿಸಿ ನಿರಾಕರಿಸಿತು. ಬೀಜ ಶ್ರೇಷ್ಠವೆಂಬ ವಾದ ಸಮೂಹಶ್ರೇಷ್ಠತೆಯನ್ನು ಅಲ್ಲಗಳೆದು, ಸಮೂಹಕ್ಕಿಂತ ವ್ಯಕ್ತಿ ದೊಡ್ಡವನೆಂದು ಧ್ವನಿಸುತ್ತದೆ. ವ್ಯಕ್ತಿಯು ಸಮೂಹದ ಒಂದು ಅಂಗವಾಗಿರುವುದರಿಂದ ಸಮೂಹದ ಹಿತದಲ್ಲಿ ವ್ಯಕ್ತಿಯ ಹಿತವು ಐಕ್ಯವಾಗಿರುತ್ತದೆಯಾದ್ದರಿಂದ ವ್ಯಕ್ತಿಗಿಂತ ಸಮೂಹ ಅರ್ಥಾತ್ ಮಣ್ಣು ದೊಡ್ಡದೆಂದು ತಿಳಿಹೇಳಲು ಪ್ರಯತ್ನಿಸಿತು. ಆದರೆ ಸಮೂಹ ಹಿತವೆಂಬ ಪರಿಕಲ್ಪನೆಯು ವ್ಯಕ್ತಿವ್ಯಕ್ತಿಗಿರುವ ಅನನ್ಯತೆಯನ್ನು, ಅದರಿಂದಾಗಿ ಸೃಷ್ಟಿಯಾಗುವ ವೈವಿಧ್ಯಮಯ ಸೃಷ್ಟಿಶೀಲತೆಯನ್ನು ಮತ್ತು ವ್ಯಕ್ತಿವಿಶೇಷತೆಯನ್ನು ಅಲ್ಲಗಳೆದಂತಾಗುತ್ತದೆ. ಮೇಲ್ನೋಟಕ್ಕೆ ಪ್ರಕೃತಿಯಲ್ಲಿರುವ ಎಲ್ಲಾ ಮರಗಿಡ ಹುಲ್ಲುಗಳು

ಹಸಿರುಮಯವಾಗಿರುವಂತೆ ಕಂಡರೂ ಅವುಗಳ ಹಸಿರು ತಮ್ಮ ರೂಪ ಅಭಿವ್ಯಕ್ತಿ ಆಕಾರ ಬಣ್ಣಗಳಲ್ಲಿ ಭಿನ್ನಭಿನ್ನವಾಗಿರುವುದಂತೂ ಕಡು ಸತ್ಯ. ಇದೇ ಅನನ್ಯತೆಯ ಸ್ವರೂಪ. ಈ ಅನನ್ಯತೆಯ ಬೆಲೆಯನ್ನು ಒಪ್ಪಿಕೊಂಡಾಗ ಬೀಜದ ಮಹತ್ವವನ್ನು ಪರಿಗಣಿಸಲೇಬೇಕಾಗುತ್ತದೆ. ಅಂದರೆ ವ್ಯಕ್ತಿಗಳಿಲ್ಲದೆ ಸಮೂಹ ಸೃಷ್ಟಿಯಾಗಲಾರದು. ಹಾಗೆಯೇ ಸಮೂಹದ ಕೆಲವೇ ಕೆಲವು ಧೀಮಂತ ಪ್ರತಿಭಾವಂತ ವ್ಯಕ್ತಿಗಳಿಂದ ನಾಯಕತ್ವ ಪ್ರಾಪ್ತಿಯಾಗುತ್ತದೆ; ಅಭಿವೃದ್ಧಿ ಸಾಧಿತವಾಗುತ್ತದೆ; ಸಂಸ್ಕೃತಿ ಸೃಷ್ಟಿಯಾಗುತ್ತದೆ. ಅನಂತರ ಅದನ್ನು ಸಮೂಹ ತನ್ನದೆಂದು ಸ್ವೀಕರಿಸಿ ಆನಂದಿಸುತ್ತದೆ. ಜಗತ್ತಿನ ನಾಗರಿಕತೆ ಬೆಳೆದಿರುವುದೇ ಇಂಥ ಪ್ರತಿಭೆಗಳಿಂದ ಎಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಆದರೆ ಒಬ್ಬ ಪ್ರತಿಭಾವಂತ ತನಗೆ ತಾನೇ ಸೃಷ್ಟಿಯಾಗಲಾರ. ಅವನ ಪ್ರತಿಭೆ ಮತ್ತು ಧೀಶಕ್ತಿಯ ಹಿಂದೆ ಒಂದು ಸಮೂಹದ ಪರಂಪರೆಯ ಅನುಭವ ಮತ್ತು ಬುದ್ಧಿಶಕ್ತಿಗಳು ಕೆಲಸ ಮಾಡಿರುತ್ತವೆ. ಅದನ್ನು ಹೀರಿ ಅರ್ಥಮಾಡಿಕೊಂಡು ವ್ಯಕ್ತಿತ್ವದ ನಿರ್ಮಾಣವಾಗಿರುತ್ತದೆ. ಸರಳವಾದ ಅರ್ಥದಲ್ಲೂ ವ್ಯಕ್ತಿಯ ಬೆಳವಣಿಗೆಯಲ್ಲಿ ತಂದೆ ತಾಯಿ, ಸ್ನೇಹಿತರು, ಊರು, ರಾಜ್ಯ ದೇಶಗಳ ನೆರವು ಇರುತ್ತದೆ. ಇಂಥ ನೆರವಿನ ಪ್ರೋತ್ಸಾಹದ ಬೆಂಬಲದಿಂದ ಅವನು ವಿಶೇಷವಾಗಿ ಕಂಗೊಳಿಸಲು ಸಾಧ್ಯವಾಗುತ್ತದೆ.

'ಮಣ್ಣು' ಶ್ರೇಷ್ಠವೆಂದು ವಾದಮಾಡಿ ಎಂಥ ಬೀಜವನ್ನಾದರೂ ಹಾಕಿದರೆ ಉತ್ತಮ ಬೆಳೆ ಬರಲು ಸಾಧ್ಯವೆ? ಮಣ್ಣು ಉತ್ತಮವಾಗಿರಬೇಕು; ಬೀಜವೂ ಶಕ್ತವಾಗಿರಬೇಕು. ಫಲವತ್ತಾದ ಭೂಮಿಗೆ ಸೂಕ್ತ ಗಾಳಿ ಬೆಳಕು ಗೊಬ್ಬರ ಹಾಕಿ ಶಕ್ತಿಶಾಲಿ ಆರೋಗ್ಯವಂತ ಬೀಜವನ್ನು ಬಿತ್ತಿದರೆ ಫಸಲು ಹುಲುಸಾಗುತ್ತದೆ. ನಮಗಿಂದು ಬೇಕಾಗಿರುವುದು ಇಂಥ ಹದತನ ತಾನೆ?

೨೯-೦೧-೨೦೦೯

# ಬದುಕು ಆಕಸ್ಮಿಕಗಳ ಮೊತ್ತ!?

'ಕಗ್ಗ'ದ ಕರ್ತೃ ಡಿ.ವಿ.ಜಿ. ಅವರು 'ಬದುಕು ಜಟಕಾ ಬಂಡಿ, ವಿಧಿ ಅದರ ಸಾಹೇಬ ಕುದುರೆ ನೀನ್, ಅವ ಪೇಳ್ದಂತೆ ಮದುವೆಗೋ ಮಸಣಕೋ ನಡೆ' ಎಂದು ಜೀವನ ಪರಿಕ್ರಮವನ್ನು ವ್ಯಾಖ್ಯಾನ ಮಾಡುತ್ತಾರೆ. ಇದು ಡಿವಿಜಿ ಅವರು ಸ್ಪಷ್ಟವಾಗಿ ನಂಬಿರುವ ಸಿದ್ಧಾಂತ. ಈ ಸಿದ್ಧಾಂತ-ನಂಬಿಕೆ ಪರಂಪರೆಯಿಂದ ಪಡೆದಿರುವಂಥದ್ದು. ಅವರ ಸಮಕಾಲೀನ ವೈಚಾರಿಕ ಚಿಂತನೆ ಕೂಡ ಅವರ ನಂಬಿಕೆಯನ್ನು ಅಲ್ಲಾಡಿಸಲು ವಿಫಲಗೊಂಡಿದೆ. ಈ ನಂಬಿಕೆಯು ನಮ್ಮ ಮತಧರ್ಮಗಳು, ಶಾಸ್ತ್ರಸಂಹಿತೆಗಳು ಉಂಟುಮಾಡಿರುವಂಥದ್ದು. ಈ ಪರಂಪರೆಯ ಶ್ರದ್ಧೆಯನ್ನು ಡಿವಿಜಿ ಅವರು ಆಕರ್ಷಕವಾಗಿ ಹೇಳುತ್ತಾರೆ.

ನಮ್ಮ ಭಾರತೀಯ ಮತಧರ್ಮ ನಂಬಿಕೆಯ ಪ್ರಕಾರ ಮಾನವನು ಈ ಭೂಮಿಯ ಮೇಲೆ ಹುಟ್ಟಿದಾಗಿನಿಂದ ಹಿಡಿದು ಸಾಯುವವರೆಗಿನ ಅವನ ಜೀವನವು ಪೂರ್ವನಿಶ್ಚಿತವಾಗಿರುತ್ತದೆ. ಅದನ್ನು 'ವಿಧಿಬರೆಹ' ಎಂಬ ಹೆಸರಿನಿಂದ ಕರೆಯುತ್ತಾರೆ. ನಾವು ಈ ಜನ್ಮದಲ್ಲಿ ಏನೇನು ಮಾಡಬೇಕು ಮತ್ತು ಹೇಗೆ ಇರಬೇಕೆಂಬುದನ್ನು ವಿಧಿ ನಮ್ಮ ಹಣೆಯಲ್ಲಿ ಬರೆದುಬಿಟ್ಟಿರುತ್ತಾನೆ. ಅದರಂತೆಯೇ ನಮ್ಮ ಜೀವನದ ನಡೆ ಸಾಗುತ್ತದೆ. ಯಾವುದೇ ಕಾರಣಕ್ಕೂ ಅದು ಬದಲಾಗದು. ವಿಧಿ ಸಾಹೇಬ, ನಾವು ಅವನು ಹೇಳಿದಂತೆ ಕೇಳುವ ಸ್ವಂತಿಕೆ ಇಲ್ಲದ ಕುದುರೆಗಳು! ಈ ಶಿಷ್ಟ ನಂಬಿಕೆಯನ್ನೇ ನಮ್ಮ ಗ್ರಾಮೀಣ ಸಂಸ್ಕೃತಿಯೂ ಅನುಕರಿಸಿದೆ. ಅಲ್ಲಿ ನಮ್ಮ ಬದುಕನ್ನು ನಿಯಂತ್ರಿಸಿ ಕರೆದೊಯ್ಯುವವಳು 'ಇದಿಯಮ್ಮ' (> ವಿಧಿಯಮ್ಮ ಇಲ್ಲಿ 'ವಿಧಿ' ಸ್ತ್ರೀಯಾಗಿರುವುದು ಬಹಳ ಮುಖ್ಯ ಅಂಶ. ಶಿಷ್ಟತೆಯಲ್ಲಿ ಸೃಷ್ಟಿಕರ್ತ ಗಂಡಸಾದರೆ ಗ್ರಾಮೀಣ ಸಂಸ್ಕೃತಿಯಲ್ಲಿ ಸೃಷ್ಟಿಮಾಡುವವಳು ಹೆಣ್ಣೇ ಆಗಿರುವುದು ಅಧ್ಯಯನಯೋಗ್ಯ ವಿಷಯ.) ಇಲ್ಲಿ ಪುರುಷಪ್ರಯತ್ನವನ್ನು ಸಂಪೂರ್ಣ ಇಲ್ಲಗೈಯಲಾಗಿದೆ. ಇಂಥ ನಂಬಿಕೆಗಳು ಮಾನವನನ್ನೂ ಸವಾಲುಗಳನ್ನು ಸ್ವೀಕರಿಸಿ, ಅವನ್ನು ದಿಟ್ಟವಾಗಿ ಹೆದರಿಸಿ ಮುನ್ನಡೆಯುವ ಛಲಗಾರರನ್ನಾಗಿ ಮಾಡಲಾರವು; ಅವನ ಕ್ರಿಯಾಶೀಲತೆ, ಕಲ್ಪನಾಶೀಲತೆಗಳನ್ನು ವಿಕಾಸಗೊಳಿಸಲಾರವು. ಅವನು ಕಾಣದ ಅಮೂರ್ತಶಕ್ತಿಯ ದಾಸನಾಗಿ, ಅವ್ಯಕ್ತ ಅದೃಶ್ಯ ಕಾಲ್ಪನಿಕ ಶಕ್ತಿಗಳಿಗೆ ಹೆದರಿ ಬಾಳುವಂಥವನಾಗುತ್ತಾನೆ. ಅವನ ಕನಸುಗಳನ್ನು ಸಾಕಾರಗೊಳಿಸುವಂಥ ಕ್ರಿಯೆಯನ್ನು ಅವನು ಮಾಡಲಾರ. ಏಕೆಂದರೆ ಅವನ ಕ್ರಿಯೆಗಳು ಅವನ ನಂಬಿಕೆಯ ಪ್ರಕಾರ ಆಗಲೇ ನಿಶ್ಚಿತಗೊಂಡಿರುತ್ತವೆ. ಈ 'ವಿಧಿ' ಪರಿಕಲ್ಪನೆಯು ವ್ಯಕ್ತಿಯನ್ನು ಅಧೀರನನ್ನಾಗಿಯೂ ಸಾಹಸರಹಿತನನ್ನಾಗಿಯೂ ಸೋಮಾರಿಯನ್ನಾಗಿಯೂ ಮಾಡಿಬಿಡುತ್ತದೆ.

ಪ್ರಖರ ವೈಚಾರಿಕ ಪ್ರಜ್ಞೆಯನ್ನು ತಮ್ಮ ಬರೆಹಗಳ ಮೂಲಕ ಪ್ರಕಟಿಸುವ ಕುವೆಂಪು ಅವರು ಕೂಡ ಈ 'ವಿಧಿ' ಕಲ್ಪನೆಯಿಂದ ಹೊರಬರುವುದಿಲ್ಲ. ಅವರು ಅದನ್ನು 'ಕರ್ಮ'ವೆಂದು ಕರೆದು ಮತ್ತಷ್ಟು ಜಟಿಲಗೊಳಿಸುತ್ತಾರೆ. 'ಮರಿಗೆ ಮರಿ ಇರ್ಕುಂ ಕರ್ಮದ ಪಾಂಗು' ಎಂದು ಕರೆದು 'ವಿಧಿಬರೆಹ'ದ ಜೊತೆಗೆ ಜನ್ಮಜನ್ಮಾಂತರದ ಕರ್ಮದ ಪಾಂಗು ನಿರಂತರ ಮರಿಹಾಕುತ್ತಾ ಮುಂದುವರಿಯುತ್ತದೆ ಎಂದು ಬದುಕನ್ನು ಗ್ರಹಿಸಲು ಯತ್ನಿಸುತ್ತಾರೆ.

ಆದರೆ ಬದುಕನ್ನು ಪೂರ್ವನಿಶ್ಚಿತ ಅಥವಾ ಪರನಿಯಂತ್ರಿತ ಎಂದು ಬಗೆಯುವ ಬದಲು ಈ ಜನ್ಮದಲ್ಲಿ ನಾವು ಜನಿಸಿದ್ದೇವೆ. ನನಗೆ ಹಿಂದಿನದು ಇಲ್ಲ, ಮುಂದಿನದೂ ಇಲ್ಲ, ಇರುವುದಷ್ಟೇ ಸತ್ಯ. ಇರುವಷ್ಟು ದಿನ ಅರ್ಥಪೂರ್ಣವಾಗಿ, ಬೇರೆಯವರಿಗೆ ಬಾಧೆಯಾಗದಂತೆ, ಕುಟುಂಬ ಮುಖಿ, ಸಮಾಜಮುಖಿ ದೃಷ್ಟಿಯಿಂದ ಬದುಕು ಮಾಡಿದರೆ, ಅಷ್ಟು ಸಾಕು. ಈ ಬದುಕಿನಲ್ಲಿ ಎದುರಾಗುವ ಪ್ರಕೃತಿ ವಿಶೇಷಗಳನ್ನು ಬೆರಗಿನಿಂದ ನೋಡುತ್ತಾ, ಅನುಭವಿಸುತ್ತಾ, ಶೋಧಿಸುತ್ತಾ ಸಾಗುವುದು ಜೀವನದ ಪರಿಕ್ರಮವಾಗಬೇಕು. ಆಗ ಜೀವನದಲ್ಲಿ ಆಸಕ್ತಿ ಮೂಡುತ್ತದೆ. ಇರುವಷ್ಟು ದಿನ ಅರ್ಥಪೂರ್ಣವಾದುವನ್ನು, ಈ ಸಮಾಜಕ್ಕೆ ಉಪಯೋಗವಾಗುವಂಥವನ್ನು ಏನನ್ನಾದರೂ ಮಾಡಬೇಕು, ಸಾಧಿಸಬೇಕು ಎಂಬ ಸಾತ್ವಿಕ ಹಠ ಮೂಡುತ್ತದೆ. ಕನಸುಗಳು ಅವತರಿಸುತ್ತವೆ. ಆ ಕನಸುಗಳನ್ನು ಸತ್ಯವಾಗಿಸುವಂಥ ಮನುಷ್ಯ ಛಲ ಮತ್ತು ಹೋರಾಟ ನಡೆಯುತ್ತದೆ. ಆಗ ಈ ನಾಗರಿಕತೆ, ಸಂಸ್ಕೃತಿ, ತಾಂತ್ರಿಕ ಪ್ರಕೃತಿ ಸಾಧ್ಯವಾಗುತ್ತದೆ.

ಹಾಗೆ ನೋಡಿದರೆ, ಬದುಕು ಪೂರ್ವನಿಶ್ಚಿತವಲ್ಲ. ವ್ಯಕ್ತಿಯ ಅದಮ್ಯ ಸ್ವೋಪಜ್ಞಶೀಲತೆಯ ಕ್ರಿಯಾರೂಪವದು; ಅವನು ತನ್ನ ಕನಸುಗಳನ್ನು ಸಾಕಾರಗೊಳಿಸಲು ನಡೆಸುವ ಸಾಹಸಗಾಥೆಯದು. ಈ ಪ್ರಕ್ರಿಯೆಯಲ್ಲಿ ಅವನು ಅಂದುಕೊಂಡದ್ದೆಲ್ಲ ಆಗದೆ ಹೋಗಬಹುದು; ಬೇರೆಯೇನೋ ಆಗಬಹುದು. ಅದು ವಿಧಿಲಿಖಿತವಲ್ಲ. ಬದುಕು ನಡೆಯುವುದು ಅದೇ ಬಗೆಯಲ್ಲಿ. ಅದೊಂದು ಆಕಸ್ಮಿಕ ಸನ್ನಿವೇಶ ಸಂದರ್ಭಗಳ ಮೊತ್ತ! ಈ ಸಂದರ್ಭಗಳನ್ನು ಅವನು ಹೇಗೆ ನಿಭಾಯಿಸುತ್ತಾನೆಂಬುದರ ಮೇಲೆ ವ್ಯಕ್ತಿಯ ಅನನ್ಯತೆ ನಿಂತಿರುತ್ತದೆ.

೧೨-೦೨-೨೦೦೯

# ಪ್ರತಿಭೆ ಮತ್ತು ಕಾಯಕ ತತ್ತ್ವ

ಪ್ರತಿಭೆಯನ್ನು ದೈವಕೃಪೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇದು ದೈವಪಾರಮ್ಯವನ್ನು ಒಪ್ಪಿ, ಅಪ್ಪಿಕೊಂಡಿರುವ ಎಲ್ಲ ಮತಧರ್ಮ ಸಿದ್ಧಾಂತಗಳು ಹೇಳುವ ಮಾತಾಗಿದೆ. ಆದರೆ ಪ್ರತಿಭೆ ಜನ್ಮಸಿದ್ಧವಾದುದಲ್ಲ. ಅದನ್ನು ಬಿತ್ತಿ ಬೆಳೆಯಬೇಕಾಗುತ್ತದೆ. ಈ ಬಿತ್ತಿ ಬೆಳೆಯುವ ಪ್ರಕ್ರಿಯೆಯಲ್ಲಿ ಅದು ಬಿತ್ತದಂತೆ ವ್ಯಕ್ತಿಯ ಆಂತರ್ಯದಲ್ಲಿರಬಹುದು. ಅದನ್ನೇ ಆಸ್ತಿಕ ಜಗತ್ತು ದೈವಕೃಪೆಯೆಂದು ಗುರುತಿಸಬಹುದು. ಆದರೆ ವ್ಯಕ್ತಿಯ ಆಂತರ್ಯದಲ್ಲಿರುವ ಪ್ರತಿಭೆಯು ಧಿಡೀರನೆ ಅವನಲ್ಲಿ ಮೂಡಿರದೆ, ಅದು ಅವನ ಪೂರ್ವಿಕರಿಂದ ಪರಂಪರಾಗತವಾಗಿ ಹರಿದು ಬಂದ ವಾಹಿನಿಯಾಗಿರುತ್ತದೆ. ಇದನ್ನು ಆಧುನಿಕ ಪರಿಭಾಷೆಯಲ್ಲಿ ವಂಶವಾಹಿ ಲಕ್ಷಣವೆಂದು ಭಾವಿಸಬಹುದು. ಈ ವಂಶವಾಹಿ ಗುಣಗಳು ಕೂಡ ತಲೆ ತಲೆಮಾರುಗಳಲ್ಲಿ ಕಟ್ಟಿ ಬೆಳೆಸಿ ಸಂಪಾದಿಸಿದ ಅಂಶಗಳಾಗಿರುತ್ತವೆ. ಅಂದಮೇಲೆ ಪ್ರತಿಭೆಯನ್ನು - ಅನೇಕ ಕಲಾಭಿವ್ಯಕ್ತಿಗಳಲ್ಲಿ, ಜ್ಞಾನ ತಂತ್ರಜ್ಞಾನಗಳಲ್ಲಿ - ಶ್ರಮದ ಮೂಲಕ ಗಳಿಸಿಕೊಳ್ಳಬಹುದು ಎಂದಾಯಿತು. ಆದರೆ ಬಿತ್ತರೂಪದಲ್ಲಿರುವ ಪ್ರತಿಭೆಯನ್ನು ಶಿಸ್ತು-ಶ್ರಮದ ಮೂಲಕ ಬೆಳೆಸುವ ಪ್ರಯತ್ನ ಮಾಡದಿದ್ದರೆ ಅದು ಪ್ರಕಾಶಗೊಳ್ಳುವುದೇ ಇಲ್ಲ.

ಪ್ರತಿಭೆ ಪ್ರಕಾಶಗೊಳ್ಳಬೇಕಾದರೆ ಅದಕ್ಕೆ ಶ್ರಮಶಕ್ತಿ ಪೂರಕಧಾತುವಾಗಿ ಕೆಲಸಮಾಡುತ್ತದೆ. ಶ್ರಮ ಹೆಚ್ಚು ಹೆಚ್ಚು ಮಾಡಿದಂತೆಲ್ಲಾ ಅದು ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಉತ್ಪಾದನೆ ಹೆಚ್ಚಾದಂತೆಲ್ಲಾ ಸಮಾಜದ ಸಂಪತ್ತು ಅಧಿಕಗೊಂಡು ಸುಖೀಸಮಾಜದ ನಿರ್ಮಾಣವಾಗುತ್ತದೆ. ಈ ಸುಖೀಸಮಾಜದ ನಿರ್ಮಾಣಕ್ಕೆ ಶ್ರಮಕ್ಕೆ ತಕ್ಕ ಫಲಾಪೇಕ್ಷೆ ಇರುತ್ತದೆ. ಇದನ್ನು ನೇರ್ಪುಮಾಡಲು ವ್ಯಕ್ತಿಗೆ ಬುದ್ಧಿ ಚುರುಕಾಗಿರಬೇಕಾಗುತ್ತದೆ. ಇಂಥ ಚುರುಕು ಬುದ್ಧಿ ಅರಳಲು ವ್ಯಕ್ತಿಯ ಪ್ರತಿಭೆ ನೆರವು ನೀಡುತ್ತದೆ. ಒಂದು ಸಮಾಜದ ಸಂಸ್ಕೃತಿ, ನಾಗರಿಕತೆಗಳನ್ನು ಕಟ್ಟಲು ಬುದ್ಧಿ ಮತ್ತು ಪ್ರತಿಭೆಗಳು ಪರಸ್ಪರ ಕೈಹಿಡಿದು ನಡೆಯಬೇಕಾಗುತ್ತದೆ. ಇವು ಅರಳಲು ಸದಾ ಶ್ರಮದ ತಳಹದಿ ಇರಬೇಕಾಗುತ್ತದೆ.

ಕೇವಲ ಪ್ರತಿಭೆಯೊಂದರಿಂದಲೇ ಸುಖೀಸಮಾಜ ನಿರ್ಮಾಣವಾಗುವುದಿಲ್ಲ. ಸುಖೀಸಮಾಜದ ನಿರ್ಮಾಣದಲ್ಲಿ ಅಲ್ಲಿನ ಜನರ ದುಡಿಮೆ ಬೇಕು. ಅವರು ದುಡಿಮೆಯಿಂದ ತಮ್ಮ ಮೈಮನಗಳನ್ನು ತಣಿಸದಿದ್ದರೆ ಸಂಪತ್ತು ಸೃಷ್ಟಿಯಾಗುವುದಿಲ್ಲ. ಅಂಥ ಸಮಾಜದಲ್ಲಿ ಬಡತನ, ಅಸಮಾನತೆ, ಅನೈತಿಕತೆಗಳು ಸೃಷ್ಟಿಯಾಗುತ್ತವೆ. ಅಲ್ಲಿನ ಜನರು ಸೋಮಾರಿಗಳಾಗುತ್ತಾರೆ; ಅವರ ಕಲ್ಪನಾಶಕ್ತಿ ಕುಂಠಿತವಾಗುತ್ತದೆ. ಅವರು ಪ್ರತಿಯೊಂದಕ್ಕೂ

ಪರಾವಲಂಬಿಗಳಾಗಬೇಕಾಗುತ್ತದೆ. ಅವರಿಗೂ ಭೋಗಕ್ಕೂ ನಿಕಟವಾದ ಸಂಬಂಧವೇರ್ಪಟ್ಟು ನೈತಿಕ ನೆಲೆಗಟ್ಟು ಕುಸಿಯುತ್ತದೆ.

ಯುರೋಪಿನಿಂದ ವಲಸೆಹೋದ ನವ ಅಮೇರಿಕನ್ನರಿಗೆ ಪ್ರತಿಭೆಯಿತ್ತು; ಆ ಪ್ರತಿಭಾ ಜನ್ಯವಾದ ಬುದ್ಧಿ ಇತ್ತು; ಬದುಕನ್ನು ಕಟ್ಟಬೇಕೆಂಬ ಛಲವಿತ್ತು. ಅದಕ್ಕಾಗಿ ನಿರಂತರವಾಗಿ ಮುನ್ನೂರು ವರ್ಷಗಳ ಕಡುತರ ದುಡಿಮೆಯನ್ನು ಮಾಡಿದರು. ಜಗತ್ತಿನ ಅತ್ಯುತ್ತಮ ಶ್ರೀಮಂತ ರಾಷ್ಟ್ರವನ್ನಾಗಿ ಮಾಡಿದರು. ಎಲ್ಲರಿಂದ 'ದೊಡ್ಡಣ್ಣ' ಎಂದು ಕರೆಸಿಕೊಂಡರು, ಯಜಮಾನಿಕೆ ನಡೆಸಿದರು. ಆದರೆ, ಆದರೆ ಇಂದೇನಾಗುತ್ತಿದೆ? ಅದರ ಅರ್ಥಸೌಧ ಕುಸಿಯುತ್ತಿದೆ!

ಏಕೆ ಹೀಗಾಯಿತು? ಒಂದು ಕಾಲದ ಶೋಧಕರು, ಸಂಶೋಧಕರು, ಮಹಾನ್ ಶ್ರಮಜೀವಿಗಳು ಹೀಗೇಕಾದರು? ಅದಕ್ಕೆ ಮೂಲಕಾರಣ ಅವರು ಶ್ರಮವನ್ನು ಮರೆಯ ತೊಡಗಿದ್ದೇ ಆಗಿದೆ. ತಮ್ಮಲ್ಲಿ .ಶ್ರೀಮಂತಿಕೆಯಿದೆಯೆಂಬ ಅಹಂಕಾರದಿಂದ ಕೌಟುಂಬಿಕ ಮೌಲ್ಯವನ್ನು, ಸಮುದಾಯ ಮೌಲ್ಯವನ್ನು ಹಾಗೂ ಶ್ರಮದ ಮೌಲ್ಯವನ್ನು ಕಡೆಗಣಿಸಿದರು. ತಮ್ಮ ಪ್ರತಿಯೊಂದು ಕೆಲಸ ಕಾರ್ಯಗಳಿಗೂ 'ಗುಲಾಮ'ರನ್ನು ನೇಮಕಮಾಡಿಕೊಂಡರು. ದುಡಿಮೆಯ ಮನೋಧರ್ಮವನ್ನೂ ಕಡಿದುಕೊಂಡರು. ಆಗ ಸಹಜವಾಗಿ ಶ್ರಮದಿಂದ ದೂರಾದ ಪ್ರತಿಭೆಗೆ ಮಂಕು ಬಡಿಯಿತು; ಬುದ್ಧಿ ಕುಂಟತೊಡಗಿತು. ಆರ್ಥಿಕ ಕುಸಿತಕ್ಕೊಳಗಾಗಿ ಚಿಂತಿತರಾದರು.

ಈ ದೃಷ್ಟಿಯಿಂದ ನಮ್ಮ ಬಸವಾದಿ ಶರಣರು ಪ್ರತಿಪಾದಿಸಿದ ಕಾಯಕ ತತ್ತ್ವದ ನೆಲೆಯನ್ನು ಅರ್ಥಮಾಡಿಕೊಳ್ಳಬೇಕು. 'ಕಾಯ'ವನ್ನು ಕಾಯಕದಿಂದ ದಂಡಿಸದಿದ್ದಲ್ಲಿ ಮೈಮನಗಳೂ ಅರಳವುದಿಲ್ಲ; ಸಮಾಜವೂ ಅರಳವುದಿಲ್ಲ. ನಿರಂತರ ಕಾಯಕದಲ್ಲಿ ನಿರತನಾದಾಗ ಮಾತ್ರ ಪ್ರತಿಭೆಗೆ ಬೆಲೆ ಬರುತ್ತದೆ. ಕಾಯಕದಿಂದ ಬಾರದ ಅನ್ನ ನಿಕೃಷ್ಟವೆಂಬ ಮನೋಧರ್ಮ ಮೂಡುತ್ತದೆ.

೨೬-೦೨-೨೦೦೯

# ಭೌತವಾದಿ - ಎರಡು ನೆಲೆ

ಐಹಿಕ ಸುಖ ಮತ್ತು ಪ್ರಾಪಂಚಿಕ ವಿಷಯಗಳನ್ನು ಜೀವನದಲ್ಲಿ ಅತ್ಯಂತ ಮುಖ್ಯವೆಂದು ಪರಿಗಣಿಸಿ, ಬದುಕು ಮಾಡುವವನನ್ನು 'ಭೌತವಾದಿ'ಯೆಂದು ಕರೆಯುತ್ತಾರೆ. ಇವನನ್ನು ಜಡದ್ರವ್ಯವಾದಿ, ಭೌತಿಕ ರೂಪವಾದಿ, ಸುಖವಾದಿ, ಭೋಗವಾದಿ - ಮುಂತೆಲ್ಲಾ ಮಾತುಗಳಲ್ಲಿ ವ್ಯಾಖ್ಯಾನಿಸಲು ಪ್ರಯತ್ನಿಸಲಾಗಿದೆ. ಚರಿತ್ರೆಯ ಧರ್ಮಶಾಸ್ತ್ರಗಳು, ನೀತಿಶಾಸ್ತ್ರಗಳು ಇವನನ್ನು ಆದರದಿಂದ ಕಂಡಿಲ್ಲ. ಅವನ ಐಹಿಕ ಭೋಗಲಾಲಸೆಗಳನ್ನು ಗಮನಿಸಿ ಅವನನ್ನು ಎರಡನೆಯ ಸ್ತರದಲ್ಲೇ ಇಟ್ಟು ನೋಡಿವೆ. ಅವಕ್ಕೆ ಸಮುದಾಯ ಮತ್ತು ಪಾರಮಾರ್ಥ ಹಿತದೃಷ್ಟಿಗಳೇ ಮುಖ್ಯ. ವ್ಯಕ್ತಿಗೆ ಸಾಮಾಜಿಕ ಬದ್ಧತೆ ಮತ್ತು ಜವಾಬ್ದಾರಿಗಳಿರಬೇಕು. ಅವನು ಕೇವಲ ತನಗೋಸ್ಕರ ಬದುಕಬಾರದು. ಕೌಟುಂಬಿಕ ಜವಾಬ್ದಾರಿ, ಸಾಮಾಜಿಕ ಜವಾಬ್ದಾರಿಗಳನ್ನ ಪ್ರೀತಿಯ ಕರ್ತವ್ಯಗಳೆಂದು ಭಾವಿಸಿ, ಅವುಗಳನ್ನು ನಿಭಾಯಿಸಬೇಕು. ತನ್ಮೂಲಕ ಸಮುದಾಯದಲ್ಲಿ ತಾನೂ ಒಂದಾಗಬೇಕು- ಈ ಅಂಶಗಳನ್ನು ಭೌತವಾದಿಗಳನ್ನು ಟೀಕಿಸುವವರು ಎತ್ತಿಹಿಡಿಯುತ್ತಾರೆ.

ಅಂದಮಾತ್ರಕ್ಕೆ ವ್ಯಕ್ತಿ ತನ್ನ ಹಿತ, ಸುಖವನ್ನು ಸಂಪೂರ್ಣ ನಿರಾಕರಿಸಬೇಕೆಂದೇನೂ ಅರ್ಥವಲ್ಲ. ಮನುಷ್ಯನಾಗಿ ಹುಟ್ಟಿದ ಮೇಲೆ ಅರ್ಥಕಾಮಗಳನ್ನು ಧರ್ಮಮಾರ್ಗದಲ್ಲಿ ಅನುಭವಿಸಬೇಕು. ಅವು ಇತರರಿಂದ ಲಪಟಾಯಿಸಲ್ಪಟ್ಟವು ಎನ್ನಿಸಿಕೊಳ್ಳಬಾರದು. ಸುಖವನ್ನ ತ್ಯಜಿಸಿ ಸಂಪೂರ್ಣ ಸಂನ್ಯಾಸ ಸ್ವೀಕರಿಸಬೇಕೆಂದೇನೂ ಅಲ್ಲ. ಅದಕ್ಕೊಂದು ಮಿತಿ ಇರಬೇಕು ಸುಖದ ಪರಿಭಾವನೆ ಮತ್ತು ಅನುಭಾವದ ಹಂತಗಳು ದೈಹಿಕ ಮತ್ತು ಐಹಿಕ ನೆಲೆಗಳನ್ನು ಮೀರಿ ವಿಸ್ತರಿಸಬೇಕು. ತನ್ನ ಸುಖದ ಅನುಭಾವವನ್ನು ಕುಟುಂಬದ ಆನಂದದಲ್ಲಿ, ಸಮುದಾಯದ ಆನಂದದಲ್ಲಿ ಪಡೆಯುವ ಮನಸ್ಥಿತಿಗೆ ವ್ಯಕ್ತಿ ಬೆಳೆದಾಗ ಸುಖದ ಸ್ವೀಕಾರ ಮತ್ತು ಪರಿಕಲ್ಪನೆಗಳೇ ಬೇರೆಯಾಗಿ ತೋರುತ್ತವೆ. ಅದು ಮಗುವಿನ ಮುಗ್ಧ ನಗುವನ್ನು ಕಂಡಾಗ, ಪಶುಪಕ್ಷಿಗಳ ಗಿಡಮರಗಳ ನಿಸರ್ಗಸಹಜ ಸೌಂದರ್ಯವನ್ನು ಕಂಡಾಗ ಬೆಟ್ಟಗುಡ್ಡ ಕಾಡು ಮಳೆ-ಮೋಡಗಳನ್ನ ಕಂಡಾಗ, ಸೂರ್ಯ ಚಂದ್ರರ ನೆರಳು ಬೆಳಕಿನಾಟಗಳನ್ನು ಕಂಡಾಗ ಆಗುವ ಆನಂದದ ಎತ್ತರಕ್ಕೆ ಬೆಳೆಯುತ್ತದೆ. ಇದು ರಸಸಿದ್ಧಿ, ಅಧ್ಯಾತ್ಮದ ಅನುಭೂತಿ.

ಈ ಸ್ತರದ ಆನಂದ - ಅನುಭೂತಿಗಳು ಭೌತವಾದಿಯ ಅನುಭವಕ್ಕೆ ಬರಲಾರವು. ಅವನ ಸುಖದ ಪರಿಕಲ್ಪನೆಯೆಲ್ಲವೂ ದೈಹಿಕ ನೆಲೆಯ ಸುತ್ತಮುತ್ತ ಹರಿದಾಡುತ್ತಿರುತ್ತವೆ. ಅದರಾಚೆಯ ಮುಖಗಳು ಅವನಿಗೆ ಕಾಣುವುದಿಲ್ಲ. ಒಂದು ಪಕ್ಷ ಕಂಡರೂ ಅವು

ಅಮುಖ್ಯವಾಗಿಯೂ ತಿರಸ್ಕಾರಯೋಗ್ಯವಾಗಿಯೂ ಕಾಣುತ್ತವೆ. ಇವನು ಇತರರ ಸಂಪತ್ತು ಮತ್ತು ಸುಖವನ್ನು ಕಬಳಿಸಲು ನೋಡುತ್ತಾನೆ. ಒಂದು ಬಗೆಯ ಅತಿಭೋಗದ ನಡೆ ಇವನದು. ಇದರಿಂದಾಗಿ ಸಂಗ್ರಹಬುದ್ಧಿ ಮತ್ತು ಲೋಭತನ ಇವನ ವ್ಯಕ್ತಿತ್ವವನ್ನು ಆಳಲು ಆರಂಭಿಸುತ್ತವೆ. ಇವನ ಆಸಕ್ತಿ ಮತ್ತು ಗುರಿಗಳೆಲ್ಲವೂ ಇದೇ ಮೂಲದಲ್ಲಿ ಕೇಂದ್ರೀಕೃತವಾಗಿ ಸಮುದಾಯದಲ್ಲಿ ಇದ್ದೂ ಇಲ್ಲದಂತೆ ಜೀವಿಸಿ ಏಕಾಂಗಿಯಾಗಿಬಿಡುತ್ತಾನೆ.

ಕೆಲವು ಭೌತವಾದಿಗಳಿರುತ್ತಾರೆ; ಅವರು ಮಹಾಸ್ವಾರ್ಥಿಗಳಾಗಿರುತ್ತಾರೆ. ಅವರು ಸಂಪಾದನೆ ಮಾಡಿದ್ದನ್ನು, ದುರಾಶೆಯಿಂದ ಸಂಗ್ರಹಿಸಿದ್ದನ್ನು ಅವರೇ, ಅವರು ಮಾತ್ರವೇ ಭೋಗಿಸಲು ಇಷ್ಟಪಡುತ್ತಾರೆ. ತನ್ನ ಮನೆ, ಮಡದಿ, ಮಕ್ಕಳು, ಅಣ್ಣ ತಮ್ಮ, ಅಪ್ಪ ಅಮ್ಮ ಅವರ ಕಣ್ಣಿಗೆ ಕಾಣುವುದೇ ಇಲ್ಲ. ಅವರನ್ನೆಲ್ಲಾ ಉಪವಾಸ ಕೆಡವಿ, ಅವರ ಮನೋ ನೆಮ್ಮದಿಯನ್ನೂ ಹಾಳುಮಾಡಿ ತಾವು ಮಾತ್ರ ಸುಖ ಅನುಭವಿಸುತ್ತಾರೆ. ಇವರ ಲೋಭ ವ್ಯಕ್ತಿಕೇಂದ್ರಿತವಾಗಿ ಸುಖದ ವೃತ್ತದೊಳಗೆ ಸುತ್ತಿ ಸುತ್ತಿ ಆತ್ಮರತಿಯಲ್ಲಿ ತೇಲುತ್ತಿರುತ್ತದೆ.

ಮತ್ತೆ ಕೆಲವು ಭೌತವಾದಿಗಳಿರುತ್ತಾರೆ: ಅವರು ಕೇವಲ ಕಬಳಿಕೆಯ ಗುಣವುಳ್ಳವರಾಗಿರುತ್ತಾರೆ. ಸಂಗ್ರಹವೇ ಅವರ ಬಾಳಿನ ಪರಮಗುರಿ. ಅದು ಹುಲ್ಲಿರಲಿ ಕಬ್ಬಿಣವಿರಲಿ ಚಿನ್ನವಿರಲಿ ಸಂಗ್ರಹಿಸಬೇಕು, ಅಷ್ಟೆ. ಅದನ್ನು ಅವರು ಬಳಸುವುದೇ ಇಲ್ಲ. ಮನೆಯವರು ಅನುಭೋಗಿಸಲು ಅವಕಾಶ ನೀಡುವುದಿಲ್ಲ. 'ತಾನೂ ತಿನ್ನ ಪರರಿಗೂ ತಿನ್ನಲು ಬಿಡ' - ವರ್ಗಕ್ಕೆ ಸೇರಿದವರು ಇವರು. ತಮ್ಮಲ್ಲಿ ಶೇಖರವಾದ ಸಂಪತ್ತನ್ನು ನೋಡಿ ನೋಡಿ ಆನಂದಪಡುವ ವಿಕೃತ ಮನಸ್ಸಿನ ಇವರಿಂದ ಸಮಾಜಕ್ಕಾಗಲಿ ಕುಟುಂಬಕ್ಕಾಗಲಿ ಪ್ರಯೋಜನವಿಲ್ಲ.

ಅತಿಭೌತಿಕವಾದವೊಂದು ಮನೋರೋಗ, ಅದು ಒಳಗಿನಿಂದ ಸುಡುತ್ತಾ ಹೋಗುತ್ತದೆ. ಅವರು ಅರಿವನ್ನು ಎಚ್ಚರಿಸಿಕೊಂಡ 'ಪುರಂದರದಾಸ'ರಾದರೆ ಮಾತ್ರ ಮನುಷ್ಯರಾಗಲು ಸಾಧ್ಯ!

೧೨-೦೩-೨೦೦೯

# ಗರತಿಯ ಅಡುಗೆ ಮನೆ ಚಂದ. . .

ಇದೊಂದು ಜನಪದ ಗಾದೆ. ಜನಸಮುದಾಯದ ಅನುಭವೋಕ್ತಿ. ಒಂದು ಜನಸಮುದಾಯ ತನ್ನ ಚರಿತ್ರೆಯುದ್ದಕ್ಕೂ ಜೀವನ ಸಂವೇದನೆ ಮತ್ತು ಸೂಕ್ಷ್ಮ ದೃಷ್ಟಿಯ ಮೂಲಕ ಕಂಡುಕೊಂಡ ಅನುಭವ ಸತ್ಯವನ್ನು ಸಾಂದ್ರರೂಪದಲ್ಲಿ ಆಕರ್ಷಕವಾಗಿ ಅಭಿವ್ಯಕ್ತಿಸುವ ಪರಿಯನ್ನು ಗಾದೆಗಳಲ್ಲಿ ಕಾಣಬಹುದು. ಅವು ಅನುಭವ ಸತ್ಯವಾದುದರಿಂದ ಅವು ಸುಳ್ಳಾಗಲಾರವು. ಪರಿಶೀಲನೆ ಮತ್ತು ಪರೀಕ್ಷೆಗಳಲ್ಲಿ ಅವು ತೇರ್ಗಡೆಗೊಂಡಿರುತ್ತವೆ. ಇಂಥ ಅನುಭವ ಸತ್ಯದ ಪರಿಪಾಕ ಈ ಗಾದೆ: 'ಗರತಿಯ ಅಡುಗೆ ಮನೆ ಚಂದ; ಹಾದರಗಿತ್ತಿಯ ನಡುಮನೆ ಚಂದ'.

ಗರತಿಗೆ ಹೊರ ಅಲಂಕಾರಕ್ಕಿಂತ ಒಳಗಿನ ಶುದ್ಧತೆ ಮುಖ್ಯ. ಅವಳಿಗೆ ತನ್ನ ಗಂಡ ಮಕ್ಕಳು ಅತ್ತೆಮಾವಂದಿರ ಆರೋಗ್ಯ ಮುಖ್ಯ. ಅದಕ್ಕಾಗಿ ಅವಳು ಅಡುಗೆ ಮನೆಯ ಶುಚಿತ್ವದ ಕಡೆ ಗಮನ ಕೊಡುತ್ತಾಳೆ. ನಡುಮನೆಯ ಅಲಂಕಾರಕ್ಕೆ ನಂತರದ ಸ್ಥಾನವನ್ನು ನೀಡುತ್ತಾಳೆ. ಆದರೆ ಹಾದರಗಿತ್ತಿಗೆ ಅಡುಗೆ ಮನೆಯ ಶುಚಿತ್ವ ಮುಖ್ಯವಾಗಲಾರದು. ಅವಳು ಗ್ರಾಹಕರನ್ನು ಸೆಳೆಯಬೇಕು, ಅದಕ್ಕಾಗಿ ಅವಳು ನಡುಮನೆಯನ್ನು ಶೃಂಗರಿಸಿಟ್ಟುಕೊಳ್ಳುತ್ತಾಳೆ. ಅವಳ ಅಂತರಂಗ ಅರ್ಥಲಾಲಸೆಯಿಂದ ಕೂಡಿರುತ್ತದೆ. ಗ್ರಾಹಕನ ಒಳಿತುಕೆಡುಕುಗಳ ಬಗ್ಗೆ ಅವಳು ಚಿಂತಿಸಲಾರಳು. ಅವನ ಅರ್ಥಶಕ್ತಿಯ ಕಡೆ ಮಾತ್ರ ಅವಳ ಗಮನ! ಅವಳ ಮನಸ್ಸು ಮಲಿನವಾಗಿರುತ್ತದೆ, ಆದರೆ ಅತ್ಯಂತ ಆಕರ್ಷಕವಾಗಿರುತ್ತದೆ.

ಈ ಅನುಭವೋಕ್ತಿ ಸ್ತ್ರೀಯ ರೂಪಕದೊಡನೆ ಮಾತನಾಡುತ್ತಿದ್ದರೂ ಇಲ್ಲಿನ ಅನುಭವ ಸತ್ಯವನ್ನು ಒಂದು 'ಲಿಂಗ'ಕ್ಕೆ ಸೀಮಿತಗೊಳಿಸಿ ಅರ್ಥಮಾಡಿಕೊಳ್ಳಬಾರದು. ಇದೊಂದು ಮನಸ್ಥಿತಿ. ಈ ಮನಸ್ಥಿತಿ 'ಲಿಂಗರೂಪ'ವನ್ನು ಮೀರಿ ಮನುಷ್ಯ ಮನೋವ್ಯಾಪಾರಗಳನ್ನು ಗುರುತಿಸುತ್ತದೆ. ಜೊತೆಗೆ ಜಗತ್ತಿನಲ್ಲಿ ಚರಿತ್ರೆಯುದ್ದಕ್ಕೂ ಅರ್ಥಸಂಸ್ಕೃತಿಯು ವರ್ತನೆ ಮಾಡಿರುವ ರೀತಿಯನ್ನು ಅರ್ಥಮಾಡಿಸಲು ಯತ್ನಿಸುತ್ತದೆ. ಇಂದು ಆಧುನಿಕ ಮಾರಾಟ ಕೇಂದ್ರಗಳು ಅನುಸರಿಸುತ್ತಿರುವುದು ಈ ತಂತ್ರಗಾರಿಕೆಯನ್ನೇ! ಅವಕ್ಕೆ ವಸ್ತುವಿನ ಅಂತಸ್ಸತ್ತ್ವಕ್ಕಿಂತ ಅದರ ಹೊರ ಆವರಣದ ಸೌಂದರ್ಯ ಮುಖ್ಯ. ಅರ್ಥಸಂಸ್ಕೃತಿಗೆ ಕಂಟೆಂಟ್‌ಗಿಂತ ಕಂಟೈನರ್ ಮುಖ್ಯ! ಆಧುನಿಕ ಮಾರಾಟಶಾಸ್ತ್ರಜ್ಞರು ಕಂಟೆಂಟ್ ಮತ್ತು ಕಂಟೈನರ್ ಎರಡೂ ಮುಖ್ಯ ಎಂದು ವಾದಿಸಿದರೂ ವಾಸ್ತವವಾಗಿ ನಡೆಯುತ್ತಿರುವುದೇ ಬೇರೆ! ಆಧುನಿಕ ಮಾಲ್‌ಗಳು ಜಗಮಗನೆ ಹೊಳೆಯುತ್ತಿರುತ್ತವೆ; ದಿನನಿತ್ಯ ಮಾಧ್ಯಮಗಳಲ್ಲಿ ಬಿತ್ತರಗೊಳ್ಳುವ ಸರಕುಗಳು ಸುಂದರ ರೂಪದರ್ಶಿಯರ ಮೂಲಕ ಆಕರ್ಷಕವಾಗಿ ಗಮನ ಸೆಳೆಯುವಂತೆ ತೋರಲಾಗುತ್ತದೆ. ಒಳಗಿನ

ವಸ್ತುವಿನ ಸತ್ತ್ವಕ್ಕಿಂತ ಹೊರಗಿನ ರೂಪದ ಸೆಳೆತಕ್ಕೆ ಗ್ರಾಹಕ ಮರುಳಾಗುವಂತೆ ಹುನ್ನಾರ ಮಾಡಲಾಗುತ್ತದೆ. ಈ ತಂತ್ರದ ಹಿಂದೆ ಸಮುದಾಯದ ಹಿತವಿಲ್ಲ; ಒಂದು ಸಮುದಾಯದ ಆರೋಗ್ಯ, ಶುಚಿತ್ವದ ಬಗ್ಗೆ ಚಿಂತನೆಯಿಲ್ಲ. ಅಲ್ಲಿ ಕೇವಲ ಅರ್ಥದಾಹವಿದೆ. ಹೇಗಾದರೂ ತಮ್ಮ ಸರಕನ್ನು ಬಿಕರಿ ಮಾಡಿ ಹಣಸಂಪಾದನೆ ಮಾಡಬೇಕೆಂಬ ಸ್ವಾರ್ಥ ಕೆಲಸ ಮಾಡಿರುತ್ತದೆ. ಪ್ರತಿನಿತ್ಯ ಲಕ್ಷಾಂತರ ಜನ ಇಂಥ ಥಳಕುಬಳಕುಗಳಿಗೆ ಮರುಳಾಗಿ ತಮ್ಮ ಹಣ, ಆರೋಗ್ಯ ಎರಡನ್ನೂ ಕಳೆದುಕೊಳ್ಳುತ್ತಾರೆ.

ಇದು 'ಧರ್ಮ'ದ ಕೆಲಸವಲ್ಲ, 'ಅರ್ಥ' ನಿರಾಕರಣ ಯೋಗ್ಯ ಸಂಗತಿಯೇನೂ ಅಲ್ಲ. ಆದರೆ 'ಅರ್ಥ'ವನ್ನು ಧರ್ಮಮಾರ್ಗದಲ್ಲಿ ಸಂಪಾದನೆ ಮಾಡಬೇಕು; ಹಾಗೆ ಸಂಪಾದನೆ ಮಾಡುವಾಗ ಸ್ವಹಿತಕ್ಕಿಂತ ಸಾಮಾಜಿಕ ಹಿತ ಪ್ರಮುಖವಾಗಿರಬೇಕು. ಈ ಮನೋಧರ್ಮ 'ಹಾದರಗಿತ್ತಿ'ಯ ವರ್ತನೆಯಂತಿರದೆ ಗರತಿಯ ಸರಿನಡೆಯಂತಿರಬೇಕು. ಪೂರ್ವೋಕ್ತ ಗಾದೆಯು ತನ್ನ ಅಂತರಂಗದಲ್ಲಿ ಆಧುನಿಕ ಅರ್ಥನೀತಿಯನ್ನೇ ಸಮರ್ಪಕವಾಗಿ ವ್ಯಾಖ್ಯಾನ ಮಾಡುತ್ತಿರುವಂತೆ ತೋರುತ್ತದೆ. ಅಲ್ಲದೆ, ಇಂಥ ಹಣಸಂಪಾದನೆಯನ್ನೇ ಪ್ರಧಾನವಾಗಿ ಗುರಿ ಮಾಡಿಕೊಂಡ ಮಾರ್ಗ ಬಹುಬೇಗ ಕುಸಿಯುತ್ತದೆ ಎಂಬ ಸತ್ಯವನ್ನು ಕೂಡ ಪ್ರತಿಮಿಸುತ್ತದೆ. ಗರತಿ ತನ್ನ ಕುಟುಂಬದೊಡನೆ ನೂರ್ಕಾಲ ಬಾಳಿ ಬದುಕುತ್ತಾಳೆ. ಆದರೆ ಹಾದರಗಿತ್ತಿಯ ಬಾಳು ಕ್ಷಣಿಕ, ಅವಳ ಅಲಂಕಾರದಂತೆಯೇ! ಈ ಸತ್ಯವನ್ನು ನೀರ ಮೇಲಣ ರಂಗುರಂಗು ಬೊಬ್ಬುಳಿಗಳಂತೆ ಕ್ಷಣಕಾಲ ಆಕರ್ಷಕವಾಗಿ ಕಂಡು ಠುಸ್ಸೆಂದು ಒಡೆದು ಹೋಗುವ ಗುಳ್ಳೆಗಳ ಮೂಲಕ ಅರ್ಥಮಾಡಿಕೊಳ್ಳಬಹುದು.

ಹಣ ಸಂಪಾದನೆಯೇ ಅತಿಮುಖ್ಯವೆಂದು ಮೆರೆದ ಆಧುನಿಕ ಅರ್ಥಜಗತ್ತು, ತಾನು ಬೆಳೆದಷ್ಟೇ ವೇಗದಲ್ಲಿ ಕುಸಿದು ಶೋಚನೀಯ ನೆಲೆಗೆ ಮುಟ್ಟಿರುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ಇಲ್ಲೇ ನಮಗೆ ನೈತಿಕತೆಯ ಬೆಲೆ ಅನುಭವಕ್ಕೆ ಬರುವುದು.

೨೬-೦೩-೨೦೦೯

# ಮುಪ್ಪು -ಮಾಗಿದ ಹಣ್ಣು

ಚೆನ್ನಾಗಿ ಮಾಗಿ ಹಣ್ಣಾದ ರಸಪುರಿ ಮಾವಿನ ರುಚಿಗೆ ಸರಿಸಾಟಿಯಿಲ್ಲ. ಜಂಬುನೇರಳೆ ಹಣ್ಣಿನ ಹೊಳಪು, ಬಿರಿದ ಹಲಸಿನ ಸಿಹಿ, ಸೀತಾಫಲದ ಸೊಗಸು ಅನುಭವಿಸಿಯೇ ತೀರಬೇಕು. ಹಗಲು ರಾತ್ರಿಯೆನ್ನದೆ ಒಂದೇ ಸಮನೆ ಸೊಪ್ಪು ತಿಂದು, ಸರಿಯಾಗಿ ತಿಂಗಳಿಗೆ 'ಹಣ್ಣಾಗುವ' ರೇಷ್ಮೆಯ ಹುಳುವಿನ ರೂಪವನ್ನು ನೋಡಿಯೇ ಆನಂದಿಸಬೇಕು. ಅದರ ಬೂದಿ ಮೈರೂಪ ಚಿನ್ನದ ವರ್ಣತಾಳಿ ಪಾರದರ್ಶಕವಾಗುತ್ತದೆ. ತನ್ನ ಅತ್ಯಂತ ಕಿರಿದಾದ ಬಾಯಿಂದ ಅತ್ಯಂತ ಬೆಲೆಬಾಳುವ ರೇಶಿಮೆಯ ನೂಲನ್ನು ಹೊರಸೂಸುತ್ತಾ ಗೂಡುಕಟ್ಟುವ ಅದರ ತನ್ಮಯತೆಯನ್ನು ನೋಡಿಯೇ ಅನುಭವಿಸಬೇಕು. ಪಕ್ಷಿ ಸಂಕುಲದಲ್ಲಂತೂ ಹಿರಿಯ ಜೀವಗಳದು ಘನ ಗಾಂಭೀರ್ಯ ವ್ಯಕ್ತಿತ್ವ! 'ತಾತ'ನಾಗಿ ಕಿರಿಯರಿಗೆ ಬದುಕು ಕಲಿಸುವ ಗುರುವಾಗಿ ನಡೆದುಕೊಳ್ಳುವ ರೀತಿ ವಯಸ್ಸಿನ ಘನತೆಯನ್ನು ತೂಗುತ್ತದೆ.

ಮುಪ್ಪಿನ ಗುರುತ್ತ್ವವನ್ನು ನಮ್ಮ ಸರ್ವಜ್ಞಕವಿ ಚೆನ್ನಾಗಿ ಗುರುತಿಸಿದ್ದಾನೆ. 'ಅಜ್ಜಿಯಿಲ್ಲದ ಮನೆ'ಯನ್ನು ಹಾಳೂರ ಮಸಣಕ್ಕೆ ಹೋಲಿಸುತ್ತಾನೆ. ಅಜ್ಜಿ ಪ್ರತಿಮನೆಯ ಅನುಭವದ ಗಣಿ. ಅವಳು ಸಾಂತ್ವನದ ಮೂರ್ತಿ; ತಾಳ್ಮೆಯ ಪ್ರತಿರೂಪ. ಸಂಪ್ರದಾಯ, ಆಚಾರ ವಿಚಾರಗಳ ವಾಹಕಶಕ್ತಿ; ಕರುಣೆ ಅನುಕಂಪಗಳ ಸಾಕಾರ. ಮನೆಯಲ್ಲೇ ಸದಾ ಮಾರ್ಗದರ್ಶನ ನೀಡಿ ಕಿರಿಯರ ಬದುಕು ರೂಪಿಸುವ ಗುರು; ಮನೆ ಮದ್ದಿನ ಆರೈಕೆಯ ವೈದ್ಯೆ! ಅವಳು ಏನೆಲ್ಲಾ ಹೌದು. ಇದೇ ಅರ್ಥ ಬರುವಂತೆ ಗ್ರೀಕ್‌ನ ಮಹಾಕವಿ ಸಾಪೋಕ್ಲೀಸನು ಮುದುಕನನ್ನು ಮುಳುಗುತ್ತಿರುವ ಸೂರ್ಯನಿಗೆ ಹೋಲಿಸುತ್ತಾನೆ. ಮುದುಕನಲ್ಲಿ ಮೂಡು ಸೂರ್ಯನ ಎಳಸುತನವಾಗಲೀ ತುಂಟತನವಾಗಲೀ ಇರುವುದಿಲ್ಲ; ನಡು (ಮಧ್ಯಾಹ್ನ) ಸೂರ್ಯನ ಸುಡುತನವಾಗಲೀ ಅಹಂಕಾರವಾಗಲೀ ಇರುವುದಿಲ್ಲ. ಅದೊಂದು ಬದುಕಿನಲ್ಲಿ ಮಾಗಿದ ಅನುಭವದ ಮೊತ್ತದ ಸಾಂದ್ರ ವ್ಯಕ್ತಿತ್ವ; ಎಲ್ಲವನ್ನು ಸಮಚಿತ್ತದಿಂದ ಸ್ವೀಕರಿಸಿ, ಮೌಲ್ಯೀಕರಿಸಿ ನೋಡುವ ಸಮಚಿತ್ತ ಸ್ಥಿತಿ.

ಮುಪ್ಪು ಒಂದು ಬಗೆಯ ತುಂಬು ಮನಸ್ಸಿನ ಶಾಂತಸ್ಥಿತಿ. ಅವನು ಧ್ಯಾನಿಯಂತೆ ಕಾಣುತ್ತಾನೆ. ಒಮ್ಮೊಮ್ಮೆ ಮೌನಿಯಾಗುತ್ತಾನೆ; ಏಕಾಂತ ಬಯಸುತ್ತಾನೆ. ಮಗದೊಮ್ಮೆ ಮಗುವಿನಂತೆ ಮಾತನಾಡಿ ರಚ್ಚೆ ಹಿಡಿಯುವುದೂ ಉಂಟು. ಮುದುಕನಿಗೆ ತನ್ನ ಮಕ್ಕಳಿಗಿಂತ ಮೊಮ್ಮಕ್ಕಳನ್ನು ಕಂಡರೆ ಇಷ್ಟ. ಇನ್ನೂ ಲೌಕಿಕತೆಯಿಂದ ನಲುಗುತ್ತಿರುವ ವಯಸ್ಕರಿಗಿಂತ, ನಿಸರ್ಗ ಸಹಜ ಮುಗ್ಧತೆಯಿಂದ ಅರಳುತ್ತಿರುವ ಮಕ್ಕಳು ಅವನಿಗೆ ಹತ್ತಿರವಾಗುತ್ತಾರೆ. ಅವನು ಯೌವ್ವನದ

ಗತ್ತು ಗೈರತ್ತುಗಳನ್ನು ಅನುಭವಿಸಿ, ಅದರ ಮಿತಿಯನ್ನು ಕಂಡವನು. ಹಣ ಅಂತಸ್ತು ಅಧಿಕಾರವೆಂದು ಬಯಸಿ, ಅದರ ಬೆನ್ನುಬಿದ್ದು ಅವುಗಳ ಅಶಾಶ್ವತೆಯನ್ನು ಅರಿತವನು. ಅವು ಯಾವೂ ಮನಸ್ಸಿಗೆ ನೆಮ್ಮದಿಯನ್ನೂ ಆತ್ಮಕ್ಕೆ ಬದುಕಿನ ಅರ್ಥವನ್ನೂ ತರುವುದಿಲ್ಲವೆಂಬುದನ್ನು ಅನುಭವದ ಮೂಲಕ ಮನನ ಮಾಡಿಕೊಂಡಿರುತ್ತಾನೆ. ಶಾಶ್ವತಸತ್ಯದ ಶೋಧದ ಕಡೆ ಮನಸ್ಸು ತಿರುಗುತ್ತದೆ. ಲೌಕಿಕದ ಆಸೆಯಲ್ಲಿ ತೊಳಲಿ ಬಳಲಿದ ಮನಸ್ಸಿಗೆ, ಅದರಾಚೆಯ ಸತ್ಯದ ಬಯಕೆಯಾಗುತ್ತದೆ. ಅದೊಂದು ಬಗೆಯ ಅದೃಶ್ಯ-ಅಮೂರ್ತದ ಅರಿವು. ಮನಸ್ಸಿಗೆ ಕಾಣುವ, ಅರ್ಥವಾಗುವ ಸತ್ಯ. ಕಣ್ಣಿಗೆ - ಹೊರನೋಟಕ್ಕೆ ಅರ್ಥವಾಗದ ಅನುಭವ. ಲೌಕಿಕ ಕಣ್ಣುಗಳಿಗೆ ವಿಚಿತ್ರವಾಗಿ ತೋರುವ ಅನುಭಾವ ಸಂಗತಿ. ಈ ಅನುಭಾವ ಸತ್ಯದ ರೂಪ ಎಂಥದು? ಅದನ್ನು ಸ್ವರ್ಗ ಮೋಕ್ಷವೆಂದು ಕರೆದು ಜಟಿಲಮಾಡಿಕೊಳ್ಳಬೇಕಿಲ್ಲ. ಈ ಸತ್ಯರೂಪವನ್ನು ಮುಪ್ಪಿನ ಮಾಗಿದ ಮನಸ್ಸು ಅರ್ಥಮಾಡಿಕೊಳ್ಳುವ ಮಾಧ್ಯಮ - ಮುಗ್ಧತೆ ಮತ್ತು ವಿಸ್ಮಯಗಳಲ್ಲಿ ಅಭಿವ್ಯಕ್ತವಾಗುತ್ತದೆ. ಆದ್ದರಿಂದಲೇ ಮುಪ್ಪು ಮಕ್ಕಳನ್ನು ಪ್ರೀತಿಸುತ್ತದೆ - ಅರ್ಥಾತ್ ಮಕ್ಕಳ ಮುಗ್ಧತೆ ಮತ್ತು ವಿಸ್ಮಯಗಳಲ್ಲಿ ಬದುಕಿನ ಅರ್ಥವನ್ನು ಶೋಧಿಸಹೊರಡುತ್ತದೆ. ಬದುಕಿನ ಅರ್ಥವೆಂದರೆ ಅದೊಂದು ಮುಗ್ಧಸ್ವರೂಪ ಮತ್ತು ಅದರಿಂದ ಹೊರಹೊಮ್ಮುವ ನಿಷ್ಕಲ್ಮಶ ಆನಂದ. ಅಂಥ ಆನಂದ - ಸ್ವಾರ್ಥ ರಹಿತ ಆನಂದ - ಮಕ್ಕಳಲ್ಲಿ ಸಹಜವಾಗಿರುತ್ತದೆ. ಅಂಥ ಆನಂದದ ಸಾಹಚರ್ಯದ ಮೂಲಕ ಬದುಕಿನ ನಿಜವಾದ ಅರ್ಥವನ್ನು ಅನುಭವಿಸಲು ಮುದುಕ ಹಾತೊರೆಯುತ್ತಾನೆ.

ಮುಪ್ಪಿಗೆ ಸಮಚಿತ್ತ ಪ್ರಾಪ್ತವಾಗುವಿಕೆಯೇ ಬದುಕಿನ ಅರ್ಥವಾಗುತ್ತಿದೆ ಎಂಬುದರ ಸೂಚನೆ. ಮುಪ್ಪಿಗೆ ಕೋಪ ತಾಪಗಳು ಉಂಟಾಗುವುದಿಲ್ಲ. ಉಂಟಾದರೂ ಅವು ವೈಯಕ್ತಿಕ ನೆಲೆಯ ಲೌಕಿಕ ನೆಲೆಯ ಮೇಲೆ ಉಂಟಾದವುಗಳಲ್ಲ. ಅವು ನಿಸ್ವಾರ್ಥ ನೆಲೆಯ ಸಾತ್ವಿಕ ರೂಪದವು. ಅವುಗಳಿಂದ ಕುಟುಂಬ ಮತ್ತು ಸಮುದಾಯಕ್ಕೆ ಒಳಿತಾಗುತ್ತದೆ. ಶಾಂತ ಪ್ರಶಾಂತ ಗಂಭೀರ ಬುದ್ಧನ ಮುಖಮುದ್ರೆಯಲ್ಲಿ ಕೋಪ ಭಾವವನ್ನು ಕಲ್ಪಿಸಿಕೊಳ್ಳಿ. ಆ ಕಲ್ಪನೆಯೇ ಮಾಗಿದ ಹಣ್ಣಿನ ಸ್ವರೂಪ.

೨೩-೦೪-೨೦೦೯

# ಉತ್ಸಾಹ ತಿನುವುದು ಬೇಸರದ ಕಸಕಡ್ಡಿ

ಕವಿ ಬೇಂದ್ರೆ ಅವರ ಕವನದಲ್ಲಿ 'ಉತ್ಸಾಹ ತಿನುವುದು ಬೇಸರದ ಕಸಕಡ್ಡಿ' ಎಂಬ ಸಾಲು ಬರುತ್ತದೆ. ಈ ಮಾತು ವ್ಯಕ್ತಿಯ ವ್ಯಕ್ತಿತ್ವದಲ್ಲಿ ಇರುವ ಎರಡು ಪ್ರಮುಖ ಸೆಳೆತಗಳನ್ನು ಶಕ್ತಿಗಳನ್ನು ಕುರಿತು ಮಾತನಾಡುತ್ತಿರುವಂತೆ ತೋರುತ್ತದೆ. ಒಂದು ಉತ್ಸಾಹ; ಮತ್ತೊಂದು ಬೇಸರ. ಒಂದಕ್ಕೊಂದು ವಿರುದ್ಧ ನೆಲೆಯಲ್ಲಿ ನಿಂತಿರುವಂಥ ಶಕ್ತಿಗಳು. ಇವು ಒಂದನ್ನೊಂದು ತಿನ್ನಲು ಹವಣಿಸುತ್ತವೆ. ಒಂದು ಕ್ರಿಯೆಯಲ್ಲಿ ನಿರತನಾಗಲು ಪ್ರೇರೇಪಿಸಿದರೆ, ಮತ್ತೊಂದು ವ್ಯಕ್ತಿಯನ್ನು ಮಂದಗೊಳಿಸಲು ಹವಣಿಸುತ್ತದೆ.

ಮೊದಲು ನಾವು 'ಬೇಸರ'ದ ಬಗ್ಗೆ ಚಿಂತಿಸಬೇಕು. ಪ್ರಕೃತಿಯ ಮಧ್ಯೆ ಬದುಕು ಮಾಡುತ್ತಿರುವ ಗಿರಿಜನರನ್ನೋ ಪ್ರಕೃತಿಯ ಮಕ್ಕಳಾದ ರೈತರನ್ನೋ ಅವಲೋಕಿಸಿದಾಗ ಅವರಲ್ಲಿ ಬೇಸರದ ಅಂಶಗಳು ಇಲ್ಲವೆಂದರೂ ಸರಿಯೇ. ಏಕೆಂದರೆ ಅವರು ಪ್ರಕೃತಿಯ ಜೊತೆ ಹೊಂದಿಕೊಂಡು ಬದುಕುವುದನ್ನು ರೂಢಿಸಿಕೊಂಡಿರುತ್ತಾರೆ. ಅವರಿಗೆ ಪ್ರಕೃತಿಯ ಒಂದೊಂದು ಕ್ರಿಯೆಯೂ ಸದಾ ಕುತೂಹಲವನ್ನು ಮೂಡಿಸುವ ಅಂಶವಾಗಿ ತೋರುತ್ತಿರುತ್ತದೆ. ಅದನ್ನು ಗಮನಿಸುತ್ತಾ, ಅದರ ಭಾಗವಾಗಿ ಬದುಕುವ ಅವರಿಗೆ ಪ್ರಕೃತಿ ಕಲಿಯುವ ಶಾಲೆಯಾಗಿ ಅರ್ಥವಾಗದ ನಿಗೂಢವಾಗಿ ಬೆರಗು ಮೂಡಿಸುತ್ತದೆ. ಅವರಿಗೆ ಬೇಸರವೆಂದರೇನು ಎಂಬುದೇ ಗೊತ್ತಿರುವುದಿಲ್ಲ.

ವ್ಯಕ್ತಿಗೆ 'ಬೇಸರ' ಏಕಾಗುತ್ತದೆ? ಕ್ರಿಯೆ ಇಲ್ಲದಾಗ, ಅವನು ಜಡನಾದಾಗ ಅದು ಅವನನ್ನು ಆವರಿಸಿ ಮೆತ್ತಿಕೊಳ್ಳುತ್ತದೆ. ಅವನು ಶಿಶುಸಹಜವಾದ ಕುತೂಹಲವನ್ನು, ಮುಗ್ಧತೆಯನ್ನು ಕಳೆದುಕೊಂಡಾಗ ಮೂಡುವ "ಅಹಂ"ನ ನಿರೀಕ್ಷೆಯಿಂದ, ಈಡೇರಲಾಗದ ಬಯಕೆಗಳಿಂದ, ಆ ನಿಮಿತ್ತ ಉಂಟಾಗುವ ಅಸಹಾಯಕತೆಯಿಂದ ಬೇಸರ ವ್ಯಕ್ತಿಯನ್ನು ಬಳಸಿ ತಬ್ಬಿಕೊಳ್ಳುತ್ತದೆ. ಅಂದರೆ ಪ್ರಕೃತಿಯಿಂದ ತನ್ನನ್ನು ದೂರ ಮಾಡಿಕೊಂಡ ಮಾನವನು ಅತಿಯಾದ ಆಸೆಗಳಿಂದ ಸ್ವಾರ್ಥಿಯಾಗುತ್ತಾನೆ; ಅಸಹಜವಾದ ಗೋಡೆಗಳನ್ನು ಕಟ್ಟಿಕೊಳ್ಳುತ್ತಾನೆ. ಈ ಸ್ವಾರ್ಥದ ಕಾರಣದಿಂದ ಕೂಡಿಡುವ ಮತ್ತು ಪರರ ಬದುಕನ್ನು ಅಪಹರಿಸುವ ತರವಲ್ಲದ ಕೆಲಸಕ್ಕೆ ಕೈಹಾಕುತ್ತಾನೆ. ಅದು ಈಡೇರದಾದಾಗ ಕುಬ್ಜನಾಗುತ್ತಾನೆ. ತನ್ನನ್ನು ತಾನು ಅಳಿದುಕೊಂಡು ಅಸಹಜ ಬಂಧನಗಳಿಗೆ ಸಿಲುಕುತ್ತಾನೆ. ಆಗ ಅವನಲ್ಲಿ ಬೇಸರ ಮನೆ ಮಾಡುತ್ತದೆ. ಬೇಸರವೆಂಬುದು ನಾವೇ ಕಟ್ಟಿಕೊಂಡಿರುವ ಒಂದು ಮನೋರೋಗ; ನಾವೇ ಹೆಣೆದಿರುವ ಬಲೆಯಲ್ಲಿ ಬಿದ್ದು ಒದ್ದಾಡುವ ಒಂದು ಸ್ಥಿತಿ.

ಹೀಗೆ ನಾವೇ ಸೃಷ್ಟಿಸಿಕೊಂಡಿರುವ ಬೇಸರವೆಂಬ ಕಸಕಡ್ಡಿಯನ್ನು ನಾವೇ

ಶುಚಿಗೊಳಿಸಿಕೊಳ್ಳಬೇಕೆಂಬುದು ಕವಿಯ ಆಶಯ. ಬೇಂದ್ರೆ ಅವರು ಬೇಸರವನ್ನು 'ಕಸಕಡ್ಡಿ'ಗೆ ಹೋಲಿಸಿರುವುದು ಅರ್ಥಪೂರ್ಣವಾಗಿದೆ. ನಮ್ಮ ಮನವೆಂಬ ವರ್ತುಲದಲ್ಲಿ ಪ್ರಯೋಜನಕ್ಕೆ ಬಾರದ ಕಸಕಡ್ಡಿಗಳನ್ನು ನಾವೇ ತುಂಬಿಕೊಂಡಿರುತ್ತೇವೆ. ಅವು ನಮ್ಮ ಮನೋಪ್ರಪಂಚವನ್ನು ಮತ್ತಷ್ಟು ಕೊಳೆಸುತ್ತವೆ. ಆ ಕಸಕಡ್ಡಿಗಳು 'ಗೊಬ್ಬರ' ವಾಗಬೇಕಾದರೆ - ಅವನ್ನು ಸಾವಯವ ಸತ್ತ್ವಗೊಳಿಸಬೇಕಾದರೆ ಮನಸ್ಸನ್ನು ಉತ್ಸಾಹವೆಂಬ ಕಾವು ನೀಡಬೇಕು.

ಈ 'ಉತ್ಸಾಹ'ವೆಂಬುದು ಕೂಡ ಒಂದು ಮನಸ್ಥಿತಿ. ಪ್ರಕೃತಿ ಮಡಿಲಲ್ಲಿ ಸಹಜಶಿಶುವಾಗಿ ಬದುಕುತ್ತಿದ್ದಾಗ ಅದು ತಾನು ತಾನಾಗಿಯೇ ಅವನಲ್ಲಿತ್ತು. ನಾಗರಿಕ ಸಂಸರ್ಗದಿಂದ ಅದು ಲೋಭ, ಆಸೆ ಮುಂತಾದ ಸ್ವಾರ್ಥ ರೂಪತಾಳಿ ಜಡತ್ವಕ್ಕೆ ಸಂದಿತ್ತು. ಹೀಗೆ ನಮ್ಮೊಳಗೇ ಇರುವ ಉತ್ಸಾಹವೆಂಬ ಚೇತನದ ಕಿಡಿಯನ್ನು ಪ್ರಜ್ವಲಿಸುವ ಕಾವನ್ನಾಗಿಸಬೇಕು. ಆ ಕಾವು ನೀಡುವ ಬೆಳಕಲ್ಲಿ ಮತ್ತೆ ಬದುಕು ಕ್ರಿಯಾಶೀಲವಾಗುವಂತೆ ಮಾಡಬೇಕು. ಒಮ್ಮೆ ನಮ್ಮ ಅಂತರಂಗದಲ್ಲಿ ಉತ್ಸಾಹ ಜಾಗೃತವಾದರೆ ನಮ್ಮ ಜಡತ್ವ ನಾಶವಾಗುತ್ತದೆ. ಈ ಜಡತ್ವದ ನಿಕಟ ಬಂಧುವಾದ ಬೇಸರ ಇನ್ನಿಲ್ಲದಂತೆ ದೂರ ಸರಿಯುತ್ತದೆ.

ನಮ್ಮೊಳಗಿನ ಉತ್ಸಾಹ ನಮ್ಮನ್ನು ಕ್ರಿಯೆಗೆ ತೊಡಗಿಸುತ್ತದೆ. ಕ್ರಿಯೆ ಕೆಲಸವಿಲ್ಲದ ಮೈಮನಗಳನ್ನು ಚೇತನಗೊಳಿಸುತ್ತದೆ. ಒಮ್ಮೆ ದುಡಿಮೆ ಪ್ರಾರಂಭವಾದರೆ ಬೇಸರಕ್ಕೆಲ್ಲಿ ಸ್ಥಾನ? ಉತ್ಸಾಹ ಬಲಾಢ್ಯಗೊಂಡರೆ ಕ್ರಿಯೆ ಮುಂದಾಗುತ್ತದೆ; ಸೃಷ್ಟಿ ಸಾಗುತ್ತದೆ.

೦೭-೦೫-೨೦೦೯

# ಕಂಡವರು ಯಾರು?

ನಮ್ಮವರಲ್ಲದವರು ಕಂಡವರು! ಅಪ್ಪ ಅಮ್ಮ, ಅಣ್ಣ ತಮ್ಮ ಅಕ್ಕ, ತಂಗಿ, ಅಜ್ಜ, ಅಜ್ಜಿ, ಅತ್ತೆ ಮಾವ, ಬಾವ ಮೈದುನ, ನಾದಿನಿ ಅತ್ತಿಗೆ, ವಾರಗಿತ್ತಿ ಹೀಗೆ ನಮ್ಮವರ ಸಂಬಂಧಮಾಲೆ ಇರಬಹುದು. ಇದರಲ್ಲೂ ತೀರಾ ಒಳಗಿನ ನಮ್ಮವರು ಸ್ವಲ್ಪ ದೂರದ ಒಳಗಿನವರು ಎಂದು ಸಂಬಂಧ ಸೀಳುವ ಸಂದರ್ಭ ಸೃಷ್ಟಿಯಾಗಬಹುದು. ಈ ಸಂಬಂಧ ಮಾಲೆಯಲ್ಲಿ ನಂಟರು ಸೇರಬಹುದು ಸೇರದಿರಲೂ ಬಹುದು. ಸಮಯ ಸಂದರ್ಭಗಳ ನೆಲೆಯಲ್ಲಿ ಅವರು 'ನಮ್ಮವರೋ ಕಂಡವರೋ' ಆಗುತ್ತಾರೆ. ಆ ನೆಲೆಯಲ್ಲೇ ಅವರು ಹತ್ತಿರಾಗುವ ಅಥವಾ ದೂರಾಗುವ ಸ್ಥಿತಿಗೆ ತಲುಪುತ್ತಾರೆ.

'ಕಂಡವರ ಸುದ್ದಿ ನಮಗ್ಯಾಕೆ?', 'ಕಂಡವರ ಉಸಾಬರಿಗೆ ಹೋಗಬಾರದು' ಎಂಬ ಉಕ್ತಿಗಳೂ ಇವೆ. ಅಪರಿಚಿತರ ಸಹವಾಸಕ್ಕೆ ಹೋಗಬಾರದೆನ್ನುವ, ಬೇರೆಯವರ ವೈಯಕ್ತಿಕ ಬದುಕನ್ನು ನಾವು ಇಣುಕಿ ನೋಡಬಾರದೆನ್ನುವ ಆಶಯ ಇಲ್ಲೆಲ್ಲಾ ಧ್ವನಿತವಾಗುತ್ತದೆ. ಲೌಕಿಕ ಬದುಕಿನ ಗೋಜಲು ಸಿಕ್ಕುಗಳಲ್ಲಿ ಅನಾವಶ್ಯಕವಾಗಿ ವ್ಯಕ್ತಿ ಸಿಲುಕಿ ನರಳಬಾರದೆನ್ನುವ, ಅದರಿಂದ ಆದಷ್ಟು ದೂರ ಇದ್ದರೆ ಒಳ್ಳೆಯದೆನ್ನುವ ಹಿನ್ನಲೆಯಲ್ಲಿ ಈ ಮಾತುಗಳು ಸೃಷ್ಟಿಯಾಗಿರಬಹುದು.

ಈ ಬಗೆಯಲ್ಲಿ ಇತರರಿಗೆ 'ಕಂಡವರಾಗುವ' ಮನೋಧರ್ಮವನ್ನು ಸಮುದಾಯ ಬದುಕಿನಲ್ಲಿ ಆದರ್ಶ ನಡೆಯೆಂದು ಕರೆಯಲಾಗದು. ಇದು ವ್ಯಕ್ತಿಯ ಸಮಯ ಪ್ರಜ್ಞೆಯನ್ನು, ಸಂದರ್ಭಾನುಸಾರ ತನ್ನ ಬದುಕನ್ನು ಅನುಕೂಲಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವ ಬುದ್ಧಿಯನ್ನು ಹೇಳುತ್ತದೆ. ಸಮುದಾಯ ಜೀವಿಯಿಂದ ಮೇಲೆ ಸಮುದಾಯದ ಒಳಿತು ಕೆಡಕುಗಳಲ್ಲಿ ಅವನು ಭಾಗವಹಿಸಬೇಕು. ಈ ಭಾಗವಹಿಸುವಿಕೆಯು ಅನಾವಶ್ಯಕ 'ಮೂಗು ತೂರಿಸುವಿಕೆ' ಆಗುವುದಿಲ್ಲ. ಈ ಭಾಗವಹಿಸುವಿಕೆ ಸಮುದಾಯ ಹಿತದಿಂದ ಕೂಡಿದಲ್ಲಿ ಅದು 'ಉಸಾಬರಿ'ಯಾಗುವುದಿಲ್ಲ. ಅದು ವ್ಯಕ್ತಿಯ ಕರ್ತವ್ಯವಾಗಿ ಬೆಳೆಯುತ್ತದೆ. ಪ್ರತಿಯೊಬ್ಬರೂ ವ್ಯಕ್ತಿಕೇಂದ್ರಿತರಾಗಿ ಚಿಂತಿಸತೊಡಗಿದರೆ ಸಮುದಾಯ ಪ್ರಜ್ಞೆ ಅರಳುವುದಾದರೂ ಹೇಗೆ? ಸಮುದಾಯ ಕೆಲಸಗಳು ಆಗುವುದಾದರೂ ಹೇಗೆ? ತೀರ ವ್ಯಕ್ತಿಗತ ವಿಚಾರಗಳಿಗೆ ತಲೆಹಾಕದೆ ಒಂದಾಗುವುದು, ಬೆರೆತು ಭಾಗಿಯಾಗಿ ಬದುಕನ್ನು ಹಂಚಿಕೊಳ್ಳುವುದು, ಅತಿ ಮುಖ್ಯವಾದ ಸಾಮಾಜಿಕ ಕ್ರಿಯೆಯಾಗಬೇಕು. ಆಗ 'ಕಂಡವರು' ನಮ್ಮವರಾಗುತ್ತಾರೆ. ನಾವು ಎಲ್ಲರಲ್ಲಿ ಒಬ್ಬರಾಗುತ್ತೇವೆ. ಸಮುದಾಯದಲ್ಲಿ ಸೋದರತ್ವ ಬೆಳೆಯುತ್ತದೆ.

ಈ 'ಕಂಡವರು' ಎಂಬ ಪದಕ್ಕೆ ಅಲೌಕಿಕವಾದ ಅರ್ಥವೂ ಇದೆ. ಅದರಲ್ಲಿ 'ಕಾಣ್'

ಎಂಬ ದರ್ಶನವೂ ಅಡಗಿದೆ. 'ಕಂಡವನು' ಎಂದರೆ ಬದುಕನ್ನು ಕಂಡವನು. ಸತ್ಯವನ್ನು ಅರಿತವನು. ಲೌಕಿಕ ಬದುಕಿನ ಸುಖದುಃಖಗಳನ್ನು ಅನುಭವಿಸಿ ಬೆಳೆದವನು. ಬದುಕನ್ನು ಸ್ವೀಕರಿಸಿ ಅರಿತು ನಿರಾಕರಣ ಸ್ಥಿತಿಗೆ ಏರಿದವನು. ಅಂತಿಮ ಸತ್ಯವನ್ನು ಗೋಚರಿಸಿಕೊಂಡವನು- ಹೀಗೆ ಅದರ ಅರ್ಥ ಬೆಳೆಯುತ್ತಾ ಹೋಗುತ್ತದೆ. ನಮ್ಮ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯ ಋಷಿಗಳು-ಸಂತರು ಈ ಬಗೆಯ ಜ್ಞಾನಿಗಳು. ಅವರು ಕುವೆಂಪು ಅವರು ಗುರುತಿಸುವಂತೆ ಅನಿಕೇತನ ಮನಃಸ್ಥಿತಿಯವರು. ಮತಧರ್ಮ ಸಂಪ್ರದಾಯ ಆಚಾರಗಳನ್ನು ಮೀರಿ, ವಿಚಾರ ಚಿಂತನ ಮಂಥನಗಳ ಮೂಲಕ ಮಾನವ ಕುಲದ ಏಳ್ಗೆಯನ್ನು ಕಾಣಲು ಯತ್ನಿಸಿದವರು. ಜಾತಿ ವರ್ಣ ಎಂಜಲು ಅಸ್ಪೃಶ್ಯತೆಗಳೆಂಬ ಮಾರಿಗಳನ್ನು ಮೀರಿ ನಿಂತವರು. ನಿಜವಾದ ಅರ್ಥದಲ್ಲಿ ಸ್ವಾರ್ಥವನ್ನು ನಿರಾಕರಣ ಮಾಡಿ, ಇಡೀ ಸಮುದಾಯವನ್ನು ಅಪ್ಪಿಕೊಂಡವರು.

ಕಂಡವರು-ಸತ್ಯವನ್ನು ಅರಿತವರು ಸಂಸಾರ ಸಾರವನ್ನು ಪ್ರೀತಿಸುವವರಾಗಿರುತ್ತಾರೆ. ಬದುಕು ಅರಳುವುದು, ಅರ್ಥ ಕಾಣುವುದು ಎಲ್ಲರಲ್ಲೊಂದಾಗುವಿಕೆಯಲ್ಲಿರುತ್ತದೆ ಎಂದು ತಿಳಿದಿರುತ್ತಾರೆ. ಅವರಿಗೆ ಸಮುದಾಯದಲ್ಲಿ ಕಂಡವರೆಂಬುವವರು ಕಾಣುವುದೇ ಇಲ್ಲ! ಎಲ್ಲರೂ ಅವರ ಬಂಧುಗಳೇ ಆಗಿರುತ್ತಾರೆ. ಈ ಕಾಣ್ಕೆಯ ನಿಲುವಿಗೆ ಏರಿದ ಬುದ್ಧ, ಕ್ರಿಸ್ತ, ಗಾಂಧಿ ಇಂಥವರಿಗೆ 'ನಿಕೇತನ' ಕಾಣಲೇ ಇಲ್ಲ. ಅವರು ಕಂಡ ನಿಕೇತನಕ್ಕೆ ಬಾಗಿಲು ಗೋಡೆ ಗುರುತು ಎಂಬುದಿರಲಿಲ್ಲ. ಅದರಿಂದಲೇ 'ಅನಿಕೇತನ'ವೆನ್ನಿಸಿಕೊಂಡಿತು. ಇಂಥವರಿಗೆ 'ಮಾನವ ಕುಲಂ ತಾನೊಂದೆ ವಲಂ' ಎಂಬಂತೆ ಕಾಣುತ್ತದೆ.

೨೧-೦೫-೨೦೦೯

## ಒಂದು ಕಪ್ಪು ಚುಕ್ಕೆ!

ನಾವು ಇತರರಲ್ಲಿ ತಪ್ಪುಗಳನ್ನು ಸುಲಭವಾಗಿ ಗುರುತಿಸುತ್ತೇವೆ. ಅವನ್ನು ಬೂತುಗಾಜಲ್ಲಿಟ್ಟು ನೋಡಿ ಆನಂದಿಸುತ್ತೇವೆ. ಆ ತಪ್ಪುಗಳನ್ನು ಊರು ತುಂಬ ಡಂಗೂರ ಸಾರಿ ವಿಕೃತವಾದ ಸಂತೋಷವನ್ನು ಅನುಭವಿಸುತ್ತೇವೆ. ಇದು ನಮ್ಮಲ್ಲಿರುವ ಕಪ್ಪುತನಕ್ಕೆ ಸಾಕ್ಷಿ ಹೇಳುತ್ತದೆ. ನಮ್ಮ ತುಂಬ ಅಜ್ಞಾನವೆಂಬ ಕಗ್ಗತ್ತಲನ್ನು ತುಂಬಿಕೊಂಡು ಬೇರೊಬ್ಬರ ವ್ಯಕ್ತಿತ್ವದ ಬಗ್ಗೆ ಮಾತನಾಡುತ್ತೇವೆ. ಏಕೆಂದರೆ ನಮ್ಮೊಳಗಿನ ಅಂತಃಚಕ್ಷು ತೆರೆದುಕೊಂಡಿರುವುದಿಲ್ಲ. ತಪ್ಪು ಮಾಡದವರ್‍ಯಾರಿದ್ದಾರೆಂಬ ಪ್ರಶ್ನೆಯನ್ನು ನಾವು ಹಾಕಿಕೊಂಡಿರುವುದಿಲ್ಲ. ನಮ್ಮ ಒಳಗಣ್ಣನ್ನು ತೆರೆದು ನಮ್ಮನ್ನು ನಾವು ಅವಲೋಕಿಸಿದರೆ, ವಿಮರ್ಶೆ ಮಾಡಿಕೊಂಡರೆ ಹತ್ತಾರು ಕಪ್ಪು ಚುಕ್ಕೆಗಳು ನಮ್ಮ ವ್ಯಕ್ತಿತ್ವಕ್ಕೆ ಮೆತ್ತಿಕೊಂಡಿರುವುದು ಗೋಚರವಾಗುತ್ತದೆ. ಆಗ ಇತರರಲ್ಲಿ ಕಾಣುತ್ತಿರುವ ತಪ್ಪುಗಳು ಸಹಜವಾಗಿಯೂ ಗೌಣವಾಗಿಯೂ ಕಾಣತೊಡಗುತ್ತವೆ.

ಇತರರ ಉಪದೇಶ, ಉತ್ತಮ ಪುಸ್ತಕಗಳ ಓದು ನಮ್ಮಲ್ಲಿ ತಿಳಿವನ್ನು ಹೆಚ್ಚಿಸಬಹುದು. ನಮ್ಮ ಜೀವನಾನುಭವವೂ ನಮಗೆ ಅನೇಕ ಸತ್ಯಗಳನ್ನು ತೆರೆದು ತೋರಿಸಬಹುದು. ಆಗ ನಮ್ಮ ವರ್ತನೆಗಳು ಬದಲಾಗತೊಡಗುತ್ತವೆ. ಅಸಹನೆ, ಆತುರ, ತಪ್ಪುನಿರ್ಧಾರ, ಪೂರ್ವಾಗ್ರಹ ಕಲ್ಪನೆಗಳು ಕ್ರಮೇಣ ದೂರಾಗತೊಡಗಿ, ಶಾಂತತೆ, ತಾಳ್ಮೆ, ವಿವೇಚನೆ, ತೆರೆದ ಮನಸ್ಸು ಮೂಡತೊಡಗುತ್ತವೆ. ಆಗ ಬೇರೆಯವರು ಮಾಡುವ ತಪ್ಪುಗಳು ಅವರು ಕಲಿಯುವಾಗ ಮಾಡುವ ಎಡವುಗಳಂತೆ ತೋರುತ್ತವೆ; ಕಲಿಕೆಯ ದಾರಿಯ ಸವಾಲುಗಳಂತೆ ಕಾಣುತ್ತವೆ. 'ನಡೆವರೆಡಹದೆ ಕುಳಿತರೆಡಹುವರೇ?' ಎಂಬ ರಾಘವಾಂಕನ ವಿವೇಕ ಎದ್ದು ಬಂದು ದಾರಿ ತೋರುತ್ತದೆ.

ಆದರೆ ನಮ್ಮ ಸಾಂಪ್ರದಾಯಿಕ ನೀತಿಶಾಸ್ತ್ರ ನಮ್ಮನ್ನು ಅನೇಕ ತಪ್ಪು ನಿರ್ಧಾರಗಳಿಗೆ ಬರುವಂತೆ ಪ್ರೇರೇಪಿಸುತ್ತದೆ. 'ಒಂದು ಕಂಡುಗ ಹಾಲಿಗೆ ಒಂದು ತೊಟ್ಟು ಹುಳಿ ಸಾಕು' ಎಂಬ ಉಕ್ತಿಯಂತೆ ಹಾಲನ್ನು ಕಡೆಗಣಿಸಿ ಬರೀ ಹುಳಿಯನ್ನೇ ವೈಭವೀಕರಿಸುತ್ತೇವೆ. ನಮ್ಮ ನಡುವಿನಲ್ಲಿರುವ ಜನರ ಸಣ್ಣ ತಪ್ಪನ್ನೇ ದೊಡ್ಡದು ಮಾಡಿ, ಅದೇ ಅವರ ವ್ಯಕ್ತಿತ್ವವೆಂದು ಆರೋಪಿಸುತ್ತೇವೆ. ಆ ವ್ಯಕ್ತಿತ್ವದ ವಿಶಾಲಮುಖವನ್ನು ಅರಿಯುವ ಪ್ರಯತ್ನವನ್ನೇ ನಾವು ಮಾಡುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ಫ್ಯಾಶನ್ ಆಗಿರುವ ವ್ಯಕ್ತಿತ್ವ ವಿಕಸನ ಜ್ಞಾನಶಾಖೆಯಲ್ಲಿ ಒಂದು ಪ್ರಾತ್ಯಕ್ಷಿತೆಯ ಮೂಲಕವಾಗಿ ವ್ಯಕ್ತಿಗಿರಬೇಕಾದ ಇತ್ಯಾತ್ಮಕ ಮನೋಧರ್ಮದ ಬಗ್ಗೆ ಬೆಳಕು ಚೆಲ್ಲುತ್ತಾರೆ. ಒಂದು ಬಿಳಿಹಾಳೆಯ ನಡುವೆ ಒಂದು ಕಪ್ಪುಚುಕ್ಕೆಯನ್ನು ಮೂಡಿಸಿ ನಿಮಗೆ

ಏನು ಕಾಣುತ್ತಿದೆ ಎಂದು ಪ್ರಶ್ನಿಸುತ್ತಾರೆ. ಶಿಬಿರಾರ್ಥಿಗಳು ಸಹಜವಾಗಿ 'ಕಪ್ಪುಚುಕ್ಕೆ' ಎನ್ನುತ್ತಾರೆ. ಹೀಗೆ ಕಾಣುವ ದೃಷ್ಟಿಯನ್ನು ಅವರು ನೇತ್ಯಾತ್ಮಕವೆಂದು ಕರೆಯುತ್ತಾರೆ. ಅದು ನಿಜ. ಇದು ಸತ್ಯವನ್ನು ಕಾಣುವವನ ಗ್ರಹಿಕೆ ಮತ್ತು ಮನೋಧರ್ಮಗಳು ಬೆಳೆದು ಸಿದ್ಧಗೊಂಡಿರುವ ಸ್ಥಿತಿಯನ್ನು ಸೂಚಿಸುತ್ತದೆ. ಕೇವಲ ಕೆಟ್ಟದ್ದನ್ನೇ ಗುರುತಿಸುವ ಪರಿ ಇದು. ಅವನು ತನ್ನ ದೃಷ್ಟಿಯನ್ನು ಇತ್ಯಾತ್ಮಕವಾಗಿ ಬೆಳೆಸಿಕೊಂಡಿದ್ದಲ್ಲಿ ಅವನಿಗೆ ಅಲ್ಲಿ ಕಾಣುತ್ತಿದ್ದುದೆ ಬೇರೆ! ಆ ಬಿಳಿಹಾಳೆಯ ಮಧ್ಯಭಾಗದಲ್ಲಿ ಒಂದೇ ಒಂದು ಕಪ್ಪುಚುಕ್ಕೆ ಮಾತ್ರ ಇದೆ. ಅದನ್ನು ಹೊರತು ಪಡಿಸಿದರೆ ಇಡೀ ಬಿಳಿ ಹಾಳೆಯ ಮೈಯೆಲ್ಲಾ ಬಿಳುಪಾಗಿದೆ! ಆ ಬಿಳುಪು ಅವನಿಗೇಕೆ ಕಾಣುತ್ತಿಲ್ಲ? ಅವನು ತನ್ನ ದೃಷ್ಟಿಯಲ್ಲಿ ಒಳ್ಳೆಯದನ್ನು ಗ್ರಹಿಸುವುದನ್ನು ರೂಢಿಸಿಕೊಂಡಿಲ್ಲವೆಂದು ಇದರ ಅರ್ಥ. ಒಳ್ಳೆಯದನ್ನು ಗ್ರಹಿಸುವ ದೃಷ್ಟಿ ಅವನಲ್ಲಿ ಇದ್ದಿದ್ದರೆ ಕಪ್ಪುಚುಕ್ಕೆಯ ಬದಲು 'ಅದರ ಮೈಯೆಲ್ಲಾ ಬಿಳುಪಾಗಿದೆ' ಎಂದು ಗುರುತಿಸುತ್ತಿದ್ದ.

ಇಂದು ದೇಶಕಟ್ಟುವ ಕೆಲಸದಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳಬೇಕಾದ ತುರ್ತುಸಮಯದಲ್ಲಿದ್ದೇವೆ. ಅದನ್ನು ಆಂತರಿಕವಾಗಿ ಗಟ್ಟಿಗೊಳಿಸಬೇಕಾಗಿದೆ. ಅದಕ್ಕೆ ನಾವು ಆಂತರಿಕ ಸತ್ತ್ವವನ್ನು ಬಲಪಡಿಸಿಕೊಳ್ಳಬೇಕು. ಅಂಥ ಕ್ರಿಯೆಯಲ್ಲಿ ಒಳಿತನ್ನು ಗ್ರಹಿಸಿ ಬೆರೆಯುವ ಕೆಲಸ ಬಹುಮುಖ್ಯವೆಂದು ಭಾವಿಸಬೇಕು.

೧೮-೦೬-೨೦೦೯

# ಕಲಗಚ್ಚು

ಕಲಗಚ್ಚು ಕೃಷಿ ಸಂಸ್ಕೃತಿಯ ಒಂದು ಭಾಗ. ಕೃಷಿ ಆಧಾರಿತ ಬದುಕು ಮಾಡುವ ಎಲ್ಲರೂ ಪಶುಗಳನ್ನು ಸಾಕಿಯೇ ಸಾಕುತ್ತಿದ್ದರು. ಅವರಿಗೆ ಜಮೀನು ಇರಲೇಬೇಕೆಂಬ ನಿಯಮವೇನಿಲ್ಲ. ಒಂದು ಮನೆ; ಆ ಮನೆಗೆ ಹೊಂದಿಕೊಂಡಂತೆ ಒಂದು ಕೊಟ್ಟಿಗೆ, ಆ ಕೊಟ್ಟಿಗೆಯಲ್ಲಿ ರೈತಾಪಿ ಜನರು ಅವರ ಶಕ್ತ್ಯಾನುಸಾರ ಹಸು, ಎಮ್ಮೆ, ಆಡು, ಕುರಿಗಳನ್ನು ಸಾಕುತ್ತಿದ್ದರು. ಅವರು ಮುಂಜಾನೆ ಎದ್ದ ಕೂಡಲೇ ಈ ಪಶುಗಳನ್ನು ನೋಡಿದರೆ ಶುಭವಾಗುತ್ತದೆ ಎಂಬ ನಂಬಿಕೆಯಿತ್ತು. ಪಶುಗಳಲ್ಲಿ ದೈವತ್ವವನ್ನು ಕಾಣುವ ಸಂಸ್ಕೃತಿ ಜೀವಪರತ್ವವನ್ನು ತಿಳಿಸುತ್ತದೆ; ಪ್ರಕೃತಿಯ ಮಕ್ಕಳೆಲ್ಲರಿಗೂ ಸಮಾನ ಗೌರವ ನೀಡಬೇಕೆಂಬ ಆಧುನಿಕ ಪರಿಸರ ಪ್ರಜ್ಞೆಯ ದೃಷ್ಟಿಯಿದೆ.

ಅಲ್ಲದೆ ಈ ಪಶುಗಳಿಂದ ಕೃಷಿ ಬದುಕಿಗೆ ಅಪಾರವಾದ ಅನುಕೂಲವಿದೆ. ಹಸುಗಳು ಹೊಲ ಉಳುತ್ತವೆ; ಎಮ್ಮೆಗಳು ಹಾಲು ಕೊಡುತ್ತವೆ; ಆಡು ಕುರಿಗಳು ಬೇಸಾಯಕ್ಕೆ ಬೇಕಾದ ಅತ್ಯುತ್ತಮ ಗೊಬ್ಬರ ನೀಡುತ್ತವೆ. ಆಗಾಗ ಅವರ ಆರ್ಥಿಕ ಆವಶ್ಯಕತೆಗಳನ್ನು ಪೂರೈಸುವ ಸರಕಾಗುತ್ತವೆ. ಕೆಲವೊಮ್ಮೆ ಆಹಾರವೂ ಆಗುತ್ತವೆ. ಈ ಪಶುಪ್ರೀತಿಯ ಹಿಂದೆ ಉಪಕಾರ ಸ್ಮರಣೆಯೂ ಇದೆ; ಸ್ವಾರ್ಥವೂ ಇದೆ. ಸ್ವಾರ್ಥವೆಂದರೆ ಅವು ಚೆನ್ನಾಗಿ ತಿಂದುಂಡು ಆರೋಗ್ಯವಾಗಿ ಬೆಳೆದರೆ ಶಕ್ತಿಯುತವಾಗಿ ಕೆಲಸ ಮಾಡುತ್ತವೆ. ಹಾಲು ನೀಡುತ್ತವೆ. ಪುಷ್ಕಳವಾದ ಆಹಾರವಾಗುತ್ತವೆ. ಈ ಸ್ವಾರ್ಥ ಭಾಗವನ್ನು ನೇತ್ಯಾತ್ಮಕ ದೃಷ್ಟಿಯಿಂದ ನೋಡಿ ಹೀಗಳೆಯಬೇಕಾಗಿಲ್ಲ. ಇದೂ ಒಂದು ಬೆಳೆ! ಬೆಳೆ ಬೆಳೆಯಲು ಜಮೀನಿಗೆ ಸರಿಯಾದ ರೀತಿಯಲ್ಲಿ ಆ ಬಾದು ಮಾಡುವುದಿಲ್ಲವೇ? ಇದೂ ಅದೇ ರೀತಿ. ಇಲ್ಲಿ ಹಿಂಸೆ-ಅಹಿಂಸೆಯ ವ್ಯಾಖ್ಯಾನ ಅಪ್ರಸ್ತುತ. ಸೊಗಸಾಗಿ ಬೆಳೆದ ಬೆಳೆಯನ್ನು ನೋಡಿ ವರ್ಷದ ಕೂಳನ್ನು ಕನಸುವ ಮನೋಧರ್ಮಕ್ಕಿಂತ ಇದು ಭಿನ್ನವಲ್ಲ. ರೈತ ಬೆಳೆಯನ್ನು ಪ್ರೀತಿಸುತ್ತಾನೆ. ಅದೇ ರೀತಿ ಪಶು ಬೆಳೆಯನ್ನೂ ಪ್ರೀತಿಸುತ್ತಾನೆ.

ಪಶುಗಳನ್ನು ಚೆನ್ನಾಗಿ ಸಾಕಬೇಕೆಂಬ ಬೆಳೆಸಬೇಕೆಂಬ ದೃಷ್ಟಿಯಿಂದ ಕೃಷಿ ಕುಟುಂಬದಲ್ಲಿ ಒಂದು ಕಲಗಚ್ಚನ್ನು ಕಟ್ಟುತ್ತಿದ್ದರು. 'ಕಲಗಚ್ಚು' ಎಂದರೆ ದೊಡ್ಡ ಬಾಯಿಯಿರುವ ದೊಡ್ಡ ಹೊಟ್ಟೆಯ ಮಣ್ಣಿನ ಪಾತ್ರೆ. ಅದರಲ್ಲಿ ಪಶುಗಳು ಬಾಯಿ ಹಾಕಿ ಅಲ್ಲಿರುವ ದ್ರವವನ್ನು ಕುಡಿಯುತ್ತವೆ. ಅದರಲ್ಲಿರುವ ದ್ರವವನ್ನು ಬರೀ ನೀರೆಂದರೆ ತಪ್ಪಾಗುತ್ತದೆ. ಅದರಲ್ಲಿ ಊಟ ಮಾಡಿದ ತಟ್ಟೆಗಳನ್ನು ತೊಳೆದ ನೀರು ಇರುತ್ತದೆ; ಬಳಸಿ ಮಿಕ್ಕಿದ ಸಾರು, ಅನ್ನ, ಮುದ್ದೆ, ನೀರುಮಜ್ಜಿಗೆ ಮುಂತಾದ ಬಗೆಬಗೆ ರುಚಿಯ ಸ್ವಾದದ ಬೆರಕೆಗಳು ಸೇರಿರುತ್ತವೆ. ಈ ಎಲ್ಲಾ

ಸಂಕೀರ್ಣ ಅಂಶಗಳು ಸೇರಿ ಹುಳಿ ಬಂದು ವಿಶಿಷ್ಟ ಬಗೆಯ ರುಚಿ ಮೂಡಿರುತ್ತದೆ. ಈ ರುಚಿಯ ಮೋಡಿಗೆ ಮರುಳಾದ ಪಶುಗಳು ಅದನ್ನು ಕುಡಿಯಲು ಉತ್ಸುಕವಾಗುತ್ತವೆ. ಈ ಬೆರಕೆ ದ್ರವ ಮತ್ತಷ್ಟು ಸ್ವಾದಿಷ್ಟವೂ ಶಕ್ತಿದಾಯಕವೂ ಆಗಲೆಂದು ರೈತರು ಹುರಳಿನುಚ್ಚು-ಹಿಂಡಿ ಮುಂತಾದವುಗಳನ್ನು ಕಲಗಚ್ಚಿಗೆ ಬೆರೆಸುತ್ತಿದ್ದುದು ಉಂಟು.

ಇಂದು ಕಲಗಚ್ಚು ಕೃಷಿ ಸಂಸ್ಕೃತಿಯಿಂದ ಮರೆಯಾಗುತ್ತಿದೆ. ಎಂಜಲು, ತೊಳೆದ ನೀರು, ಹಳಸಿದ ಹುಳಿ ಬಂದ ದ್ರವ ತುಂಬಿದ ಈ ಮಣ್ಣಿನ ದೊಡ್ಡ ಬೋಗಾನಿ ಹೊಸ ತಲೆಮಾರಿಗೆ ಅಪರಿಚಿತ ವಸ್ತು. ಇದು ಹುಳಿ ಬಂದ ದ್ರವದ ಉಗ್ರಾಣವೆಂದು ಅವಹೇಳನ ಮಾಡಬಾರದು. ಇಂಥ ಹಳಸಿದ ವಸ್ತುಗಳಿಂದಲೇ ಹೊಸ ಶಕ್ತಿ ಸೃಷ್ಟಿಯಾಗುತ್ತದೆ. ಈ ದ್ರವ ಕುಡಿದ ಪಶುಗಳಿಂದ ಹೊಸ ಹಾಲಾಗಿ ರೂಪಾಂತರಗೊಳ್ಳುತ್ತದೆ. ಕೃಷಿ ಸಂಸ್ಕೃತಿಯ ರೈತ ಕುಟುಂಬದ 'ತೊಟ್ಟಿ ಮನೆ'ಯ ಕಲ್ಪನೆಯನ್ನು ಈಗ ನಾವು ಮಾಡಿಕೊಳ್ಳಬೇಕಾಗಿದೆ. ಈ ತೊಟ್ಟಿಮನೆಯ ಒಂದು ಮೂಲೆಯಲ್ಲಿ ನಾರುವಂತೆ ತೋರುತ್ತಾ ಪಶುಗಳಿಗೆ ಬಲು ಪ್ರಿಯವಾಗಿದ್ದ ಕಲಗಚ್ಚು ಇಂದು ನಾಶವಾಗುತ್ತಿದೆ. ಪ್ರತಿದಿನ ಕುಟುಂಬಗಳಲ್ಲಿ ಆಧುನಿಕ ಸಿಂಕುಗಳಲ್ಲಿ ದ್ರವರೂಪದ ಶಕ್ತಿ ಸುಮ್ಮನೆ ವ್ಯಯವಾಗುತ್ತಿದೆ.

೦೪-೦೬-೨೦೦೯

# ಹಸುರು

ತಾಯಿ ವಸುಂಧರೆ ತನ್ನ ಗರ್ಭದಲ್ಲಿ ಅದೆಂಥಾ ಶಕ್ತಿ ಅಡಗಿಸಿಟ್ಟುಕೊಂಡಿದ್ದಾಳೋ ಏನೋ? ಸರಿ ಸುಮಾರು ಆರು ತಿಂಗಳು ಸುಡುಬಿಸಿಲಲ್ಲಿ ಬೆಂದು ರಾತ್ರಿ ಚಳಿಯಲ್ಲಿ ನಡುಗಿ ಹಣ್ಣಾಗಿ ಭೂರಮೆಯ ಮೈಮೇಲಿನ ಸಸ್ಯ ಸಂಪತ್ತೆಲ್ಲಾ ಸಾಕಪ್ಪಾ ಸಾಕು ಈ ಬದುಕು' ಎಂದಂತೆ ತೋರಿ ತನ್ನೆಲ್ಲಾ ಎಲೆಗಳನ್ನೆಲ್ಲ ಉದುರಿಸಿಕೊಂಡು ಬೋಳಾಗಿ ನಿಂತುಬಿಡುತ್ತದೆ. ಹಗಲಿನ ಸುಡುಬಿಸಿಲಿಗೆ ರಾತ್ರಿಯ ಶೀತಲ ಕೊರೆಗೆ ನೀರಿಲ್ಲದ ತೀರದ ದಾಹಕ್ಕೆ 'ಸಸ್ಯ ಸಮೂಹವೆಲ್ಲಿ ಸತ್ತು ಹೋದೀತೋ' ಎಂಬ ಗಾಬರಿ ಹುಟ್ಟಿಸುತ್ತದೆ.

ಆದರೆ ತಾಯಿ ವಸುಂಧರೆ ತನ್ನ ಗರ್ಭದಲ್ಲಿ ರಹಸ್ಯವಾಗಿಟ್ಟುಕೊಂಡಿರುವ ನಿಗೂಢ ಶಕ್ತಿಯಿಂದ, ನೀರಿಲ್ಲದ ಒಣಭೂಮಿಯ ನಡುವಿನಿಂದಲೇ ತನ್ನ ಸಸ್ಯ ಮಕ್ಕಳ ಮೈತುಂಬ ಹಸುರು ಚಿಗುರಿಸಿ ನಗುತ್ತಾಳೆ. ಅದು ಸುಡು ಸುಡು ಬೇಸಿಗೆಯಲ್ಲಿ! ಅದನ್ನು ವಸಂತವೆಂದೋ ಚೈತ್ರವೆಂದೋ ನಮ್ಮ ಕವಿಗಳು ಕರೆದು ವರ್ಣಿಸಿ ಸಂಭ್ರಮಿಸುತ್ತಾರೆ. ಆ ಚಿಗುರಾದರೂ ಎಂಥ ಕೋಮಲ! ಎಷ್ಟು ಅಮಲ ಮಧುರ ಕ್ರೂರ ಬಿಸಿಲನ್ನು ಸಹಿಸಿ ತನ್ನ ಸಂದು ಸಂದುಗಳಲ್ಲಿ ಹೂಬಿಟ್ಟು ತೂಗಿ ವರ್ಣರಂಜಿತವಾಗುತ್ತದೆ. ಸಂಕುಲ ಮುಂದುವರಿಸುವ ಸಹಜ ಕಾಯಕಕ್ಕೆ ಮುಂದಾಗುತ್ತದೆ.

ತಾಯಿ ಭೂರಮೆಯ ಮೈ ತುಂಬ ಹಸುರು ಮೈದುಂಬುತ್ತದೆ. ಎತ್ತ ನೋಡಿದರೂ ಹಸುರು! ನೆಲದ ಹಾಸು ಮರಗಿಡ ಬಳ್ಳಿ ಸಮಸ್ತವೂ ಹಸುರಾಗಿ ತಾನೇ ತಾನಾಗುತ್ತದೆ. ಭೂರಮೆಯ ಬಯಕೆಯನ್ನು ಈಡೇರಿಸದೆ ತಾನು ಬದುಕಲಾರೆ ಎಂಬಂತೆ ವರುಣ ಮಹಾಶಯನು ಮುಂಗಾರು ಧಾರೆಯಾಗಿ ಸಿಂಪಡಿಸಿ, ಹರಿದು ಚೆಲ್ಲಾಟವಾಡತೊಡಗುತ್ತಾನೆ. ಆಗ ತನ್ನ ಮೈ ತುಂಬ ನೀರು ಕುಡಿದು ಮುಕ್ಕಳಿಸುವವಳಂತೆ ಭೂರಮೆ ಹಸಿರಾಗಿ ಹಸಿರುಟ್ಟು ತೂಗುತ್ತಾಳೆ. ತೊನೆಯುತ್ತಾಳೆ. ಅಂಥ ಹಸುರು ಕವಿ ಕುವೆಂಪು ಅವರ ಆತ್ಮವೂ 'ಹಸುರ್ಗಟ್ಟು'ವಂತೆ ಮಾಡುತ್ತದೆ. 'ಹಸುರತ್ತಲ್! ಹಸುರಿತ್ತಲ್! ಹಸುರೆತ್ತಲ್ ಕಡಲಿನಲಿ... ಹಸುರ್ ನೆತ್ತರ್ ಒಡಲಿನಲಿ!' ಎಂಬಂತಾಗಿ ಅವರು ಹಸುರೇ ಆಗಿಬಿಡುತ್ತಾರೆ. ಈ ಹಸುರ್ಕಡಲಿನಲ್ಲಿ ಒಂದಾಗಿ ಬೆರೆತು ಹೋಗುವ ಕುವೆಂಪು ಅವರಿಗೆ ಎಲ್ಲವೂ ಹಸುರಾಗಿಯೇ ಕಂಡುಬಿಡುತ್ತದೆ? 'ಹಸುರಾಗಸ ಹಸುರು ಮುಗಿಲು ಹಸುರು ಗದ್ದೆಯಾ ಬಯಲು ಹಸುರಿನ ಮಲೆ ಹಸುರು ಕಣಿವೆ; ಹಸುರು ಸಂಜೆಯ ಬಿಸಿಲು!' ಕವಿಯನ್ನು ಈ ತೆರನಾಗಿ ಒಳಗು ಮಾಡಿಕೊಳ್ಳುವುದು ಭೂತಾಯಿಗೆ ದೊಡ್ಡದಲ್ಲ. ಆದರೆ ಹಸುರು ಸೌಂದರ್ಯಕ್ಕೆ ಸಾಮಾನ್ಯಾತಿಸಾಮಾನ್ಯರು ಕೂಡ ಮರುಳಾಗುತ್ತಾರೆ; ಬೆರಗಾಗಿ ಮೈಯೆಲ್ಲಾ ಕಣ್ಣಾಗುತ್ತಾರೆ.

ದೂರಕ್ಕೆ - ಪಕ್ಷಿನೋಟಕ್ಕೆ ಬಯಲ ಹಸುರೆಲ್ಲ ಒಂದೇ ಬಣ್ಣವೆಂಬಂತೆ ತೋರುತ್ತದೆ. ಆದರೆ ಅದರ ಹತ್ತಿರ ಹೋದಾಗ, ಅದರ ಸೂಕ್ಷ್ಮತೆಯಲ್ಲಿ ಪ್ರತಿ ಸಸ್ಯಸಂಕುಲವೂ ತನ್ನ ಭಿನ್ನತೆಯನ್ನು ಕಾಯ್ದುಕೊಂಡಿರುವುದು ಕಂಡುಬರುತ್ತದೆ. ಎಲ್ಲಾ ಜಾತಿಯ ಸಸ್ಯ ಸಂಪತ್ತು ಹಸುರೆಂಬಂತೆ ತೋರಿದರೂ ಹುಲ್ಲಿನಂತೆ ಗಿಡವಿಲ್ಲ; ಒಂದು ಜಾತಿಯ ಮರದಂತೆ ಮತ್ತೊಂದು ಜಾತಿಯ ಮರದ ಹಸುರಿಲ್ಲ; ಒಂದು ಬಳ್ಳಿಯ ಹಸುರಂತೆ ಮತ್ತೊಂದು ಬಳ್ಳಿಯ ರೂಪವಿಲ್ಲ. ಇದು ಭಾರತೀಯ ಸಂಸ್ಕೃತಿಯಿದ್ದಂತೆ! ಏಕತೆಯ ರೂಪದಲ್ಲಿರುವ ವಿವಿಧ ಬಣ್ಣಗಳಿರುವಂತೆ; ಭಿನ್ನ ಭಿನ್ನ ರೇಖೆಗಳಿರುವಂತೆ - ಏಕತೆಯಲ್ಲಿ ಅನೇಕತೆ. ಈ ಅನೇಕತೆಯ ಒಟ್ಟು ರೂಪದಲ್ಲೊಂದು ಸಾದೃಶ್ಯತೆ! ಇಂಥ ನೆಲೆಯಲ್ಲಿ ನಿಂತು ನೋಡಿದಾಗ ಹಸುರು ಒಂದೇ 'ರೂಪದ್ದು' ಎಂದಾದರೂ ಅದು ಎಂದೂ ಕಣ್ಣಿಗೆ ಬೇಸರ ಮೂಡಿಸದಿರುವ ರಹಸ್ಯದ ಸುಳಿವು ದೊರಕುತ್ತದೆ.

ಹಸುರು ಜೀವಂತಿಕೆ ಸಂಕೇತ; ಸಮೃದ್ಧಿಯ ಸಂಕೇತ. ಜೀವವಾಹಿನಿಯ ಮುಂದುವರಿಕೆಯ ರೂಪಕವಾದ ಹಸುರನ್ನು ನಾವಿಂದು ಕಬಳಿಸಲು ಯತ್ನಿಸುತ್ತಿದ್ದೇವೆ. ನಮ್ಮ ಸುತ್ತಮುತ್ತಲ ಸಸ್ಯ ಶ್ಯಾಮಲತ್ವವನ್ನು ನಾವು ಕಾಪಾಡಿಕೊಳ್ಳುವುದರಲ್ಲಿ ನಮ್ಮ ಉಳಿವಿದೆ ಎಂಬ ಸತ್ಯವನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ. ಆಧುನಿಕ ಪರಿಸರ ಪ್ರಜ್ಞೆಯು ಈ 'ಹಸುರು ವಲಯ'ವನ್ನು ಉಳಿಸಿಕೊಳ್ಳುವ ಹೋರಾಟವನ್ನು ಹಮ್ಮಿಕೊಂಡಿದೆ.

೦೨-೦೭-೨೦೦೯

# ಸುಗ್ಗಿ ಬೆಳೆ

ಕೃಷಿಯಾಧಾರಿತ ನಾಡಾಗಿರುವ ನಮ್ಮ ದೇಶದಲ್ಲಿ ಸುಗ್ಗಿಗೆ ಅತ್ಯಂತ ಮಹತ್ತ್ವದ ಸ್ಥಾನವನ್ನು ನೀಡಲಾಗಿದೆ. ಸುಗ್ಗಿಯಲ್ಲಿ ರೈತನ ಸಂತೋಷಕ್ಕೆ ಎಣೆಯಿಲ್ಲ. ಅವನ ವರ್ಷದ ದುಡಿಮೆ ಅನ್ನವಾಗಿ ಕೈಗೆ ಬಂದು ಕಣಜ ತುಂಬುವ ಸಮಯವದು. ಭೂತಾಯಿ ಕಾಪಾಡಿ, ವರುಣ ನೀರು ನೀಡಿ ಸೂರ್ಯದೇವನ ಶಾಖದಿಂದ ಫಲಿತು ಫಲವಾಗಿ ಧಾನ್ಯ ಮನೆ ತುಂಬಿತು ಎಂದರೆ ರೈತನ ಶ್ರಮ ಸಾರ್ಥಕವಾಯಿತೆಂದೇ ಅರ್ಥ. ಒಂದು ಸುಗ್ಗಿಯಿಂದ ಮತ್ತೊಂದು ಸುಗ್ಗಿಯವರೆಗೆ ನೆಮ್ಮದಿಯಿಂದ ಇರಲು, ಅವನ ತುತ್ತಿನ ಚೀಲ ಮತ್ತು ಬೇಕು ಬೇಡಿಕೆಗಳು ಈಡೇರಲು ಸುಗ್ಗಿ ಕಾರಣವಾಗುತ್ತದೆ. ಅದಕ್ಕೆಂದೇ ಸುಗ್ಗಿ ಎಂದರೆ ಅವನಿಗೆ ಸಂಭ್ರಮಿಸುವ ಹಿಗ್ಗು. ಸುಗ್ಗಿಯಲ್ಲಿ ಬಡವನ ಮನೆಗೂ ಧಾನ್ಯಲಕ್ಷ್ಮಿ ಹರಿದು ಬರುತ್ತಾಳೆ; ದನಕರುಗಳಿಗೂ ಯಥೇಚ್ಛ ಮೇವು ಸಿಗುತ್ತದೆ; ಪಕ್ಷಿಗಳಿಗಂತೋ ತಿಂದುಂಡು ತೊನೆಯುವಷ್ಟು ಕಾಳುಗಳು!

ಸುಗ್ಗಿಯ ಸಂಭ್ರಮಕ್ಕೆ ಮತ್ತೊಂದು ವಿಷಾದದ ಕಾರಣವೂ ಇದೆ. ಭಾರತ ಕೃಷಿ ಸಮಾಜ ಮೂಲತಃ ಊಳಿಗಮಾನ್ಯ ವ್ಯವಸ್ಥೆಯದು. ಇಲ್ಲಿ ಕೃಷಿ ಕಾರ್ಮಿಕರೇ ಅಧಿಕ. ಜಮೀನ್ದಾರ ಬೆಳೆದ ಬೆಳೆಯನ್ನೆಲ್ಲ ಲಪಟಾಯಿಸಿ ಗಂಟು ಕಟ್ಟುತ್ತಾನೆ. ಆದರೆ ಬಡವರಿಗೆ ಸುಗ್ಗಿಯಲ್ಲಿ ಒಂದಷ್ಟು ಕಾಲ ಹೊಟ್ಟೆಯ ತುಂಬ ಊಟ ದೊರಕುತ್ತದೆ. ಹೆಂಡತಿ ಮಕ್ಕಳ ಮುಖದಲ್ಲಿ ತೃಪ್ತಿ ಮೂಡುತ್ತದೆ. ಈ ತೃಪ್ತಿಯೇ ಸಂಭ್ರಮಕ್ಕೆ ಕಾರಣವಾಗುತ್ತದೆ. ಧಣಿ ನೀಡಿದ ಧಾನ್ಯದ ದಾಸ್ತಾನು ಮುಗಿದ ಮೇಲೆ ಅರೆಹೊಟ್ಟೆಯ ಬದುಕು ಪುನಃ ಪ್ರಾರಂಭವಾಗುತ್ತದೆ. ಬದುಕು ಮತ್ತೆ ಅಸಹಾಯಕತೆಯ ನರಳಾಟದಲ್ಲಿ ಮುಂದುವರಿಯುತ್ತದೆ. ಇಂಥ ಬಡಬಗ್ಗರ ಬದುಕಲ್ಲಿ ಕೆಲವಷ್ಟು ದಿನಗಳಾದರೂ ತೃಪ್ತಿ ತರಲು ಈ ಸುಗ್ಗಿ ಕಾರಣವಾಗುತ್ತದೆ. ಆದ್ದರಿಂದಲೇ ನಮ್ಮ ಕವಿಗಳು ಸುಗ್ಗಿಯ ಬಗ್ಗೆ ಹಾಡುಕಟ್ಟಿ ಆನಂದಿಸುತ್ತಾರೆ; ರೈತರು ಗೆಜ್ಜೆ ಕಟ್ಟಿ ನರ್ತಿಸುತ್ತಾರೆ.

ನಮ್ಮ ಕವಿ ಬೇಂದ್ರೆ ತಮ್ಮ ಪದ್ಯವೊಂದರಲ್ಲಿ ಈ ಸಾಲನ್ನು ಬರೆಯುತ್ತಾರೆ: 'ಸಾವಿಗೆ ಬರುತ್ತಿತ್ತು ಸುಗ್ಗಿ ಬೆಳೆ' ನೋಡಿ - ನಮ್ಮ ಸಾಂಪ್ರದಾಯಿಕ ಸುಗ್ಗಿಯ ಕಲ್ಪನೆಯನ್ನು ಈ ಮಾತು ಒಡೆದು ನುಚ್ಚು ನೂರು ಮಾಡಿ ವಿಷಾದದ ಅಲೆಗಳನ್ನು ಎದೆಯಲ್ಲಿ ಮೂಡಿಸುತ್ತದೆ. ಮಾನವ ಬದುಕಿನಲ್ಲಿ ನಿರಂತರವಾಗಿ ತೆಗೆಯುತ್ತಿರುವ ಸಾವಿನ ಬೆಳೆಯ ಬಗ್ಗೆ ಈ ಮಾತು ಗಮನ ಹರಿಸುತ್ತದೆ. ಸಾವು ನಮ್ಮ ಬದುಕಿನಲ್ಲಿ ಎರಡು ಹಾದಿಗಳಲ್ಲಿ ಬರಬಹುದು. ಒಂದು - ಸಹಜವಾದ ದಾರಿ. ಬರಲೇಬೇಕಾದದ್ದು; ಬರುವಂಥದ್ದು. ಅಂತಿಮ ಸತ್ಯ! ಆದರೆ ಅದನ್ನು ಯಾರೂ ತಮ್ಮ ಎರಡು ಕೈಗಳನ್ನು ನಿಡಿದಾಗಿ ನೀಡಿ ಸ್ವಾಗತಿಸುವುದಿಲ್ಲ. ಅದು ಬಂದಾಗ

ಒಪ್ಪಿಕೊಳ್ಳುವ ಸ್ಥಿತಿಗೆ ನಾವು ಬೆಳೆಯಬೇಕಷ್ಟೆ. ಮತ್ತೊಂದು ಹಾದಿಯೂ ಇದೆ: ಅದು ಪ್ರಕೃತಿ ತಂದೊಡ್ಡುವ ಅಸಹಜದ ಹಾದಿಯದು. ಹಿಂದಿನ ಕಾಲದಲ್ಲಿ ಮಾರಕ ರೋಗಗಳು ಬರುತ್ತಿದ್ದವು. ಊರಿಗೆ ಊರಿಗೇ ಸಾವಿನ ಕಣಜವಾಗಿಬಿಡುತ್ತಿದ್ದವು. ಚಂಡಮಾರುತಗಳು, ಸುನಾಮಿಗಳು, ಜ್ವಾಲಾಮುಖಿಗಳು ಭೂಕಂಪಗಳು ಸಾವಿನ ಫಸಲನ್ನು ಸಮೃದ್ಧಗೊಳಿಸುತ್ತಿದ್ದವು. ಇದೊಂದು ಪ್ರಕೃತಿ ಮಾನವನನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ನಡೆಸುತ್ತಿದ್ದ ಯುದ್ಧ. ಈ ಯುದ್ಧದಲ್ಲಿ ಮನುಷ್ಯ ನಿರಂತರವಾಗಿ ಸೆಟೆದುನಿಂತು ಹೋರಾಡುತ್ತಿದ್ದ ಸೋಲುತ್ತಿದ್ದ ಸಾಯುತ್ತಿದ್ದ. ಸೋತೂ ಗೆಲ್ಲುತ್ತಿದ್ದ.

ಮಾನವನು ಪ್ರಕೃತಿಗಿಂತ ತಾನೇನು ಕಡಿಮೆ ಎಂಬಂತೆ ಸಾವಿನ ಬೆಳೆಯನ್ನು ತೆಗೆಯಲು ಹಿಂದೆ ಬಿದ್ದಿಲ್ಲ. ಅದೇ ಯುದ್ಧಗಳು ಜಾತಿ ವರ್ಣ ಮತಗಳೆಂಬ ಅಹಂಕಾರದಿಂದ, ಅಧಿಕಾರ ದಾಹದಿಂದ ಕೊಲ್ಲುವ ಕಾಯಕದಲ್ಲಿ ಅವನು ಸದಾ ನಿರತ. ಅದು ತಪ್ಪು ಎಂದು ಬುದ್ಧ ಏಸು ಗಾಂಧಿಯಂಥವರು ಬುದ್ಧಿ ಹೇಳಿದರೂ ಮನುಷ್ಯ ತನ್ನ ಈ ರಕ್ತಪಿಪಾಸೆಯ ಬುದ್ಧಿಯನ್ನು ಬಿಡಲೊಲ್ಲ. ಇಂದು ರಾಸಾಯನಿಕ ಅಸ್ತ್ರಗಳ ಮೂಲಕ ಮತ್ತಷ್ಟು ಭಯಾನಕನಾಗಿ ಅವನು ಸಾವಿನ ಬೆಳೆಯನ್ನು ತೆಗೆಯಲು ಸಜ್ಜಾಗಿದ್ದಾನೆ. ಅದು ಮಾನವತೆಗೆ ಎಸಗುವ ಮಹಾ ದ್ರೋಹವೆಂಬುದನ್ನು ಮರೆತಿದ್ದಾನೆ. ಕವಿವಾಣಿ ಮತ್ತೆ ಮತ್ತೆ ಎದೆಯಲ್ಲಿ ವಿಷಾದದ ಅಲೆಗಳನ್ನು ಎಬ್ಬಿಸುತ್ತದೆ.

೦೬-೦೨-೨೦೦೯

# ಗೊಬ್ಬರ

ಸೃಷ್ಟಿಯಾದುದೆಲ್ಲವೂ ತನ್ನ ಜೀವನದ ಅಂತ್ಯದಲ್ಲಿ ಗೊಬ್ಬರವಾಗುವುದು ಕಟುವಾಸ್ತವ ಸತ್ಯ. ಪುನರ್ಜನ್ಮದ ಬಗ್ಗೆ ನಂಬಿಕೆ ಇರುವವರ ದೇಹವೂ ಅಂತ್ಯದಲ್ಲಿ ನಾಶವಾಗಿ ಗೊಬ್ಬರವಾಗಬೇಕು; ಅಂಥವರ ಆತ್ಮವೂ ಕೂಡ ಅಂತ್ಯದಲ್ಲಿ ಮಾಗಿ ಮಾಗಿ ಮೆದುವಾಗಿ ವಿಜ್ಞಾನ ಸತ್ಯವಾದ ಸಂಗತಿಗಳಲ್ಲಿ ಐಕ್ಯವಾಗಲೇಬೇಕು. ಆಧ್ಯಾತ್ಮಿಕ ನೆಲೆಯಲ್ಲಿ ನಿಂತು ನೋಡಿದಾಗ ಗೊಬ್ಬರ ಅಸಹ್ಯಯೋಗ್ಯವಲ್ಲ; ಸ್ವೀಕಾರಯೋಗ್ಯ. ರೈತ ಬದುಕಿನ ಅತ್ಯಮೂಲ್ಯ ಸಂಗತಿಯಾದ ಗೊಬ್ಬರವು ಸತ್ತ್ವಗಳ ಆಗರ! ಅದು ಬಂಜರಲ್ಲ. ಸಮಸ್ತ ಜೀವಿಗಳ ಸಾವಯವ ಸತ್ತ್ವವನ್ನು ಒಳಗೊಂಡು ಸೃಷ್ಟಿಶಕ್ತಿಗೆ ಪೂರಕ ಶಕ್ತಿಯಾಗಿ ಕೆಲಸ ಮಾಡಲು ಹೊರಟ ಜೀವಸತ್ತ್ವ. ಅಂದಮೇಲೆ ಅದನ್ನು ತುಚ್ಛವೆಂದು ಕರೆಯಲಾದೀತೆ?

ಆದರೆ ನಮ್ಮ ಲೌಕಿಕ ಬದುಕಿನಲ್ಲಿ ಗೊಬ್ಬರವನ್ನು ಅತ್ಯಂತ ತುಚ್ಛವಾಗಿ ನೋಡಲಾಗುತ್ತದೆ. ಅದರ ಹೊರ ರೂಪವನ್ನು ಅನುಲಕ್ಷಿಸಿ ಅಸ್ಪೃಶ್ಯವೆಂದು ಬಗೆಯಲಾಗುತ್ತದೆ. ಅದು ರೋಗಕಾರಕವೆಂದೂ, ತ್ಯಾಜ್ಯವಸ್ತುವಾದುದರಿಂದ ಅದು ಬಳಕೆ ವ್ಯಾಪ್ತಿಯಿಂದ ದೂರವಿರಬೇಕೆಂದು ಸ್ಥಾನ ನಿರ್ಧಾರವಾಗಿದೆ. ಅದು ಊರ ಹೊರಗಿರಬೇಕು. ತಿಪ್ಪೆಯಲ್ಲಿ ಶೇಖರವಾಗಬೇಕು. ಅದನ್ನು ಮುಟ್ಟಲು, ಬಳಸಲು ಸಮಾಜದ ಕೆಳವರ್ಗದವನೇ ಆಗಿರಬೇಕು. ಸಮಾಜದ ಮೇಲ್ವರ್ಗ ಅದನ್ನು ಸ್ಪರ್ಶಿಸಿದರೆ ಮಡಿಯಾಗುತ್ತದೆ ಎಂಬ ತಾರತಮ್ಯ ಭಾವ ಬೆಳೆಯಿತು. ಅದರಿಂದಾಗಿ ಅದರೊಡನೆ ಒಡನಾಡುವ ವ್ಯಕ್ತಿ ಶೂದ್ರನಾದ. ದಲಿತನಾದ. ಅದನ್ನು ಮುಟ್ಟಿದರೆ ಅಸ್ಪೃಶ್ಯನಾದ. ಅದರಿಂದ ದೂರವಿದ್ದವನು ಸವರ್ಣೀಯನಾದ; ಗೌರವಸ್ಥಾನ ಪಡೆದ. ಹೀಗಾಗಿ ಗೊಬ್ಬರ ದಲಿತರ ಸಂಕೇತವಾಯಿತು, ದುಡಿಮೆಯ ಬೆವರಿನ ರೂಪಕವಾಯಿತು. ದಲಿತರದ್ದೇ ಆದ ಕಾಯಕ ಸಂಬಂಧಿ ಅಸ್ಪೃಶ್ಯ ಜಾತಿಗಳು ಸೃಷ್ಟಿಯಾದವು. ಕೈ ಕೊಳೆ ಮಾಡಿಕೊಳ್ಳದವರದು ಉತ್ತಮ ಜಾತಿಯವರೆಂದು ತಮಗೆ ತಾವು ಬೀಗಿದರು. ತಮ್ಮನ್ನು ಬುದ್ಧಿವಂತರೆಂದು ವಿದ್ಯಾವಂತರೆಂದು ಕರೆದುಕೊಂಡು ಕೂತುಣ್ಣುವ ಶೋಷಕರಾದರು.

ಕವಿ ಕುವೆಂಪು ಅವರು ಗೊಬ್ಬರದ ಬಗ್ಗೆ ಸಮಾಜದ ಮೇಲ್ವರ್ಗ ಜಾತಿಗಳಿಗೆ ಇರುವ ಧೋರಣೆಯನ್ನು ಹೀಗೆ ಪ್ರಶ್ನಿಸುತ್ತಾರೆ : "ಗೊಬ್ಬರವನಲ್ಲಗಳೆಯುವೆ ಏಕೆ ಮರದಿ ತುದಿ ನಲ್ಗಂಪು ವೆತ್ತು ತಂಗಾಳಿಗೊಲೆಯುವ ಹೂವೆ? ಬೇರುಗಳಿಗಿಲ್ಲದಿರೆ ಗೊಬ್ಬರಂ, ಹೇಳೆನಗೆ ವೃಕ್ಷಕೆಲ್ಲಿಯದು ಹೂವಿನ ಹಬ್ಬ?" ಇಲ್ಲಿ ಕುವೆಂಪು ಹೂವನ್ನು ಮೇಲ್ವರ್ಗ/ ಜಾತಿಗೆ ಸಂಕೇತಿಸಿ ಮಾತನಾಡುತ್ತಿದ್ದಾರೆ. ಗೊಬ್ಬರದ ಸತ್ತ್ವದಿಂದಾಗಿಯೇ ಹೂವಿಗೆ ಸೊಗಸು ಬಂದಿದೆ; ಮೇಲ್ವರ್ಗಕ್ಕೆ

ಸುಖ ಪ್ರಾಪ್ತವಾಗಿದೆ. ಶ್ರೀಮಂತರ ಜೀವನಕ್ಕೆ ಸೊಗಸನ್ನೂ ಸುಖವನ್ನೂ ತಂದುಕೊಡುವ ಗೊಬ್ಬರವಿಲ್ಲದಿದ್ದರೆ 'ಹಬ್ಬ'ದ ಅನುಭವವಾಗುವುದು ಅಸಾಧ್ಯ? ಆದುದರಿಂದ ಗೊಬ್ಬರವನ್ನು ಅಲ್ಲಗಳೆಯುವ ಕೆಲಸ ಸಲ್ಲದು ಎಂದು ಕುವೆಂಪು ಎಚ್ಚರವನ್ನು ನೀಡುತ್ತಾರೆ.

ಸದಾ ಮಣ್ಣಿನಲ್ಲಿ ಮಣ್ಣಾಗಿ ದುಡಿವ ರೈತ, ರೈತ ಕಾರ್ಮಿಕ; ಕೆಸರಲ್ಲಿ ಕೆಸರಂತೆ ಕೆಲಸ ಮಾಡುವ ಜಲಗಾರ ಮುಂತಾದ ಶ್ರಮಿಕರ ದುಡಿಮೆಯ ಫಲವಾಗಿ ಶ್ರೀಮಂತರ ಸುಖದ ಅರಮನೆ ನಗುತ್ತಿದೆ; ಅವರೂ ಅವರ ಮಕ್ಕಳುಮರಿ ತಿಂದುಂಡು ಉಟ್ಟು ನಲಿಯುತ್ತಾರೆ. ಆದರೆ ಅವರಿಗಾಗಿ ದುಡಿದು ಗೊಬ್ಬರವಾಗುವ ಶ್ರಮಿಕರು ಎಲ್ಲ ಬಗೆಯ ಸುಖಗಳಿಂದ ವಂಚಿತರಾಗುತ್ತಾರೆ. ಜೊತೆಗೆ 'ಗೊಬ್ಬರದವರು' ಎಂಬ ತಿರಸ್ಕಾರ ಬೇರೆ!

ಕಾಲ ಬದಲಾಗಿದೆ. ದುಡಿಮೆಯನ್ನು ಗುರುತಿಸುವ ಮನಸ್ಥಿತಿ ಸಿದ್ಧಗೊಂಡಿದೆ. ಗೊಬ್ಬರವೇ ಸಿಂಹಾಸನ ವೇರಿ ರಾಜ್ಯವಾಳುವ ಕಾಲ ಕಣ್ಮುಂದೆ ಇದೆ. ಆದರೆ ಸಮಾಜದ ಮನೋಧರ್ಮ ಗುಣಾತ್ಮಕವಾಗಿ ಇನ್ನೂ ವಿಕಾಸಗೊಂಡಿಲ್ಲ. ಅದನ್ನು ಗುರುತಿಸಿಯೇ ಕುವೆಂಪು ಅವರು "ಹಳಿಯದಿರೊ ಇಂದೊ ನಾಳೆಯೊ ನೀನು ಕೆಳಗುರುಳಿ ಗೊಬ್ಬರದೊಳೊಂದಾಗುವಾ ದಿನ ಮುಂದೆ ಕಾದಿಹುದು" ಎಂದು ವಾಸ್ತವ ಸತ್ಯವನ್ನು ತೆರೆದಿಡುತ್ತಾರೆ. ಹೌದಲ್ಲವೆ? ನಾವು ಕೊನೆಗೊಂದು ದಿನ ನಾವು ಕಟ್ಟಿಕೊಂಡಿರುವ ಎಲ್ಲ ಅಹಂಕಾರದ ತೊಗಲನ್ನು ನಿವಾರಿಸಿಕೊಂಡು ಗೊಬ್ಬರದಲ್ಲಿ ಐಕ್ಯವಾಗಲೇಬೇಕಲ್ಲವೆ? ಅದೇ ನಿಜಾರ್ಥದಲ್ಲಿ ಸಾರ್ಥಕ್ಯವಲ್ಲವೆ?

೩೦-೦೭-೨೦೦೯

# ಇವು ಸಣ್ಣ ಸಣ್ಣ ಸಂಗತಿಗಳು!

ಅತ್ಯಂತ ಬಲಿಷ್ಠವಾದ ಸರಪಳಿಯ ಶಕ್ತಿಯು ಅದರ ಅತಿ ಸಣ್ಣ ಕೊಂಡಿಗಳ ಹಿಡಿತದಲ್ಲಿದೆ ಎಂಬ ಸೂಕ್ತಿಯೊಂದಿದೆ. ಇದು ಭೌತಿಕ ಜಗತ್ತಿನ ಯಂತ್ರ ಜಗತ್ತಿನ ಎಲ್ಲ ವ್ಯವಹಾರಗಳಿಗೂ ಅನ್ವಯವಾಗುವ ಮಾತು. ದೊಡ್ಡ ದೊಡ್ಡ ಬೃಹತ್ ಯಂತ್ರಗಳ, ವಾಹನಗಳ ಗತಿಶೀಲತೆಯು ಒಂದು ಸಣ್ಣ ತಂತಿಯ ಅಥವಾ ವೈರಿನ ಸರಾಗತೆಯ ಮೇಲೆ ನಿಂತಿರುತ್ತದೆ. ಅಪಾರ ಶಕ್ತಿಯ ರಾಕೆಟ್‌ನ ಉಡಾವಣೆ ಕೇವಲ ಒಂದು ಒತ್ತುಗುಂಡಿಯ ಕೆಲಸದ ಮೇಲೆ ಅವಲಂಬಿತವಾಗಿರುತ್ತದೆ. ಸರಿಯಾದ ಸಮಯದಲ್ಲಿ ಅದು ಸರಿಯಾಗಿ ಕೆಲಸ ಮಾಡಬೇಕು. ಅದು ಬಿಟ್ಟು ಸರಿಯಾದ ಸಮಯದಲ್ಲಿ ಅದು ಕೈಕೊಟ್ಟರೆ, ಆಗುವ ಅನಾಹುತವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅದೇ ರೀತಿ ನಮ್ಮ ಮೆದುಳಿಗೆ ರಕ್ತ ಸರಬರಾಜು ಮಾಡುವ ಒಂದು ರಕ್ತನಾಳ ಅಥವಾ ನಮ್ಮ ಜ್ಞಾನ ಮತ್ತು ಪ್ರಜ್ಞಾ ಕೇಂದ್ರಗಳನ್ನು ಸಂಪರ್ಕ ಕಲ್ಪಿಸುವ ಸೂಕ್ಷ್ಮ ನರ ಕೆಲಸ ಮಾಡುವುದನ್ನು ನಿಲ್ಲಿಸಿದರೆ ಮಾನವದೇಹ ಸಾವಿನ ಅಂಚಿಗೆ ಸಾಗುತ್ತದೆ.

ಪ್ರಕೃತಿಯ ಸೃಷ್ಟಿಯಲ್ಲಿ ಯಾವುದೂ ಸಣ್ಣ ಸಂಗತಿಯಲ್ಲ. ಬೃಹತ್ತು ಎಂಬದು ಮೇಲ್ನೋಟಕ್ಕೆ ಮಾತ್ರ ಬೃಹತ್ತು! ಕೋಟಿ ಕೋಟಿ ಅಸಂಖ್ಯಾತ ಸೂಕ್ಷ್ಮಾತಿ ಸೂಕ್ಷ್ಮ ಅಣುಗಳ ಸಂಯೋಜನೆಯಿಂದ ಮಾತ್ರ ಬೃಹತ್ತು ಸೃಷ್ಟಿಯಾಗಲು ಸಾಧ್ಯ. ಅಂದರೆ ಸಣ್ಣದಿಲ್ಲದೆ ದೊಡ್ಡದಿಲ್ಲ. ಕಣ್ಣಿಗೆ ಕಾಣದ ಅಸಂಖ್ಯ ಸಣ್ಣ ಸಂಗತಿಗಳ ಬಹಿರ್ರೂಪವೇ ದೊಡ್ಡದು ಎಂದಾಯಿತು. ಹಾಗೆ ನೋಡಿದರೆ ಸಣ್ಣದ್ದು ಎಂದು ನಾವು ನಿಕೃಷ್ಟವಾಗಿ ಕಾಣುವುದಕ್ಕಿರುವ ಶಕ್ತಿ ದೊಡ್ಡದ್ದಕ್ಕಿರುವುದಿಲ್ಲ. ಈ ಅಣುಕಣಗಳಿಂದ ಕೂಡಿಯೇ ಸೃಷ್ಟಿ ನಿರ್ಮಾಣಗೊಂಡು ಮುಂದೆ ಸಾಗುತ್ತಿರುತ್ತದೆ.

ಇನ್ನು ನಮ್ಮ ಲೌಕಿಕಜೀವನದಲ್ಲಿ ನಾವು ಅನೇಕ ವಿಷಯಗಳನ್ನು ಸಣ್ಣ ಸಂಗತಿಗಳೆಂದು ನಿರ್ಲಕ್ಷ್ಯ ಮಾಡುತ್ತೇವೆ. ಅದರಿಂದಾಗಿಯೇ ಮುಂದೆ ಬೆಲೆ ತೆರಬೇಕಾದ ಪ್ರಸಂಗಗಳು ಉದ್ಭವವಾಗುತ್ತವೆ. ಕಛೇರಿಯ ಕೆಲಸ, ವೃತ್ತಿಯಲ್ಲಿ ಮೇಲೆ ಬರಬೇಕೆಂಬ ಕಾತರದಿಂದಾಗಿ ಮನೆಯನ್ನು ನಿರ್ಲಕ್ಷಿಸುತ್ತೇವೆ. ಹಣ ಸಂಪಾದನೆಯ ಭರದಲ್ಲಿ ಮಕ್ಕಳ ಬಾಲ್ಯವನ್ನು ಮರೆಯುತ್ತೇವೆ; ಹೆಂಡತಿಗಾಗಿ ನಿರ್ವಹಿಸಬೇಕಾದ ಗಂಡನ ಕರ್ತವ್ಯವನ್ನು ಮರೆಯುತ್ತೇವೆ. ಮಗನಾಗಿ, ತಂದೆಯಾಗಿ, ಗಂಡನಾಗಿ, ಸಮುದಾಯ ಜೀವಿಯಾಗಿ ನಮ್ಮ ಪಾಲುಗಾರಿಕೆಯ ಕರ್ತವ್ಯ ನಮಗೆ ಅತಿ ಸಣ್ಣದಾಗಿ ಕಂಡುಬಿಡುತ್ತದೆ. ಆ ಸಣ್ಣ ಸಂಗತಿಗಳೇ ಮುಂದೆ ನಮ್ಮ ಬಾಳಿನ ಅತಿ ದೊಡ್ಡ ದುರಂತಗಳಾಗಿ ಬೆಳೆದುಬಿಡುತ್ತವೆಯೆಂಬ ಸತ್ಯ ನಿಧಾನವಾಗಿ ಅರಿವಿಗೆ ಬರುತ್ತದೆ. ಆಗ ಕಾಲ ಮಿಂಚಿಹೋಗಿರುತ್ತದೆ.

ನಮ್ಮ ಕುಟುಂಬ ಜೀವನದಲ್ಲಿ ನಾವು ಅತಿ ಸಣ್ಣ ಸಣ್ಣ ಸಂಗತಿಗಳನ್ನು ಗಮನಿಸಬೇಕು. ಅವುಗಳನ್ನು ಅತ್ಯಂತ ಗೌರವ ಮತ್ತು ಪ್ರೀತಿಯಿಂದ ನಿರ್ವಹಿಸಬೇಕು. ಈ ಪುರುಷಪ್ರಧಾನ ವ್ಯವಸ್ಥೆ ಗಂಡಸಿಗೆ ಮನೆಯಲ್ಲಿ ಅನೇಕ ಕೆಲಸಗಳನ್ನು ತಾನು ಮಾಡುವಂಥದ್ದಲ್ಲ ಎಂದು ಕಲಿಸಿಬಿಟ್ಟಿದೆ! ಸೂಕ್ಷ್ಮವಾಗಿ ಭಾರತೀಯ ಮನೆಗಳನ್ನು ಗಮನಿಸಿದಾಗ ಈ ಅಂಶಗಳು ಗೋಚರಿಸುತ್ತವೆ: ಗಂಡಸು ತಾನುಂಡ ತಟ್ಟೆ ಎತ್ತಿ ಇಡುವುದಿಲ್ಲ. ತೊಳೆಯುವುದಿಲ್ಲ. ಬಚ್ಚಲು ಅಥವಾ ಕಕ್ಕಸ್ಸುಗಳನ್ನು ಸ್ವಚ್ಛಗೊಳಿಸುವುದಿಲ್ಲ. ತನ್ನ ಬಟ್ಟೆಗಳನ್ನು ಸ್ವಚ್ಛಗೊಳಿಸಿ ಒಣಗಿಸುವುದಿಲ್ಲ. ಮನೆ ಕಸಗುಡಿಸುವುದಿಲ್ಲ. ಪಾತ್ರೆ ತೊಳೆಯುವುದಿಲ್ಲ. ಎಷ್ಟೋ ಮನೆಗಳಲ್ಲಿ ಗಂಡಸರು (ಮಕ್ಕಳನ್ನು ಸೇರಿಸಿ) ತಾವು ಮಲಗಿದ ಹಾಸಿಗೆಯ ರಗ್ಗು ಹೊದಿಕೆಗಳನ್ನು ಮಡಚಿಡುವುದಿಲ್ಲ; ಸೊಳ್ಳೆಪರದೆಗಳನ್ನು ಹಿಂದಕ್ಕೆ ಸರಿಸುವುದಿಲ್ಲ. ಗಂಡು ಮಕ್ಕಳಂತೂ ತಮ್ಮ ಬಟ್ಟೆಗಳನ್ನು ಎಲ್ಲೆಂದರಲ್ಲಿ ಕಳಚಿ ಎಸೆದು ಬಿಸಾಕಿರುತ್ತಾರೆ.

ಯಾಕೆ ಹೀಗೆ? ಇವು ಸಣ್ಣ ಸಂಗತಿಗಳೆಂದೇ? ಅಥವಾ ಇವುಗಳನ್ನು ನಿರ್ವಹಿಸಿದರೆ ಅವಮಾನವೆಂದೇ? ಇಂಥ ಸಣ್ಣ ಸಣ್ಣ ಸಂಗತಿಗಳನ್ನು ಉಡಾಫೆ ಮಾಡುವ ನಮ್ಮ ನಡತೆಯನ್ನು ರೂಪಿಸಿರುವುದು ನಮ್ಮ ಸಂಸ್ಕೃತಿಯೇ! ಒಂದು ಸಂಸ್ಕೃತಿಯು ಉದಾತ್ತವಾಗುವುದು ಸೂಕ್ಷ್ಮಗಳನ್ನು ಒಳಗೊಂಡು ಬೆಳೆದಾಗ ಮಾತ್ರ. ಕೇವಲ ನಮ್ಮ ಬರವಣಿಗೆಗಳಲ್ಲಿ ಉದಾತ್ತತೆಯನ್ನಿಟ್ಟುಕೊಂಡು ಆಚರಣೆಯಲ್ಲಿ ಅವನ್ನು ಅಳವಡಿಸಿಕೊಳ್ಳದಿದ್ದಾಗ ಶ್ರೇಷ್ಠವೆನ್ನಿಸುವುದಿಲ್ಲ. ಈ ಸಣ್ಣ ಸಣ್ಣ ಸಂಗತಿಗಳು ನಮ್ಮ ವ್ಯಕ್ತಿತ್ವಕ್ಕೆ ಸ್ವಾವಲಂಬನೆಯನ್ನು ತರುತ್ತವೆ: ಶಿಸ್ತನ್ನು ತರುತ್ತವೆ. ನಮ್ಮ ಜೀವನ ಶೈಲಿ ಸರಳವೂ ಸುಂದರವೂ ಆಗುತ್ತದೆ. ಪರರ ಮೇಲಿನ ಅವಲಂಬನೆ ತಪ್ಪುವುದರಿಂದ ನಮಗೆ ಒಂದು ಬಗೆಯ ತೃಪ್ತಿ ಬರುತ್ತದೆ. ಆ ತೃಪ್ತಿ ತರುವ ಆನಂದ ಅಧ್ಯಾತ್ಮದತ್ತ ನಮ್ಮನ್ನು ಚಿಂತಿಸುವಂತೆ ಮಾಡುತ್ತದೆ.

೦೯-೦೯-೨೦೦೯

# ಸೃಷ್ಟಿಯೆಂಬ ಚಲನೆ...

'ಹುಟ್ಟಿದವನಿಗೆ ಮೃತ್ಯು ನಿಶ್ಚಯ'ವೆಂದು ಭಗವದ್ಗೀತೆ (2:27) ಸಾರುತ್ತದೆ. ಅದು ಮುಂದುವರಿದು ಸತ್ತವನಿಗೆ ಪುನರ್ಜನ್ಮವೂ ನಿಶ್ಚಯವೆಂದು ಹೇಳುವ ಮೂಲಕ ಬದುಕಿಗೆ ಸಂಕೀರ್ಣತೆಯ ಹಾಗೂ ಅನಿಶ್ಚಿತತೆಯ ಆವರಣವನ್ನು ತೊಡಿಸುತ್ತದೆ. ಮತ್ತೆ ಮುಂದುವರಿದು ಆ ಪುನರ್ಜನ್ಮವನ್ನು ಕರ್ಮ ಸಿದ್ಧಾಂತದೊಡನೆ ಬೆಸೆದು ಜನ್ಮತಾಳುವ ಸಂದರ್ಭದ ಅವಸ್ಥೆಗಳನ್ನು ಅಂತಸ್ತುಗಳನ್ನು ಸೃಷ್ಟಿಸಿ ಅಸಮಾನತೆಯನ್ನು ಮಾನ್ಯ ಮಾಡುತ್ತದೆ. ವರ್ತಮಾನ ಬದುಕಿನ ಸ್ಥಿತಿಯನ್ನು ವರ್ತಮಾನದ ಜೀವಿಯ ಕ್ರಿಯೆ ಮತ್ತು ವರ್ತನೆಗಳು ನಿರ್ಧಾರ ಮಾಡದೆ ಪೂರ್ವಜನ್ಮದ ಸಂಚಿತ ಕರ್ಮ ಫಲಗಳು ನಿರ್ಧರಿಸುತ್ತವೆಯೆಂಬ ತತ್ತ್ವ ಮಂಡಿಸುವುದರಿಂದ ಅನೇಕವೇಳೆ ವರ್ತಮಾನದ ಬದುಕಿಗೆ ಅರ್ಥವಿಲ್ಲದೆ ಹೋಗುತ್ತದೆ. ಈ ಕಾರಣದಿಂದಲೇ ಇರಬೇಕು: ಭಾರತೀಯ ಮನಸ್ಸು ಬದುಕಿಗಿಂತಲೂ ಮುಕ್ತಿಯನ್ನು ಹೆಚ್ಚು ಬಯಸುವುದು! ಮತ್ತೆ ಹುಟ್ಟಿ ತೊಳಲಾಡುವುದಕ್ಕಿಂತ ಜನ್ಮಾಂತರ ಸರಪಳಿಯಿಂದ ತಪ್ಪಿಸಿಕೊಂಡರೆ ಸಾಕೆಂಬ ಉತ್ಕಟತೆಯನ್ನು ಇಲ್ಲಿ ಗುರುತಿಸಬಹುದು.

ಸೃಷ್ಟಿಯೆಂಬುದು ಹಿಂದಿನ ಜನ್ಮದ ಅವ್ಯಕ್ತ ಅಮೂರ್ತ ವಾಸನೆಯಲ್ಲ. ಅದೊಂದು ಅತ್ಯಂತ ಸಹಜಕ್ರಿಯೆಯೆಂದು ತಿಳಿಯಬೇಕು. ಕಾಲಧರ್ಮನಿಯತಿಗೊಳಪಟ್ಟ ಪ್ರಕೃತಿ ಮಡಿಲ ಪ್ರತಿಯೊಂದು ಜೀವಿಯೂ ಹುಟ್ಟುತ್ತದೆ ಮತ್ತು ಸಾಯುತ್ತದೆ. ಪ್ರತಿಯೊಂದು ಜೀವಿಯೂ ಸಾಯುವ ಮುನ್ನ ಸೃಷ್ಟಿಸುತ್ತದೆ. ಆ ಹೊಸ ಸೃಷ್ಟಿಯಲ್ಲಿ ತನ್ನ ಅಂಶವನ್ನು ತುಂಬುತ್ತದೆ; ತನ್ನ ಪ್ರತಿರೂಪಗಳನ್ನು ಮೂಡಿಸುತ್ತದೆ. ಅಂದರೆ ಇಲ್ಲಿ ವೈಜ್ಞಾನಿಕ ಸತ್ಯವು ಸಹಜವಾಗಿ ಕೆಲಸ ಮಾಡುತ್ತಿದೆಯೆಂದು ಅರ್ಥ. ಅಂದರೆ ಒಂದು ಜೀವಿ ಸತ್ತಿದೆಯೆಂದರೆ ಅದು ಸಾವಲ್ಲ; ಒಂದು ಜೀವಿ ಜನಿಸಿದೆಯೆಂದರೆ ಅದು ನವಸೃಷ್ಟಿಯಲ್ಲ. ಅದು ಹಳತು ಹೊಸತರ ರೂಪದಲ್ಲಿ ನಿರಂತರವಾಗಿ ಚಲಿಸುತ್ತಿರುವ ಜೀವಜಾಲದ ಕ್ರಿಯಾಶೀಲತೆ. ಇದನ್ನು ನಿಶ್ಚಿತ ಸಾವೆಂದು ಕರೆಯುವುದಾಗಲೀ ಹೊಸ ಜನ್ಮವೆಂದು ಅರಿಯುವುದಾಗಲೀ ಬೇಕಿಲ್ಲ. ಅದಕ್ಕೆ ಸಾವು-ಪುನರ್ಜನ್ಮಗಳ ಗಂಟು ಬಿಗಿದು ಗೊಂದಲಗೊಳಿಸಬೇಕಿಲ್ಲ. ಕರ್ಮಫಲಗಳನ್ನು ಅಂಟಿಸಿ ಮೇಲು ಕೀಳುಗಳನ್ನು, ಸುಖ ದುಃಖಗಳನ್ನು ವ್ಯಾಖ್ಯಾನಿಸಬೇಕಿಲ್ಲ. ಎಲ್ಲಾದಕ್ಕೂ ತನ್ನದೇ ಆದ ಕಾಲಾವಧಿ ಇರುತ್ತದೆ. ಆ ಅವಧಿಯಲ್ಲಿ ಅದು ಜನಿಸಿ, ಬೆಳೆದು, ಸುಖಿಸಿ, ಫಲಿಸಿ ನಾಶವಾಗುತ್ತದೆ. ನಾಶವಾಗುತ್ತದೆ ಎಂದರೆ ಕಣ್ಮರೆಯಾಗುತ್ತದೆಯೆಂದು ಅರ್ಥವಲ್ಲ. ಮೂರ್ತಲೋಕಕ್ಕೆ ನಾಶವಾದಂತೆ ತೋರಿದರೂ ಅದು ತನ್ನ ಪ್ರಭಾವ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಆ ಶಕ್ತಿಯನ್ನು

ತನ್ನಿಂದ ಫಲಿತವಾದ ಜೀವಿಗಳಲ್ಲಿ ಹರಿಯುವಂತೆ ಮಾಡಿರುತ್ತದೆ. ಆ ನಿರಂತರ ಚಲನಾಶೀಲ ಶಕ್ತಿ ಪ್ರವಾಹವೇ ಜೀವ ವರ್ತುಲ. ಈ ಚಲನೆಯಲ್ಲಿ ಬೆಳವಣಿಗೆ, ರೂಪಾಂತರ, ಕರ್ತೃತ್ವಶಕ್ತಿ ಅರಳುತ್ತಾ ಸಾಗುತ್ತದೆ. ಪ್ರಕೃತಿ ಅದರಲ್ಲಿ ತನ್ನ ವೈವಿಧ್ಯವನ್ನು ಮೆರೆಯುತ್ತದೆ.

ಭಾರತೀಯ ಮನಸ್ಸಿಗೆ ಸೃಷ್ಟಿಯ ಮೇಲೆ ಇರಲೇಬೇಕಾದ ಪ್ರೀತಿ ಇದ್ದಂತೆ ತೋರುವುದಿಲ್ಲ. ಏಕೆಂದರೆ ಸೃಷ್ಟಿಯಾದ ಮೇಲೆ ಸಾಯಬೇಕೆಂಬ ಭಯ! "ಮರಣವೆಂಬ ಭೀಕರ ಸತ್ಯವೊಂದು ಬೇರೆ ಇದೆ. ಪ್ರಪಂಚವೆಲ್ಲ ಮೃತ್ಯು ಮುಖವಾಗಿ ಸಾಗುತ್ತಿದೆ. ಪ್ರಪಂಚದಲ್ಲಿ ಎಲ್ಲವೂ ನಶಿಸುತ್ತದೆ. ನಮ್ಮ ಅಭಿವೃದ್ಧಿ, ಪ್ರತಿಷ್ಠೆ, ವೈಭವ, ಐಶ್ವರ್ಯ, ಪಾಂಡಿತ್ಯ, ಸುಧಾರಣೆ ಎಲ್ಲಕ್ಕೂ ಮೃತ್ಯುವಿನ ಅಂತ್ಯವಿದೆ. ಇದೊಂದೆ ಸತ್ಯ. ಅನಾದಿಕಾಲದಿಂದ ಆಗುತ್ತಿರುವುದು ಹೀಗೆ... ಆದರೂ ಜೀವನದ ಮೇಲೆ ಎಲ್ಲರಿಗೂ ಅಭಿಮಾನವಿದೆ. ಏಕೊ ನಮಗೆ ಗೊತ್ತಿಲ್ಲ. ಜೀವನದಲ್ಲಿ ಆಸಕ್ತರಾಗಿರುವೆವು; ನಾವು ಅದನ್ನು ತ್ಯಜಿಸಲಾರೆವು. ಇದೇ ಮಾಯೆ" -ಎಂದು ಸ್ವಾಮಿ ವಿವೇಕಾನಂದ ಹೇಳುತ್ತಾರೆ. ಇವರು ಕೂಡ ಮೃತ್ಯುವಿನ ಅನಿವಾರ್ಯತೆಯ ಮೇಲೆ ಹೆಚ್ಚು ಒತ್ತು ನೀಡುತ್ತಾರೆ. ವರ್ತಮಾನದ ಸತ್ಯವನ್ನು ಆಸ್ವಾದಿಸುವುದನ್ನು ಸರಳಗೊಳಿಸುತ್ತಾರೆ. ವಾಸ್ತವ ಸತ್ಯವನ್ನು ಅನಿಶ್ಚಿತ ಸತ್ಯವೆಂದು ನಿರಾಸಕ್ತಗೊಳ್ಳುವಂತೆ ಅರಿಯಲು ಪ್ರೇರೇಪಿಸುತ್ತಾರೆ. ಆದರೆ ಜೀವನ ಪ್ರೀತಿ, ಜೀವ ಪ್ರೀತಿ ಸಂಪೂರ್ಣವಾಗಿ ಜೀವಿಯನ್ನು ಬಿಡದೆಂಬ ಸತ್ಯವನ್ನೂ ಒಪ್ಪಿಕೊಳ್ಳುತ್ತಾರೆ. ಆದರೆ, ಅದನ್ನು 'ಮಾಯೆ'ಯೆಂದು ಕರೆದು ಅಲೌಕಿಕಗೊಳಿಸುವ ಯತ್ನ ಮಾಡುತ್ತಾರೆ.

ಆದರದು 'ಮಾಯೆ'ಯಲ್ಲ, ಸೃಷ್ಟಿಯ ಚಲನಶೀಲತೆಯ ಸತ್ಯವಷ್ಟೆ! ಅದಿಲ್ಲದಿದ್ದರೆ ಮಿಕ್ಕೆಲ್ಲವೂ ಅವಾಸ್ತವ- ಅಪ್ರಯೋಜಕವಲ್ಲವೆ?

೧೩-೦೮-೨೦೦೯

# ಪ್ರಕೃತಿಯನ್ನು ಗೆಲ್ಲುತ್ತೇನೆಂಬ ಅಹಂಕಾರ

ಸಂತ ಶಿಶುನಾಳ ಷರೀಫರು ತಮ್ಮ ಹಾಡೊಂದರಲ್ಲಿ 'ಪ್ರಕೃತೀನ ಗೆಲ್ತೀನೆಂಬ ಅಹಂಕಾರ ಬಿಡ್ಬೇಕ'- ಅನ್ನುತ್ತಾರೆ. ಇಲ್ಲಿ ಪ್ರಕೃತಿ ಎಂದರೆ ಚರಾಚರ ಸತ್ಯಸ್ಯ ಸತ್ಯವಾದ ನಿಸರ್ಗವೆಂದು ಭಾವಿಸಬೇಕೇ ಹೊರತು 'ದೇವರ'ನಲ್ಲ. ದೇವರು ಮಾನವನ ಕಲ್ಪನೆ ಹಾಗೂ ಸೃಷ್ಟಿ. ಮಾನವ ಚರಿತ್ರೆಯಲ್ಲಿ ಇತ್ತೀಚಿನ ಪರಿಕಲ್ಪನೆ ದೇವರು. ಅವನನ್ನು ಸೃಷ್ಟಿಸಿದ ಮಾನವನು ಕೂಡ ಪ್ರಕೃತಿ ಸೃಷ್ಟಿಯಲ್ಲಿ ಕೊನೆಯ ಕೊಂಡಿಯೆಂದೇ ತಿಳಿಯಬೇಕು. ಅಂದಮೇಲೆ ಪ್ರಕೃತಿ ಎಂಬುದು ಅನಂತ, ಅನಾದಿ, ಅಪಾರ, ಆದ್ದರಿಂದ ಅದನ್ನು ಗೆಲ್ಲುತ್ತೇನೆಂದು ಹೊರಡುವುದು ಅಥವಾ ಗೆದ್ದಿರುವೆನೆಂದು ತಿಳಿಯುವುದು 'ಅಹಂಕಾರ'ವಾದೀತೆಂದು ಷರೀಫರು ಭಾವಿಸುತ್ತಾರೆ.

ಆದರೆ ಪ್ರಕೃತಿಯ ಗೂಢತೆಯನ್ನು ಅರಿಯಲು ಯತ್ನಿಸುವುದು ಅಹಂಕಾರವಲ್ಲ. ತೇಜಸ್ವಿಯವರ ಸಾಹಿತ್ಯ ರಚನೆಯ ಹಿಂದಿರುವ ಮನಸ್ಥಿತಿ ಪ್ರಕೃತಿಯ ನಿಗೂಢತೆಯನ್ನು ಶೋಧಿಸಿ ಸರಿಯುವುದೇ ಆಗಿದೆ. ಈ ಬಗೆಯ ಶೋಧ ಪ್ರಕೃತಿಯೊಡನೆ ಗೆಲ್ಲುವ ಅಥವಾ ಸೋಲುವ ದೃಷ್ಟಿಯಿಂದ ಮಾಡುವ ಹೋರಾಟವಾಗಬಾರದು. ಅದು ಪರಸ್ಪರ ಮೈಮುಟ್ಟಿ ಆತ್ಮೀಯವಾಗಿ ಸಂವಾದಿಸುತ್ತಾ ಒಳಪ್ರವೇಶ ಮಾಡುವ ಪರಿಯ ಸಂಬಂಧವಾಗಬೇಕು. ಆಗ ಪ್ರಕೃತಿ ತನ್ನ ರಹಸ್ಯಗಳನ್ನೂ ಮೃದು ಮಧುರವಾಗಿ ಸರಿಸುತ್ತಾ ಸಂವಹಿಸುತ್ತಾ ಸಾಗುತ್ತಾಳೆ- ತಾಯಿ ತನ್ನ ಮಗುವನ್ನು ಎದೆಗವುಚಿಕೊಂಡು ಮೈನೇವರಿಸುವ ಹಾಗೆ ಅಥವಾ ತುಸು ಸಿಗ್ಗು ಸಂಕೋಚಗಳಿಂದ ನಿಧಾನವಾಗಿ ಸೆಳೆದುಕೊಳ್ಳುತ್ತಾ ನಲ್ಲನನ್ನು ಒಳಸೇರಿಸಿಕೊಳ್ಳುವ ಪ್ರಿಯತಮೆಯಂತೆ. ಇಲ್ಲೆಲ್ಲಾ ಪ್ರಕೃತಿ-ಮಾನವರ ನಡುವೆ ಸಂಘರ್ಷವಿಲ್ಲ. ಪರಸ್ಪರ ಅರಿಯುವ, ಸ್ವೀಕರಿಸುವ, ನೀಡುವ ಪ್ರಕ್ರಿಯೆ ಇದೆ. ಈ ಬಗೆಯ ಪ್ರೀತಿಪೂರ್ವಕವಾದ ಪ್ರಕ್ರಿಯೆಯಲ್ಲಿ ಸೃಷ್ಟಿ ಮಾಡುವ, ವಿಕಾಸಗೊಳ್ಳುವ ಮತ್ತು ಪೋಷಣೆಗೊಳ್ಳುವ ಸಂಗತಿಗಳು ಕ್ರಿಯಾಶೀಲವಾಗಿರುತ್ತವೆ. ಇಲ್ಲಿರುವುದು ಕೇವಲ ಆರೋಗ್ಯಕರ ಸಂಬಂಧ ಮಾತ್ರ. ವಿನಾಶದ ಸೋಂಕು ಇಲ್ಲವೇ ಇಲ್ಲ.

ಪ್ರಕೃತಿ - ಮಾನವರ ಸಂಬಂಧ ತಾಯಿ ಮಕ್ಕಳ ಸಂಬಂಧವನ್ನು ಮೀರಿ ಅಧಿಕಾರ ಸ್ಥಾಪನೆಯ ಹಂತಕ್ಕೇರಿದಾಗ ಮಾತ್ರ ನಾಶದ ಕಣ್ಣು ಇಣುಕಿ ನೋಡುತ್ತದೆ. ಇದು ಕೂಡ ಮೊದಲು ಪ್ರಕೃತಿಯ ಕಡೆಯಿಂದ ಪ್ರಾರಂಭವಾಗುವುದಿಲ್ಲ. ಅವಳು ಮೊದಲು ಮಾನವನ ಕ್ರೂರ ಕ್ರಿಯೆಯನ್ನು ಎಚ್ಚರಿಕೆ ಮೂಲಕ ತಿಳಿಹೇಳಲು ಯತ್ನಿಸುತ್ತಾಳೆ. ಅದನ್ನು ಅರಿಯಲು ವಿಫಲನಾಗಿ ಮಾನವನು ಪ್ರಕೃತಿ ಮೇಲಿನ ತನ್ನ ಹಲ್ಲೆಯನ್ನು ಮುಂದುವರಿಸಿದಾಗ ಮಾತ್ರ ಪ್ರಕೃತಿ ಮುನಿಯುತ್ತಾಳೆ. ಈ ಮುನಿಯುವಿಕೆಯಲ್ಲಿ ಕೋಪತಾಪಗಳಿರುವುದಿಲ್ಲ. ಅಲ್ಲಿ ಪ್ರಥಮತಃ ಅವಳ ರಕ್ಷಣೆ ಇರುತ್ತದೆ.

ಅವಳ ಇನ್ನಿತರ ಮಕ್ಕಳ ಉಳಿವಿನ ಹಂಬಲವಿರುತ್ತದೆ.

ಪ್ರಕೃತಿಮಾತೆಯ ಅತಿ ಮುಖ್ಯ ಮಗು ತಾನೆಂದು ಮನುಷ್ಯ ತನಗೆ ತಾನೇ ಅಂದುಕೊಂಡಿದ್ದಾನೆ. ಆದರೆ ಇತರ ಮಕ್ಕಳು ಹಾಗೂ ಇನ್ನಿತರ ಸಂಗತಿಗಳಾದ ಜಲ, ಬೆಂಕಿ, ನೀರು, ಆಕಾಶ, ಮಣ್ಣು ಮುಂತಾದವು ಇರುವುದೇ ತನ್ನ ಸುಖಕ್ಕಾಗಿ ಎಂದು ಅವನು ತಪ್ಪಾಗಿ ಅರ್ಥೈಸಿಕೊಂಡಿದ್ದಾನೆ. ಆದುದರಿಂದಲೇ ಪ್ರಕೃತಿಯ ಇನ್ನಿತರ ಸಂತತಿಯನ್ನು ಬಳಸಿಕೊಳ್ಳಲು, ನಾಶ ಮಾಡಲು ತೊಡಗುತ್ತಾನೆ. ಮರ-ಗಿಡ ಬೆಟ್ಟ, ಮಣ್ಣು, ಪ್ರಾಣಿ-ಪಕ್ಷಿ ಸಮಸ್ತವನ್ನೂ ಆಕ್ರಮಿಸಿ ನಾಶಗೈಯಲು ಯತ್ನಿಸುತ್ತಾನೆ; ಅವು ಕೂಡ ಜೀವಿಗಳೆಂದೂ ಚೇತನ ರೂಪಿಗಳೆಂದೂ, ಅವು ತನ್ನ ಸೋದರ ರೂಪಿಗಳೆಂದೂ ಅರಿಯಲು ವಿಫಲನಾಗುತ್ತಾನೆ. ತನ್ನ ಸ್ವಾರ್ಥಕ್ಕಾಗಿ ಅವನ್ನೂ ಕಬಳಿಸುತ್ತಾ ಹೋಗುತ್ತಾನೆ. ಆಗ ತನ್ನ ಇನ್ನಿತರ ಮಕ್ಕಳ ವಿನಾಶವನ್ನು ಕಂಡ ತಾಯಿ ಪ್ರಕೃತಿ ಮುನಿಯುತ್ತಾಳೆ. ಮಳೆಯಾಗಿ ಸುರಿದು, ಗಾಳಿಯಾಗಿ ಸುತ್ತಿ ಸುನಾಮಿಯಾಗಿ, ಬೆಂಕಿಯಂತೆ ಕಾದು ಬರಗಾಲವಾಗಿ, ಜ್ವಾಲಾಮುಖಿಯಾಗಿ ಚಿಮ್ಮಿ ಸಿಕ್ಕಿದ್ದನ್ನೆಲ್ಲಾ ಬೂದಿ ಮಾಡಿ, ಕ್ರಿಮಿ ಕೀಟ ವೈರಾಣುಗಳಾಗಿ ದಾಳಿ ಮಾಡಿ ಮನುಷ್ಯನಿಗೆ ಬುದ್ಧಿ ಕಲಿಸುತ್ತಾಳೆ.

ಪ್ರಕೃತಿಯನ್ನು ಮಕ್ಕಳು ಅಮ್ಮನನ್ನು ನೋಡುವಂತೆ ನೋಡಬೇಕು. ಆಗ ತಾಯಿಯಂತೆ ನಮ್ಮನ್ನು ಪ್ರೀತಿಯಿಂದ ಸಲಹುತ್ತಾಳೆ.

೨೭-೦೮-೨೦೦೯

# ಸಾವಿಲ್ಲದ ಕೇಡಿಲ್ಲದ ಗಂಡ!

ಅಕ್ಕಮಹಾದೇವಿ ತನ್ನ ವಚನವೊಂದರಲ್ಲಿ 'ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ' ಎಂದು ಹೇಳುತ್ತಾಳೆ. ಸಾಯುವ ಮತ್ತು ಕೆಡುವ ಲೌಕಿಕ ಗಂಡರನ್ನು ಮೀರಿದ ಅಲೌಕಿಕ ಗಂಡನನ್ನು ಅವಳು ಆಶಿಸುವ ಪರಿ ಇದು. ಅವಳ ಆಶಯದ ಗಂಡನಿಗೆ ರೂಪು ಕೂಡ ಮುಖ್ಯವಲ್ಲ. ಅವಳ ಆಶಯವು ಅಮೂರ್ತವೂ ಅವಾಸ್ತವಿಕ ನೆಲೆಯದ್ದೂ ಆಗಿದೆ. ಈ ಅರ್ಥದಲ್ಲಿ ವ್ಯಾಖ್ಯಾನ ಮಾಡುವುದು ಅಕ್ಕಮಹಾದೇವಿಯ ಆಧ್ಯಾತ್ಮಿಕ ಎತ್ತರದ ಹಿನ್ನೆಲೆಯಲ್ಲಿ ಸಹಜವಾಗಿದೆ.

ಆದರೆ ಅಕ್ಕಮಹಾದೇವಿಯ ಈ ಮಾತಿನ ಹಿಂದೆ ಕೇವಲ ಅಲೌಕಿಕ ನೆಲೆಯ ಅರ್ಥ ಮಾತ್ರವಿದೆಯೆಂದು ಅನ್ನಿಸುವುದಿಲ್ಲ. ಅಲ್ಲಿ ದಟ್ಟವಾದ ಕಟುವಾಸ್ತವ ಸಾಮಾಜಿಕ ಸತ್ಯವೊಂದು ಅನಾವರಣಗೊಂಡಿರುವುದು ಕಂಡುಬರುತ್ತದೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮದುವೆಯೆಂಬ ಒಪ್ಪಂದದ ಸ್ವರೂಪವನ್ನು ಗಮನಿಸಬೇಕು. ಅಲ್ಲಿ ಹೆಣ್ಣು-ಗಂಡುಗಳ ಸ್ಥಾನ ನಿರ್ದೇಶನಗಳನ್ನೂ ಅರಿಯಬೇಕು. ಹೆಣ್ಣು ದಾಸಿ, ಅವಳು ಮದುವೆಯಾದ ಮೇಲೆ ಗಂಡನ (ಅತ್ತೆ ಮಾವ ಮೈದುನ ಇತ್ಯಾದಿ) ಸೇವೆ ಮಾಡಬೇಕು. ಸಹಜವಾಗಿಯೇ ಗಂಡ ಹೆಂಡತಿಗಿಂತ ವಯಸ್ಸಿನಲ್ಲಿ ಹಿರಿಯನಾಗುತ್ತಿದ್ದ. ವಯಸ್ಸಿನ ಹಿರಿತನದ ಜೊತೆಗೆ ಸಮಾಜದಿಂದ ದತ್ತವಾಗಿರುವ ಹಕ್ಕಿನಿಂದಾಗಿ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸುತ್ತಿದ್ದ. ಅವಳು ಅವನ ಭೋಗವಸ್ತು; ಸಂತತಿಯನ್ನು ಮುಂದುವರೆಸುವ ಸಾಧನ; ಮಕ್ಕಳು ಮರಿ ಮನೆ ಮಾರುಗಳನ್ನು ನೋಡಿಕೊಳ್ಳುವ ಕೆಲಸದಾಳು. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಪ್ರಶ್ನಿಸುವ ಹಕ್ಕನ್ನೇ ಕಳೆದುಕೊಂಡಿದ್ದ ಅವಳು ನಿಜಾರ್ಥದಲ್ಲಿ ಒಂದು ಮನೆಯಿಂದ ಮತ್ತೊಂದು ಮನೆಗೆ ವರ್ಗಾವಣೆಗೊಂಡ ಜೀತದಾಳು.

ಇಂಥವಳು ತನ್ನ ಜೀವಿತಾವಧಿಯಲ್ಲಿ ಗಂಡನ ಸೇವೆಯನ್ನು ಆದ್ಯ ಕರ್ತವ್ಯವೆಂದು ತಿಳಿದು ಮಾಡಬೇಕು. ಗಂಡನೂ ಮನುಷ್ಯನೇ ತಾನೆ? ಅವನಿಗೆ ರೋಗ, ರುಜಿನ, ಮುಪ್ಪುಗಳುಂಟು ತಾನೆ! ರೋಗಪೀಡಿತನಾದಾಗ ಅವನು ಮುಪ್ಪಿನಿಂದ ನಿಶ್ಯಕ್ತನಾದಾಗ ಅವನನ್ನು ಹೆಂಡತಿ ನಿಷ್ಠೆಯಿಂದ ಸೇವೆ ಮಾಡಬೇಕು. ಅದು ಪತಿವ್ರತೆಯ ಲಕ್ಷಣ! ಇಂಥ ಪತಿಸೇವೆ ಮಾಡಿದರೆ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂಬ ಪ್ರಲೋಭನೆ ಬೇರೆ! ಅಷ್ಟೇ ಅಲ್ಲ ಏಳೇಳು ಜನ್ಮಗಳಲ್ಲೂ 'ಇವನೇ ಗಂಡನಾಗಿ ಬರುತ್ತಾನೆ' ಎನ್ನುವ ಮಾತೂ ಸೇರಿಕೊಳ್ಳುತ್ತದೆ. ಇಂಥ 'ಕೆಡುವ' ಗಂಡಂದಿರನ್ನು ಮತ್ತು ಅವರಿಗೆ ಸೇವೆ ಮಾಡುವ ಹೆಂಗಸರನ್ನು ಅಕ್ಕಮಹಾದೇವಿ ಕಂಡಿದ್ದಳು. ಅದರಿಂದ ಅವಳು ಮದುವೆಯೆಂಬ ಒಪ್ಪಂದದ ಬಗ್ಗೆ ರೋಸಿಹೋಗಿದ್ದಳು.

ದ್ರೌಪದಿಯ ಪೂರ್ವ ಜೀವನದ ಪ್ರಸಂಗವೊಂದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಪಂಚಪಾಂಡವರಿಗೆ ಏಕಪತ್ನಿಯಾಗುವ ಅವಳು ಹಿಂದಿನ ಜನ್ಮದಲ್ಲಿ ಋಷಿಯೊಬ್ಬನ ಪತ್ನಿಯಾಗಿರುತ್ತಾಳೆ. ಅವನು ಕುಷ್ಠರೋಗ ಪೀಡಿತ. ಅವನ ಮೈ ಕೈಗಳೆಲ್ಲ ಕೊಳೆತು ಕೀವು ರಕ್ತಗಳು ಸ್ರವಿಸುತ್ತಿರುತ್ತದೆ. ಒಮ್ಮೆ ಅವನು ಊಟ ಮಾಡುತ್ತಿದ್ದ ತಟ್ಟೆಯಲ್ಲಿ ಅವನ ಕೀವು ತುಂಬಿದ ಬೆರಳೊಂದು ಕೊಳೆತು ಉದುರಿತು. ಪತಿವ್ರತೆಯಾದ ಅವಳು ಅದೇ ತಟ್ಟೆಯಲ್ಲಿ ಅವನು ಬಿಟ್ಟಿದ್ದ 'ಪ್ರಸಾದ'ವನ್ನು ಮನಸ್ಸಿನಲ್ಲಿ ಯಾವ ಬಗೆಯ ಅಸಹ್ಯವು ಇಲ್ಲದೆ ಭುಜಿಸಿದಳಂತೆ. ಈ ಪ್ರಸಂಗ ನಮ್ಮ ಸಾಮಾಜಿಕ, ಧಾರ್ಮಿಕ ವ್ಯವಸ್ಥೆ ಯಾವ ಮಾನಸಿಕ ನೆಲೆಯಲ್ಲಿ ರೂಪಿಸಿತ್ತು ಎಂಬುದನ್ನು ತಿಳಿಸುತ್ತದೆ.

ಇಷ್ಟೆಲ್ಲಾ ಸೇವೆ ಮಾಡಿಸಿಕೊಂಡ ಗಂಡ ಕೊನೆಗೊಮ್ಮೆ ಸಾಯಲೇಬೇಕು. ಹೀಗೆ 'ಕೆಡುವ ಸಾಯುವ' ಗಂಡರು ಸ್ತ್ರೀಗೆ ಸಂತೋಷವನ್ನೂ ನೆಮ್ಮದಿಯನ್ನೂ ತರುತ್ತಿರಲಿಲ್ಲ. ಅವಳು ನಿರಂತರ ದಾಸಿತ್ವದಿಂದ ನರಳಿ ಸೇವೆ ಮಾಡಿ ಅಸಹಾಯಕಳಾಗಿ ಅಬಲೆಯಾಗಿ ಜೀವನದ ಅಂತ್ಯ ಕಾಣುತ್ತಿದ್ದಳು. ಇಂಥ 'ಕೆಡುವ ಸಾಯುವ' ಗಂಡಸರ ಸಹವಾಸವೇ ಬೇಡವೆಂಬ ನಿರ್ಧಾರಕ್ಕೆ ಅಕ್ಕಮಹಾದೇವಿ ಬಂದುದರಲ್ಲಿ ಈ ಕಹಿ ಸತ್ಯ ಅಡಗಿದೆ. ಅದಕ್ಕೆ ಅವಳು 'ಈ ಸಾವ ಕೆಡುವ ಗಂಡಂದಿರನ್ನು ಒಲೆಯೊಳಗಿಕ್ಕು' ಎಂದು ನಿರ್ದಾಕ್ಷಿಣ್ಯವಾಗಿ ದಿಟ್ಟವಾಗಿ ನುಡಿಯುತ್ತಾಳೆ.

ಅಕ್ಕಮಹಾದೇವಿ ಕಂಡುಕೊಂಡ ಸತ್ಯ ಇಂದಿಗೂ ವಾಸ್ತವವಾಗಿರುವುದು ಆಶ್ಚರ್ಯವಾದರೂ ನಿಜ. ಮಹಿಳಾ ಜಾಗೃತಿ, ಸಬಲೀಕರಣ ಆಗಿರುವ ಇಂಥ ಕಾಲಘಟ್ಟದಲ್ಲೂ 'ಹೆಣ್ಣು' ಉತ್ತಮ ಗೃಹಿಣಿ ಎಂದೂ ಶ್ರೇಷ್ಠ ಮ್ಯಾನೇಜರ್ ಎಂದೂ ಸಹನಾಮೂರ್ತಿಯೆಂದೂ ವೈಭವೀಕರಣಗೊಳ್ಳುತ್ತಿರುವ ಹಿನ್ನೆಲೆಯಲ್ಲಿರುವ ಮನಃಸ್ಥಿತಿ ಅತ್ಯಂತ ಕ್ರೂರವಾದುದೆಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು.

೧೦-೦೯-೨೦೦೯

# ವ್ರತವೆಂಬ ಚಟ

ಕುವೆಂಪು ಅವರು ತಮ್ಮ ಬದುಕಿನುದ್ದಕ್ಕೂ ವೈಚಾರಿಕ ಪ್ರಜ್ಞೆ ಮತ್ತು ವೈಜ್ಞಾನಿಕ ದೃಷ್ಟಿ ಸಮಾಜದಲ್ಲಿ ಬೆಳೆಯಬೇಕೆಂದು ತಮ್ಮ ಸಮಸ್ತ ಸಾಹಿತ್ಯವನ್ನು ಸೃಷ್ಟಿ ಮಾಡಿದರು. ತಮ್ಮ ವೈಯಕ್ತಿಕ ಜೀವನದಲ್ಲಿ ತಾವು ಬರೆದುದ್ದನ್ನು ಬದುಕಿದರು. ಸ್ವಾತಂತ್ರ್ಯಪೂರ್ವ ಮತ್ತು ಅನಂತರದ ನಮ್ಮ ದೇಶ ಬದುಕಿನಲ್ಲಿ ಮೂಡಿದ ಆದರ್ಶ ಮತ್ತು ಉದಾತ್ತವಾದಿ ಪರಿಕಲ್ಪನೆಗಳು ನಮ್ಮ ಜನತೆಯನ್ನು ಆಚಾರ ಸಂಪ್ರದಾಯ ಮಡಿ ಮೈಲಿಗೆ ಮುಂತಾದ ಬಂಧನಗಳಿಂದ ಮುಕ್ತಗೊಳಿಸುತ್ತವೆಯೆಂದು ನಂಬಲಾಗಿತ್ತು. ಶಿಕ್ಷಣ ಇದಕ್ಕೆ ಪೂರಕವಾಗಿ ಕೆಲಸ ಮಾಡುತ್ತದೆ ಎಂಬ ಆಸೆಯಿತ್ತು.

ಆದರೆ ವರ್ತಮಾನದಲ್ಲಿ ಇಂದು ಆಗುತ್ತಿರುವುದೆ ಬೇರೆ. ಅನಕ್ಷರಸ್ಥರಿರಲಿ, ಅಕ್ಷರಸ್ಥರಲ್ಲೇ ಇಂದು ಅಧಿಕ ಮೌಢ್ಯಗಳು ಮನೆ ಮಾಡಿಕೊಂಡಿವೆ. ಪೂಜೆ ಪುನಸ್ಕಾರ, ವ್ರತ, ವಾಸ್ತು ನಂಬಿಕೆ ಕಂದಾಚಾರಗಳು ಅಧಿಕವಾಗಿವೆ. ದೇವರುಗಳನ್ನು ಸಾಕ್ಷಾತ್ಕರಿಸಿ ಕೊಡುತ್ತೇವೆಂದು, ತಮ್ಮನ್ನು ತಾವು ದೇವ ಪುರುಷರೆಂದು ಹೇಳಿಕೊಂಡು ವ್ಯವಹರಿಸುತ್ತಿರುವ ಮಧ್ಯವರ್ತಿಗಳು ಮೊದಲಿಗಿಂತಲೂ ಇಂದು ಹೈಟೆಕ್ ಆಗಿ ವಿಜೃಂಭಿಸುತ್ತಿದ್ದಾರೆ. ಇವರನ್ನು ನಂಬಿ ಯಜ್ಞ ಯಾಗ ಪೂಜೆ ಮಾಡಿಸುವವರ ಸಂತತಿ ವಿಪುಲವಾಗಿ ಬೆಳೆಯುತ್ತಿದೆ. ನಮ್ಮ ನಡುವೆ ಬೆಳೆಯುತ್ತಿರುವ ಸಾಕ್ಷರತೆಗೂ ವೈಚಾರಿಕತೆಗೂ ಸಂಬಂಧವಿಲ್ಲವೆಂಬುದು ಇದರಿಂದ ವೇದ್ಯವಾಗುತ್ತಿದೆ.

ಅಕ್ಷರ ಸಂಸ್ಕೃತಿಯ ನಿಜವಾದ ಉದ್ದೇಶ ವ್ಯಕ್ತಿಯಲ್ಲಿ ಅರಿವಿನ ಜಾಗೃತಿಯನ್ನು ಮೂಡಿಸುವುದೇ ಆಗಿರಬೇಕು. ರೂಢಿಗತ ವ್ಯವಸ್ಥೆ ಯಾವುದೋ ಕಾಲಘಟ್ಟದಲ್ಲಿ ರೂಪಿಸಿಕೊಂಡಿರುವ ಆಚಾರ ನಂಬಿಕೆಗಳು ಸರ್ವಕಾಲಕ್ಕೂ ಸಲ್ಲುತ್ತವೆಯೇ ಎಂಬುದನ್ನು ವಿವೇಚಿಸಿ ಮೌಲ್ಯಮಾಪನ ಮಾಡಬೇಕು. ಜೊಳ್ಳುಗಳನ್ನು ತೂರಬೇಕು. ವರ್ತಮಾನಕ್ಕೆ ಪ್ರಸ್ತುತವಾದುದನ್ನು ರೂಪಿಸಬೇಕು. ದೇವರು-ಮತಗಳು ಮಾನವಾತೀತ ಶಕ್ತಿಗಳೆಂಬ ಭ್ರಮೆಯನ್ನು ತೊರೆದು, ಅನುಭವಾಧಾರಿತ ಮಾನವೀಯ ಮೌಲ್ಯಗಳ ಅಳವಡಿಕೆಯ ಮೂಲಕ 'ಮಾನವ ಕುಲ ಒಂದು' ಎಂಬ ನೆಲೆಗೆ ಬಂದು ನಿಲ್ಲಬೇಕು. ಇದು ಅಕ್ಷರ ಸಂಸ್ಕೃತಿಯುಂಟುಮಾಡುವ ವಿಚಾರಕ್ರಾಂತಿ.

ಇಂಥ ಅಕ್ಷರ ಸಂಸ್ಕೃತಿಯ ನಿಜಾಶಯಕ್ಕೆ ವಿರುದ್ಧವಾಗಿ ಇಂದು ನಮ್ಮ ಸಮಾಜದಲ್ಲಿ ಪೂಜೆ ವ್ರತ ಯಾಗಗಳು ಯಾವ ಎಗ್ಗಿಲ್ಲದೆ ನಡೆಯುತ್ತಿವೆ. ಭಕ್ತಿಗೂ ಈ ಪೂಜೆ ವ್ರತಗಳಿಗೂ ಸಂಬಂಧ ಕಲ್ಪಿಸುವವರು ಇದ್ದಾರೆ. ಪೂಜೆ ವ್ರತ ಯಾಗಗಳು ಆಚರಣೆಗಳು ಇಲ್ಲಿ ನಂಬಿಕೆಗಿಂತ ಸಾಂಪ್ರದಾಯಿಕ ಆಚರಣಾಂಶಗಳೇ ಮುಖ್ಯ; ಬೇರೆಯವರು ತಿಳಿಸುವ ಅಂಶಗಳೇ ಮುಖ್ಯ.

ವ್ಯಕ್ತಿಯ ಆಂತರ್ಯದ ಬೇಕು ಬೇಡಗಳ ವಿವೇಚನೆ ಇಲ್ಲಿ ಅಮುಖ್ಯ. ಭಕ್ತಿಯೆಂಬುದು ಅಂತರಂಗದ ವಿಚಾರ. ಒಂದು ಶಕ್ತಿ ವಿಚಾರಗಳಲ್ಲಿರುವ ನಿಷ್ಠೆಯನ್ನು ವೈಯಕ್ತಿಕ ನೆಲೆಯಲ್ಲಿ ಅಭಿವ್ಯಕ್ತಿಸುವ ಪರಿ. ಈ ಭಕ್ತಿಯೆಂಬುದು ಯಾವುದೇ ಜಾತಿ ಮತಗಳ ಚೌಕಟ್ಟಿಗೆ ಸಿಲುಕದ್ದು. ಬೇರೆಯವರ ಸಹಾಯದಿಂದ ಮಾಡುವಂಥದ್ದಲ್ಲ. ಈ ಭಕ್ತಿಯನ್ನು ಭಕ್ತನೇ ಅನುಭವಿಸಬೇಕೆಂಬುದನ್ನು ಬಸವಣ್ಣ ಹೀಗೆ ಹೇಳುತ್ತಾನೆ: 'ತನ್ನಾಶ್ರಮದ ರತಿಸುಖವನು, ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?' ಈ ಮಾತಿನ ಆಶಯ ಅಂದಿನ ಯುಗದ ಅರಿವೇ ಆಗಿತ್ತು. ಭಕ್ತಿಗೆ ಅವರು ಇನ್ನಿಲ್ಲದ ಮಹತ್ವ ನೀಡಿದ್ದರು. ತಾನು ಭಕ್ತನೆಂಬುದು ಇತರರಿಗೆ ತಿಳಿಯಲೇಬಾರದೆಂದು ಭಕ್ತರು ಹಠ ಹಿಡಿಯುತ್ತಿದ್ದರು. ಅವರನ್ನು ಗುಪ್ತ ಭಕ್ತರೆಂದು ಅಂದಿನವರು ಗುರ್ತಿಸುತ್ತಿದ್ದರು. ಈ ಗುಪ್ತ ಭಕ್ತರು 'ಭಕ್ತ'ರೆಂದು ಜನತೆಗೆ ಗೊತ್ತಾದ ಕೂಡಲೇ ತಮ್ಮ ದೇಹತ್ಯಾಗ ಮಾಡಲು ಸಿದ್ಧರಾಗುತ್ತಿದ್ದರು. ಏಕೆಂದರೆ ಭಕ್ತಿಯೆಂಬುದು ಆಡಂಬರದ, ಆಚಾರದ, ತೋರಿಕೆಯ, ಪ್ರದರ್ಶನದ ಅಂಶವಲ್ಲ ಎಂಬುದನ್ನು ಅವರು ಕಾಯಾ ವಾಚಾ ನಂಬಿದ್ದರು ಮತ್ತು ಅದೇ ರೀತಿ ನಡೆದುಕೊಳ್ಳುತ್ತಿದ್ದರು.

ಇಂಥ ಅಂತರಂಗದ ಆಡಂಬರ ರಹಿತ ಭಕ್ತಿಯನ್ನು ನಡೆದುಕೊಳ್ಳುವುದು ಕಡುಕಷ್ಟವೆಂದು ಬಸವಣ್ಣ ಬಗೆದಿದ್ದನು. ಅದನ್ನೇ ಅವನು 'ಭಕ್ತಿಯೆಂಬುದ ಮಾಡಬಾರದು, ಕರಗಸದಂತೆ ಹೋಗುತ್ತ ಕೊರೆದು ಬರುತ್ತ ಕೊಯ್ವುದು' ಎಂದು ವ್ಯಾಖ್ಯಾನಿಸುತ್ತಾನೆ. ಇವನ ಆತ್ಮ ವಿಮರ್ಶೆ, ತತ್ವನಿಷ್ಠೆ ಮತ್ತು ವಿಚಾರಮತಿ ವರ್ತಮಾನಕ್ಕೆ ಹೆಚ್ಚು ಪ್ರಸ್ತುತವಾಗುತ್ತದೆ.

೨೪-೦೯-೨೦೦೯

# ಸರ್ಕಾರಿ ಕೆಲಸ ದೇವರ ಕೆಲಸ!

ಶ್ರಮಶಕ್ತಿಯ ವ್ಯಯದ ಮೇಲೆ ಜಗತ್ತಿನ ಸಂಸ್ಕೃತಿ - ನಾಗರಿಕತೆಗಳು ಅರಳಿವೆ. ಜೀವಿಯು ದೈನಂದಿನ ಕ್ರಿಯಾತ್ಮಕ ಚಟುವಟಿಕೆಗಳನ್ನು ತನ್ನ ಶ್ರಮಶಕ್ತಿಯನ್ನು ಬಳಸಿಯೇ ಮಾಡಬೇಕಾಗುತ್ತದೆ. ಆ ಮೂಲಕ ತನ್ನ ಆಹಾರ, ವಿನೋದ ಮುಂತಾದ ಆಸಕ್ತಿಗಳನ್ನು ತೃಪ್ತಿಪಡಿಸಲು ಯತ್ನಿಸುತ್ತದೆ. ಅಷ್ಟೇ ಅಲ್ಲ, ತನ್ನ ಸಂತತಿ ಮುಂದುವರಿಸಲು ಮಾಡುವ ಲೈಂಗಿಕ ಕ್ರಿಯೆಯ ಸಾಫಲ್ಯವನ್ನು ಕೂಡ ಇದರ ಮೇಲೆಯೇ ಕಾಣಬೇಕಾಗುತ್ತದೆ. ಅಂದಮೇಲೆ ಕೆಲಸವೆಂಬುದು ಜೀವಿಯ ಆದ್ಯ ಕ್ರಿಯೆ. ಅದಿಲ್ಲದೆ ಅದು ಬದುಕಲಾರದು. ಬೆಳೆಯಲಾರದು. ತನ್ನ ಕ್ರಿಯಾಶೀಲತೆಯ ಮೂಲಕವೇ ಜೀವಿಯ ವಿಕಾಸ ನಿಂತಿದೆ.

ವ್ಯಕ್ತಿಯಲ್ಲಿ ಈ ಶ್ರಮಸಂಸ್ಕೃತಿ ಎರಡು ನೆಲೆಗಳಲ್ಲಿ ಕ್ರಿಯಾಶೀಲವಾಗಿರುತ್ತದೆ. ಒಂದು ಬೌದ್ಧಿಕ ನೆಲೆಯದು. ಮತ್ತೊಂದು ದೈಹಿಕ ನೆಲೆಯದು. ಇವುಗಳೆರಡರಲ್ಲಿ ಒಂದು ಹೆಚ್ಚಲ್ಲ. ಮತ್ತೊಂದು ಕಡಿಮೆಯಲ್ಲ. ಹಾಗೆಂದು ತಿಳಿಯಬಾರದು; ತಿಳಿದಲ್ಲಿ ಅದು ಅಜ್ಞಾನವಾಗುತ್ತದೆ. ಕ್ರೌರ್ಯವೆನಿಸುತ್ತದೆ. ಇವೆರಡೂ ಸಮಾನವಾಗಿ, ಸಮಾನಗೌರವದಿಂದ ಕ್ರಿಯಾಶೀಲವಾದಾಗ ಮಾತ್ರ ಸುಖೀಸಮಾಜದ ನಿರ್ಮಾಣ. ಆದರೆ ಬೌದ್ಧಿಕ ಜಗತ್ತು ತನ್ನನ್ನು ತಾನು ಮೇಲೆಂದು ಬಗೆದು ದೈಹಿಕ ಶ್ರಮವನ್ನು ಚರಿತ್ರೆಯುದ್ದಕ್ಕೂ ಕೀಳೆಂದು ಭಾವಿಸಿ, ಅದರ ದುಡಿಮೆಯ ಮೇಲೆ ಕೂತುಣ್ಣುವ ಕೆಲಸ ಮಾಡಿದೆ; ಬಹುಸಂಖ್ಯಾತ ದೈಹಿಕ ಶ್ರಮಿಕರನ್ನು ನೋವಿನ ಕೂಪದಲ್ಲಿ ನೂಕಿ ಅಮಾನವೀಯ ಕ್ರೌರ್ಯವನ್ನು ಆಚರಿಸಿದೆ. ಇದನ್ನು ಮನಗಂಡ ನಮ್ಮ ವಚನಕಾರರು 'ಕಾಯಕ'ಕ್ಕೆ ಮಹತ್ವ ನೀಡಿ ಪ್ರಚುರಪಡಿಸಿದರು. ಕಾಯದ ಮೂಲಕ ಸಂಪಾದಿಸಿದ ಅನ್ನಕ್ಕೆ ಇನ್ನಿಲ್ಲದ ಗೌರವವಿದೆಯೆಂದು ತಮ್ಮ ನಡೆಯ ಮೂಲಕ ದೃಷ್ಟಾಂತವಾದರು. ಕವಿ ಕುವೆಂಪು ಅವರು ದುಡಿವ ರೈತನನ್ನು 'ನೇಗಿಲಯೋಗಿ'ಯೆಂದು ಕರೆದು ಬೌದ್ಧಿಕತೆಗಿಂತ ಕಡಿಮೆಯಲ್ಲವೆಂದು ಗುರುತಿಸಿದರು. ಸ್ವಚ್ಛತೆಯನ್ನು ಮಾಡುವ 'ಜಲಗಾರ'ನನ್ನು ಶಿವನಿಗೆ ಸಮವೆಂದು ಕರೆದು ದೈವತ್ವಕ್ಕೇರಿಸಿದರು.

ಇಂದು ವರ್ತಮಾನ ಭಾರತದಲ್ಲಿ ರೈತ, ವ್ಯಾಪಾರಿ, ಉದ್ಯಮಿ, ಕುಶಲಕರ್ಮಿ- ಮುಂತಾದ ಸರ್ಕಾರೇತರ ವಲಯದ ಜನರು ತಮ್ಮ ಪಾಡಿಗೆ ತಾವು ದುಡಿಯುತ್ತಿದ್ದಾರೆ. 'ಕಾಯಕವೇ ಕೈಲಾಸ'ವೆಂದು ಬಗೆದು ಅದರಲ್ಲಿ ಇಹಪರಗಳ ಸುಖವನ್ನು ಅರಸುತ್ತಿದ್ದಾರೆ. ಆದರೆ ಇದೇ ಮನೋನೆಲೆಯಲ್ಲಿ ನಮ್ಮ ಸರ್ಕಾರೀ ವಲಯಗಳ ನೌಕರರು ದುಡಿಯುತ್ತಿದ್ದಾರೆಯೇ ಎಂಬುದು ಚರ್ಚಾಸ್ಪದ ವಿಷಯವಾಗಿದೆ. ಈ ವರ್ಗದ ಪ್ರಾಮಾಣಿಕ ದುಡಿಮೆಯ ಬಗ್ಗೆ

ಅನುಮಾನವಿದ್ದುದರಿಂದಲೇ ಐವತ್ತರ ದಶಕದಲ್ಲಿ ದಿವಂಗತ ಕೆಂಗಲ್ ಹನುಮಂತಯ್ಯನವರು ವಿಧಾನಸೌಧ ನಿರ್ಮಾಣ ಮಾಡಿದಾಗ 'ಸರ್ಕಾರಿ ಕೆಲಸ ದೇವರ ಕೆಲಸ' ಎಂದು ಅದರ ಹೆಬ್ಬಾಗಿಲ ಮೇಲೆ ಕೆತ್ತಿಸಿದರು. ಇದರರ್ಥ ಸಾರ್ವಜನಿಕ ಕೆಲಸ ಮಾಡುವವರು, ಅದನ್ನು ಅತ್ಯಂತ ಶ್ರದ್ಧೆ, ದಕ್ಷತೆಯಿಂದ ಮಾಡಬೇಕು; ಅದರಲ್ಲಿ ಪ್ರಾಮಾಣಿಕತೆ ಇರಬೇಕು ಎಂಬುದೇ ಆಗಿತ್ತು.

ಸಾರ್ವಜನಿಕ ಕಛೇರಿಯಲ್ಲಿ ಕೆಲಸ ಮಾಡುವ ನೌಕರರು ಜನತೆಯ ತೆರಿಗೆಯ ಹಣದಿಂದ ಜೀವನ ಮಾಡುತ್ತಾರೆ. ಅವರ ಪತ್ನಿ ಮಕ್ಕಳು ಬದುಕಿನಲ್ಲಿ ನೆಲೆ ಕಾಣಲು ಸಾಧ್ಯವಾಗುತ್ತದೆ. ಒಂದರ್ಥದಲ್ಲಿ ಜನತೆಯೇ ಅವರ ಯಜಮಾನರು. ಪ್ರಜಾಪ್ರಭುತ್ವದ ನಿಜವಾದ ಅರ್ಥವೇ ಅದು. ಆದರೆ ಆಗುತ್ತಿರುವುದೇ ಬೇರೆ. ಸಮಯಪ್ರಜ್ಞೆಯ ಅಪಾರ ಕೊರತೆ, ಅದಕ್ಷತೆ, ಅಪ್ರಾಮಾಣಿಕತೆ ಮತ್ತು ಲಂಚಗುಳಿತನ- ಇಂದು ನಮ್ಮ ಸಾರ್ವಜನಿಕ ವಲಯದಲ್ಲಿ ತಾಂಡವವಾಡುತ್ತಿವೆ. ಈ ವಲಯದಲ್ಲಿ ಕೆಲಸ ಮಾಡುತ್ತಿರುವ ನೌಕರರ ಅಂತಃಸಾಕ್ಷಿ ಕ್ಷೀಣಗೊಂಡಿದೆ.

ಇದಕ್ಕೇನು ಕಾರಣವಿರಬಹುದು? ದೇವರ ಪೂಜೆ ಅಥವಾ ಭಕ್ತಿಯ ಆಚರಣೆಯನ್ನು ಹೇಗೆ ಮಾಡಿದರೂ ಆಗುತ್ತದೆಯೆಂಬ ತಿಳಿವು, ಪರಿಕಲ್ಪನೆ ನಮ್ಮಲ್ಲಿ ಮನೆ ಮಾಡಿರುವುದು ಇದರ ಮೂಲದಲ್ಲಿಯೇ? ದೇವರ ಪೂಜೆಯನ್ನು ಅದ್ದೂರಿಯಾಗಿ ವಿಜೃಂಭಣೆಯಿಂದಲೂ ಮಾಡಬಹುದು ಅಥವಾ ತುಳಸಿ ಎಲೆ ಅರ್ಪಿಸಿಯೂ ಮಾಡಬಹುದು. ಅಲ್ಲವೆ? ಅದರಂತೆ ಸರ್ಕಾರದ ಕೆಲಸವನ್ನು ಶ್ರದ್ಧೆಯಿಂದ ಶ್ರಮವಹಿಸಿ ಮಾಡಿದರೂ ಆಗುತ್ತದೆ ಅಥವಾ ಕಛೇರಿಗೆ ಹಾಜರಾಗಿ ಹಾಜರಾತಿಗೆ ಸಹಿ ಮಾಡಿ ಸುಮ್ಮನಿದ್ದರೂ ತೀರುತ್ತದೆ. ಎಂಬ ಅಭಿಪ್ರಾಯ ಒಡಮೂಡಿದೆಯೇ? ಅಥವಾ ಇದೆಲ್ಲವನ್ನೂ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡು ಸಮುದಾಯ ಹಿತವನ್ನು ಮರೆತಿರುವ ಇಂಥವರಿಗೆ ದಂಡನೆ ಇಲ್ಲದಿರುವುದೇ ಆಗಿದೆಯೇ?

೦೮-೧೦-೨೦೦೯

# ಅಂತರತಮ ಗುರು

ನಮ್ಮ ಅಂತರಂಗದಲ್ಲೊಬ್ಬ ಹಿತೈಷಿಯಿದ್ದಾನೆ. ಅವನು ನಮ್ಮನ್ನು ಸದಾ ಸನ್ಮಾರ್ಗದಲ್ಲಿ ನಡೆಯುವಂತೆ ಹೇಳುತ್ತಾನೆ. ನಾವು ಅಕಸ್ಮಾತ್ ತಪ್ಪು ಹೆಜ್ಜೆ ಇಟ್ಟರೆ ಎಚ್ಚರಿಸುತ್ತಾನೆ. ಜನಪರ-ಜೀವಪರ ಸೆಲೆಗಳನ್ನು ನಮ್ಮಲ್ಲಿ ಚಿಮ್ಮಿಸಿ ಮಾನವೀಯಗೊಳಿಸುತ್ತಾನೆ. ಆ ಹಿತೈಷಿಯನ್ನು ನಾವು 'ಪ್ರಜ್ಞೆ' ಎಂದು ಗುರುತಿಸಬೇಕು. ಅಧ್ಯಾತ್ಮ ಮನೋಧರ್ಮದವರು ಅವನನ್ನು 'ಆತ್ಮ' ಎಂದು ಗುರುತಿಸುತ್ತಾರೆ. ಮತ್ತೆ ಕೆಲವರು 'ಅಂತಃಸಾಕ್ಷಿ' ಎಂದೂ ಕರೆಯುತ್ತಾರೆ.

ನಮ್ಮೊಳಗಿನ ಈ ಪ್ರಜ್ಞೆ ವ್ಯಕ್ತಿಯನ್ನು ಮಾನವೀಯ ಸಂಬಂಧಗಳ ಬೆಸುಗೆಯನ್ನು ಭದ್ರಗೊಳಿಸಲು ಪ್ರೇರೇಪಿಸುತ್ತದೆ. ಜಾತಿ ಮತ ಬಣ್ಣ ವರ್ಗ ಮೊದಲಾದ ಜೀವವಿರೋಧಿ ಉಪಾಧಿಗಳಿಂದ ಮುಕ್ತಗೊಳಿಸಿ ನಮ್ಮನ್ನು ಕೇವಲ ಮನುಷ್ಯರನ್ನಾಗಿಸಲು ಹೋರಾಡುತ್ತದೆ. ಧರೆಯ ಮೇಲಣ ಮನುಷ್ಯ ಕೇವಲ ಮನುಷ್ಯನಾಗಿ ರೂಪ ಧರಿಸಬೇಕೇ ಹೊರತು, ಮಾನವೀಯ ಸ್ಪಂದನಗಳಿಗೆ ಮಾತ್ರ ಪ್ರತಿಕ್ರಿಯೆ ತೋರಬೇಕೇ ಹೊರತು ಕಟ್ಟಿಕೊಂಡ ತೊಟ್ಟಿಕೊಂಡ ಕೃತಕ ಉಪಾಧಿಗಳಿಗಲ್ಲ. ಆದರೆ ಅಂತರಾಳದ ದಾರಿದೀಪವಾದ ಪ್ರಜ್ಞೆಯ ಮಾತನ್ನು ಲೆಕ್ಕಿಸದೆ ಮನುಷ್ಯ ಅನೇಕ ಮಾನವವಿರೋಧಿ ಕ್ರಿಯೆಗಳಲ್ಲಿ ತೊಡಗುತ್ತಾನೆ. ಇದಕ್ಕೆ ಅವನಲ್ಲಿ ನಿಧಾನವಾಗಿ ಬೆಳೆದುಕೊಳ್ಳುವ ಸ್ವಾರ್ಥವೇ ಕಾರಣ.

ಸ್ವಾರ್ಥವೆಂದರೆ ಏನು? ತಾನು, ತನ್ನದು, ತನ್ನವರದು ಎಂಬ ವ್ಯಕ್ತಿನಿಷ್ಠ ಆಲೋಚನೆಗಳು ಮತ್ತು ಆ ನೆಲೆಯಿಂದ ನಡೆಸುವ ಕ್ರಿಯೆಗಳು ತಂದುಕೊಡುವ ಸುಖ ಸಾಧನಗಳು; ಸಮುದಾಯ, ಸಹಜೀವಿಗಳನ್ನು ತುಳಿದು ತಾನು ಮಾತ್ರ ಬದುಕಬೇಕೆಂಬ ಜೀವನ ವಿಧಾನ. ಈ ಕ್ರಿಯೆಯ ಆಚಾರವನ್ನು ನಡೆಸುವುದು. ಈ ಸ್ವಾರ್ಥತೆಯನ್ನು ನಿಯಂತ್ರಿಸಿ ಮುನ್ನಡೆಸುವುದು 'ಬುದ್ಧಿ'. ಈ 'ಬುದ್ಧಿ' ವ್ಯಕ್ತಿಯ ಹುಟ್ಟಿನಿಂದ ಬಂದಿರುವಂಥದ್ದಲ್ಲ; ಅನಂತರ ಅವನು ತನ್ನ ಓದು, ಲೋಕಾನುಭವ ಮತ್ತು ತನ್ನ ಆವರಣದ ಪ್ರಭಾವಗಳಿಂದ ಗಳಿಸಿಕೊಂಡಿರುವಂಥದ್ದು. ಈ 'ಬುದ್ಧಿ'ಯನ್ನು ತನ್ನಿಷ್ಟಕ್ಕೆ ತನ್ನಂತೆ ವ್ಯವಹರಿಸಲು ಬಿಡಬಾರದು. ಅದು ಸದಾ 'ಆತ್ಮ'ದ ಆಣತಿಯ ಮೇಲೆ ನಡೆಯುವಂತಿರಬೇಕು. ಅದು ಯಜಮಾನನಾಗದಂತೆ ಎಚ್ಚರಿಕೆ ವಹಿಸಬೇಕು. ಅದು ಆತ್ಮದ ನಿಯಂತ್ರಣದಲ್ಲಿದ್ದಾಗ ಮಾತ್ರ ಬದುಕು ಜನಪರವಾಗಿ ಅರಳಲು ಸಾಧ್ಯವಾಗುತ್ತದೆ; ನಾಗರಿಕತೆ ಸಂಸ್ಕೃತಿಗಳು ಒಂದಕ್ಕೊಂದು ಪೂರಕವಾಗಿ ವಿಕಾಸಗೊಳ್ಳುತ್ತವೆ.

ಈ 'ಬುದ್ಧಿ'ಯನ್ನು 'ಭಾವ'ಗೊಳಿಸುವ ಕ್ರಿಯೆ ಅತ್ಯಂತ ಕಠಿಣವಾದುದು. ಬುದ್ಧಿಯನ್ನು ಪಳಗಿಸಿ ನಿಯಂತ್ರಿಸುವ ಮುನ್ನ ನಮ್ಮ ಪ್ರಜ್ಞೆ ಧೀಮಂತವಾಗಬೇಕು. ಅಚಲತೆಯನ್ನ

ನೀಗಿಕೊಳ್ಳಬೇಕು. ಅದು ತನ್ನಲ್ಲಿರುವ ಸಹಜ ಶಕ್ತಿಯನ್ನು ಗುರುತಿಸಿಕೊಳ್ಳಬೇಕು. ಗುರುತಿಸಿಕೊಳ್ಳುವ ಮೂಲಕ ತಾನು ಬುದ್ಧಿಗಿಂತ ಅಧಿಕತಮನೆಂದು ಸ್ಥಾನ ನಿರ್ದೇಶನ ಮಾಡಿಕೊಳ್ಳಬೇಕು. ಈ ಕ್ರಿಯೆ ಅಹಂಕಾರ ಪೂರಿತವಾದುದಲ್ಲ. ಅಹಂಕಾರ ನಿರಶನದಿಂದ ಬರುವ ಸಾತ್ತ್ವಿಕ ಶಕ್ತಿ. ಈ ಪ್ರಜ್ಞೆಯೇ ನಮಗೆ ದಾರಿ ತೋರುವ ಗುರುವಾಗುತ್ತದೆ. ಇದನ್ನೇ ಕವಿ ಕುವೆಂಪು 'ಅಂತರತಮ ಗುರು'ವೆಂದು ಕರೆಯುತ್ತಾರೆ. ಈ ಗುರು 'ಆತ್ಮತಮೋಹಾರಿ'. ನಮ್ಮ ಸಂಪ್ರದಾಯ ಮತ ಬಣ್ಣ ಜಾತಿ ವರ್ಗಗಳು ನಮ್ಮ ಆತ್ಮವನ್ನು ಅಂಧಗೊಳಿಸಿರುತ್ತವೆ. ಅಲ್ಲಿ ಕತ್ತಲು ಕವಿದಿರುತ್ತದೆ. ಅದನ್ನು ನಿವಾರಿಸುವ ಶಕ್ತಿ ಇರುವುದು ಈ ಅರಿವೆಂಬ ಗುರುವಿಗೆ ಮಾತ್ರ. ನಮ್ಮ ಬುದ್ಧಿ ಮನಸ್ಸುಗಳು 'ಜಟಿಲ ಕುಟಿಲತಮ.. ಪಾಪ ಪುಣ್ಯ ಲಲಿತ ರುದ್ರ ಲೀಲಾ ರೂಪ ಅರೂಪ'ಗಳಲ್ಲಿ ವಿಹರಿಸುತ್ತಿರುತ್ತವೆ. ಅವುಗಳನ್ನು ಸರಿದಾರಿಗೆ ತರುವ ಆತ್ಮಕ್ಕೆ ಬಲವಿರುವುದು ಮುಖ್ಯ. ಅದು ಆತ್ಮಶಕ್ತಿಯಾಗಿ ರೂಪುಗೊಂಡಾಗ ಗುರುವಾಗುತ್ತದೆ. ಇಂಗ್ಲಿಷ್‌ನಲ್ಲಿ 'ವಿಲ್‌ಪವರ್' ಎಂದು ಸಾಮಾನ್ಯವಾಗಿ ಗುರುತಿಸಲಾಗುತ್ತದೆ. ಈ ಶಕ್ತಿಯಿಂದಾಗಿಯೇ ಪ್ರಾಪಂಚಿಕವಾಗಿ ಸವಾಲುಗಳನ್ನು ಸ್ವೀಕರಿಸಿ ಹೋರಾಡುವ ಮನೋಧರ್ಮ ಪ್ರಾಪ್ತಿಯಾಗುತ್ತದೆ.

ಈ 'ಅಂತರತಮ ಗುರು'ವನ್ನು ಆಧ್ಯಾತ್ಮಿಕ ನೆಲೆಯಿಂದ ಮಾತ್ರ ಹುಡುಕಹೋಗಬಾರದು. ಲೌಕಿಕ ನೆಲೆಯಲ್ಲೂ ಅವನು ಇದ್ದೆ ಇರುತ್ತಾನೆ. ಇಹವಿಲ್ಲದೆ ಪರವಿಲ್ಲವೆಂಬ ಮಾತನ್ನು ನಾವು ಸದಾ ನೆನಪಿನಲ್ಲಿಡಬೇಕು.

೨೨-೧೦-೨೦೦೯

# ವರ್ಷ ಭೈರವ

ಕವಿ ಕುವೆಂಪು ಮಲೆನಾಡಿನ ಸಹ್ಯಾದ್ರಿಯ ಗಿರಿಶ್ರೇಣಿಗಳ ಮಳೆಯನ್ನು ನೋಡುತ್ತಾ ಬೆಳೆದವರು. ಸಹ್ಯಾದ್ರಿಯ ಮಳೆಯ ಜೋರು ಬಯಲು ಸೀಮೆಯಲ್ಲಿ ಅಪರೂಪ. 'ದೊಡ್ಡಮಳೆ' ಬಿದ್ದರೂ ಅದನ್ನು ಸಹಿಸಿಕೊಳ್ಳುವ ಶಕ್ತಿ ಮತ್ತು ಸಹನೆಗಳು ಬಯಲು ಸೀಮೆಯ ಜನಕ್ಕೆ ಇರುವುದಿಲ್ಲ. ಆದರೆ ಮಲೆನಾಡಿನ ಮಳೆ ಎರಡು ಅತಿರೇಕಗಳ ನಡುವೆ ಸರಸವಾಡಿ ಸತಾಯಿಸುತ್ತದೆ. ಚಟಪಟ ಜಡಿಯಂತೆ ರೂಪ ತಾಳಿ ಭೀಕರ ಮಳೆಯಾಗಿ ಜಡಿದುಬಿಡುತ್ತದೆ; ಮರುಕ್ಷಣವೇ ಸಂಪೂರ್ಣ ನಿಂತು ಬಿಸಿಲಿಗೆ ಜಾಗ ಮಾಡಿಕೊಡುತ್ತದೆ; ಕ್ಷಣಾರ್ಧದಲ್ಲಿ ಕಾಮನಬಿಲ್ಲು ಮೂಡಿಸಿ ಹೃನ್ಮನಗಳನ್ನು ಮುದಗೊಳಿಸುತ್ತದೆ. ಗಿರಿಕಾನನಗಳ ಕಣಿವೆಯಲ್ಲಿ ತೊರೆಗಳೆದ್ದು ಕುಣಿದು ಸದ್ದು ಮಾಡಿ, ಮತ್ತೆ ಮಾಯವಾಗಿ ಜುಳುಜುಳು ಹರಿಯುವ ಝರಿಯಾಗಿ ಕಂಗೊಳಿಸುತ್ತವೆ. ಈ ಅತಿರೇಕ ಶಿವಲೀಲೆಯಂತೆ ಕವಿಗೆ ವಿಸ್ಮಯ ಮೂಡಿಸುತ್ತದೆ. ಇದನ್ನು ಕವಿ ಕುವೆಂಪು 'ವರ್ಷ ಭೈರವ' ಎಂಬ ಪದ್ಯದಲ್ಲಿ ಹಿಡಿದಿಡುವ ಪ್ರಯತ್ನ ಮಾಡುತ್ತಾರೆ.

ಕುವೆಂಪು ಮಲೆನಾಡಿನ ಮಳೆಯನ್ನು 'ವರ್ಷ ಭೈರವ' ಎಂದು ಕರೆಯುತ್ತಾರೆ. 'ಭೈರವ' ಶಿವನ ಸೌಮ್ಯ ರೂಪವನ್ನು ಅಭಿವ್ಯಕ್ತಿಸದು. ಅದು ಅವನ ವಿನಾಶ ಕಾಲಸ್ಥಿತಿಯ ಮನೋಸ್ಥಿತಿಯನ್ನು ತಿಳಿಸುತ್ತದೆ. ಭೈರವನ ರುದ್ರ ನರ್ತನದ ಕಾಲ್ತುಳಿತಕ್ಕೆ ಸಿಲುಕಿ ಬದುಕು ನಲುಗಿ ಹೋಗುತ್ತದೆ. ನಾಶ ಮಾಡುವುದೇ ಅವನ ಉದ್ದೇಶವಾಗಿರುವಾಗ ಬೇರೆ ಏನನ್ನು ತಾನೇ ನಿರೀಕ್ಷಿಸಲು ಸಾಧ್ಯ? ಅದನ್ನೇ ಕುವೆಂಪು 'ಮಳೆಯಲ್ಲಿದು, ಮಳೆಯಲ್ಲಿದು ಪ್ರಳಯದ ಆವೇಶ' ಎಂದು ಕರೆಯುತ್ತಾರೆ. ಪ್ರಳಯಕಾಲದ ಭೈರವನ ನರ್ತನದ ಗುರಿ ಸಾಧನೆಗೆ ಆವೇಶ ಬೇಕೇ ಬೇಕು! ಆ ಆವೇಶದಲ್ಲಿ ಸಿಕ್ಕಿದ್ದನ್ನೆಲ್ಲ ಆಪೋಶನ ಗೈಯುತ್ತಾ ಸಾಗುವ ಮಳೆಗೆ ಪುರಾಣದ ಭೈರವನ ಆವೇಶವನ್ನು ಕವಿ ಆರೋಪಿಸುವುದರಲ್ಲಿ ಅರ್ಥವಿದೆ.

ಹತ್ತಾರು ವರ್ಷ ಕಟ್ಟಿದ ಮನೆಮಾರು, ಸಂಸ್ಕೃತಿ ನಾಗರಿಕತೆ ಈ ಭೈರವನ ಆವೇಶಕ್ಕೆ ಕ್ಷಣಮಾತ್ರದಲ್ಲಿ ನಾಶವಾಗುತ್ತವೆ. ವರ್ಷಕ್ಕಾಗುವಷ್ಟು ದವಸ ಧಾನ್ಯಗಳನ್ನು ತಲೆಯಲ್ಲಿ ತೂಗಿ ತೊನೆಯುತ್ತಾ ಪ್ರಾಣಿ, ಪಕ್ಷಿ, ಮನುಷ್ಯರ ತುತ್ತಿನ ಚೀಲವನ್ನು ತುಂಬುವ ಭರವಸೆಯನ್ನು ಹೊತ್ತ ಸಸ್ಯ ಸಂಪತ್ತು ವರ್ಷ ಭೈರವನ ಆವೇಶಕ್ಕೆ ಕ್ಷಣಮಾತ್ರದಲ್ಲಿ ಮಣ್ಣಾಗಿ ನಾಶವಾಗುತ್ತದೆ. ನಿಜವಾದ ಪ್ರಳಯವೆಂದರೆ ಇದೇ ಅಲ್ಲವೆ? ಜೀವಿಗಳಿಗೆ ಅನ್ನ ಸಿಕ್ಕದ ಹಾಗೆ ಮಾಡುವುದು; ಸೂರು ಇಲ್ಲದ ಹಾಗೆ ಮಾಡುತ್ತದೆ. ರಕ್ತ ಸಂಬಂಧಿಗಳು ಸ್ನೇಹಿತರು ನೆರೆಹೊರೆಯವರನ್ನು ಕೊಚ್ಚೊಯ್ದು ಇಲ್ಲವಾಗಿಸುತ್ತದೆ. ಎಲ್ಲೆಲ್ಲೂ ನೀರೇ ನೀರಾಗುತ್ತದೆ. ಅದು ಕುಡಿಯಲು

ಅಯೋಗ್ಯವಾಗುತ್ತದೆ. ನೀರಿನ ಮಧ್ಯೆ ನಿಂತು ನೀರಿಗಾಗಿ ಮೊರೆ ಇಡುವಂತೆ ಮಾಡುತ್ತದೆ. ಆ ನೀರು ನಿಂತು ಕೊಳೆತು ಮಾರಕ ರೋಗಾಣುಗಳನ್ನು ಸೃಷ್ಟಿಸುತ್ತದೆ. ರೋಗಗಳು ಜೀವಿಗಳನ್ನು ಹಿಂಡಿ ಹಿಪ್ಪೆ ಮಾಡಿ ಕಾಡಿ ಸಾವಿನಂಚಿಗೆ ನೂಕುತ್ತವೆ. ಜೀವಿ ಅಸಹಾಯಕವಾಗುತ್ತದೆ;ನೋವು ನರಕ ಅನುಭವಿಸಿ ಸಾವನ್ನು ತಾನೇ ಮೊರೆಯಿಟ್ಟು ಕರೆಯುವಂತೆ ಮಾಡುತ್ತದೆ.

ಇದನ್ನು 'ಪ್ರಳಯ'ವೆಂದು ಕರೆಯುವುದರಲ್ಲಿ ಅರ್ಥವಿದೆ. ಜಲಪ್ರಳಯದ ಹತ್ತಾರು ಪ್ರಕರಣಗಳು ಪ್ರತಿವರ್ಷ ಜಗತ್ತಿನ ಹಲವೆಡೆ ಸಂಭವಿಸುತ್ತವೆ. ಈ ಜಲಪ್ರಳಯಕ್ಕೆ ಪ್ರಕೃತಿಯ ನಾನಾ ಆಗುಹೋಗುಗಳು ಕಾರಣ ಎಂಬುದು ಪ್ರಕೃತಿಯ ಮೇಲೆ ಮಾನವ ನಡೆಸುತ್ತಿರುವ ದೌರ್ಜನ್ಯ ಕಾರಣವೆಂದು ಕೆಲವರು ವಾದಿಸುತ್ತಾರೆ. ಆದರೆ ಮಾನವ ಚರಿತ್ರೆಯನ್ನು ಅಧ್ಯಯನ ಮಾಡಿದವರಿಗೆ, ಪ್ರಕೃತಿಯ ವಿಕಾಸವನ್ನು ಅಧ್ಯಯನ ಮಾಡಿದವರಿಗೆ ಇದು ಈಗೀಗ ಸಂಭವಿಸುತ್ತಿರುವ ಪ್ರಕೃತಿವಿಶೇಷಗಳೆಂದು ಅನಿಸುವುದಿಲ್ಲ. ನಿರಂತರವಾಗಿ ನಡೆದುಕೊಂಡು ಬರುತ್ತಿರುವ ಈ ಭೈರವನ ರುದ್ರನರ್ತನಕ್ಕೆ ಪ್ರಕೃತಿ ತನ್ನನ್ನು ತಾನು ನಿಯಂತ್ರಿಸಿಕೊಳ್ಳಲು ನಡೆಸುತ್ತಿರುವ ಗೂಢ ಕ್ರಿಯೆಗಳಿರಬಹುದು. ತನ್ನ ಎಲ್ಲ ಮಕ್ಕಳು ಸಮಾನವಾಗಿ ಬಾಳಲೆಂದು ನಿರ್ಧರಿಸಿ 'ಕೆಲವರನ್ನು ಎತ್ತುವ ಮತ್ತೆ ಕೆಲವರನ್ನು ತುಳಿವ' ದೃಷ್ಟಿಯಿರಬಹುದು.

ಜಲಪ್ರಳಯಗಳನ್ನು ನಾಶಕಾರಕಗಳೆಂದು ಭಾವಿಸಬಾರದು. ಪ್ರತಿ ಸಾವಿನಲ್ಲೂ ಜೀವ ಮೊಳಕೆಯೊಡೆಯುತ್ತದೆಯೆಂಬ ಸತ್ಯವನ್ನು ಒಪ್ಪಬೇಕು. ಬೆಂದು ಬೆಂಗಾಡಾಗಿದ್ದ ನೆಲಕ್ಕೆ ವಿಪುಲ ನೀರ ರಾಶಿಯನ್ನು ತುಂಬಿ ನೂರಾರು ವರ್ಷದ ಜೀವದ್ರವ್ಯವನ್ನು ಹರಿಸುವ ಆ ಶಕ್ತಿಗೆ ನಮೋ ಎನ್ನಬೇಕು.

೦೫-೧೧-೨೦೦೯

# ಪ್ರತಿಮಾ ಸಂಸ್ಕೃತಿ

ಪ್ರತಿಮಾ (statue)ಗೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ತನಗೆ ಇಷ್ಟವಾದವರ, ಗೌರವಿಸಬೇಕೆನ್ನಿಸಿದವರ ಮೂರ್ತಿಗಳನ್ನು ರಚಿಸಿ ಇಟ್ಟುಕೊಳ್ಳುವ ಪದ್ಧತಿ ತುಂಬಾ ಹಳೆಯದು. ಪ್ರಾಚೀನ ಕಾಲದಲ್ಲಿ ಅಸ್ಪಷ್ಟವೂ ಅಮೂರ್ತವೂ ಒರಟೂ ಆಗಿರುತ್ತಿದ್ದ ಈ ಪ್ರತಿಮೆಗಳು ಕಾಲ ಕಳೆದಂತೆಲ್ಲಾ ಕಲೆಯ ಅಭಿವ್ಯಕ್ತಿಯ ಮಾಧ್ಯಮವಾಗಿ ಅರಳಿ ಸ್ಪಷ್ಟವೂ ನವಿರೂ ಮೂರ್ತವೂ ಆಗತೊಡಗಿದವು. ಪ್ರತಿಮೆ ಎನ್ನುವುದು 'ಇದ್ದದ್ದು' ಎನ್ನುವುದಕ್ಕಿಂತ 'ಭಾವಿಸಿ ಕಲ್ಪಿಸಿಕೊಂಡದ್ದೇ' ಆಗಿತ್ತು ಎನ್ನುವುದು ಸತ್ಯಕ್ಕೆ ಹೆಚ್ಚು ಹತ್ತಿರವಾದದ್ದು.

ಪ್ರತಿಮೆಗಳು ಮತಧರ್ಮಗಳ ಚೌಕಟ್ಟಿಗೆ ಬಂದನಂತರ ಎಲ್ಲ ಸಮಸ್ಯೆಗಳು ಉದ್ಭವವಾಗತೊಡಗಿದವು. ಪ್ರತಿಯೊಂದು ಮತಧರ್ಮವೂ ತನ್ನ ಮೂಲ ಪುರುಷರ ಹಾಗೂ ದೇವಾನುದೇವತೆಗಳ ಪ್ರತಿಮೆಗಳನ್ನು ಸೃಷ್ಟಿಸಿ ಪ್ರತಿಷ್ಠಾಪಿಸಿ ಪೂಜಿಸತೊಡಗಿದವು. ಅದು ಅಷ್ಟಕ್ಕೇ ನಿಂತಿದ್ದರೆ ಒಳಿತಾಗುತ್ತಿತ್ತು. ಅದು ಮುಂದುವರಿದು ಅನ್ಯ ಮತಧರ್ಮೀಯ ಪ್ರತಿಮೆಗಳನ್ನು ನಾಶ ಮಾಡುವ ಹಂತಕ್ಕೆ ಬೆಳೆಯಿತು. ಒಂದು ದೇಶ ಮತ್ತೊಂದು ದೇಶಕ್ಕೆ ಮುತ್ತಿಗೆ ಹಾಕಿದಾಗ ಅಥವಾ ಧರ್ಮಯುದ್ಧಗಳು ನಡೆದಾಗ ಈ ಹಲ್ಲೆ ಇನ್ನೂ ವಿಸ್ತಾರವಾದ ವ್ಯಾಪ್ತಿಯಲ್ಲಿ ನಡೆಯಿತು. ನಮ್ಮ ದೇಶದ ಇತಿಹಾಸದಲ್ಲಿಯೇ ಇಂಥ ಹಲವು ಜ್ವಲಂತ ಉದಾಹರಣೆಗಳು ಸಿಗುತ್ತವೆ. ಒಂದೂಗಳು ಬೌದ್ಧ ಜೈನ ಪ್ರತಿಮೆಗಳನ್ನು ನಾಶ ಮಾಡಿದರು; ಮೊನ್ನೆ ಮೊನ್ನೆ ತಾಲಿಬಾನಿಗಳು ಬೌದ್ಧ ಪ್ರತಿಮೆಗಳನ್ನು ಆಫ್ಘಾನಿಸ್ಥಾನದಲ್ಲಿ ಕೆಡವಿದರು. ಭಾರತದಲ್ಲಿಯೇ ಬಾಬ್ರಿ ಮಸೀದಿಯನ್ನು ನಾಶ ಮಾಡಲಾಯಿತು.

ಪ್ರತಿಮೆಗಳು ಬಹಿರಂಗ ಪ್ರದರ್ಶನದ ವಸ್ತುಗಳಾಗಿ ಪರಿವರ್ತನೆ ಆದದ್ದೇ ಈ ಸಮಸ್ಯೆ ಉಜ್ವಲವಾಗಲು ಮತ್ತೊಂದು ಕಾರಣ. ಭಾರತದಲ್ಲಿ ಮತ ಧರ್ಮೀಯರ-ದೇವತೆಗಳ ವಿಗ್ರಹಗಳು ದೇವಾಲಯಗಳ ಒಳ ಭಾಗದಲ್ಲಿ ಪ್ರತಿಷ್ಠಾಪನೆಗೊಳ್ಳುತ್ತಿದ್ದವು. ಹೊರ ಭಾಗದಲ್ಲೂ ಕಾಲ ಕಳೆದಂತೆಲ್ಲಾ ಶಿಲ್ಪಕಲೆಯಾಗಿ ಅರಳ ತೊಡಗಿದ್ದು ಚರಿತ್ರೆಯಲ್ಲಿ ಇತ್ತೀಚಿನ ಬೆಳವಣಿಗೆ. ನಮ್ಮ ಪ್ರಾಚೀನರಲ್ಲಿ ಗುಹಾಂತರ ದೇವಾಲಯಗಳ ಕಲ್ಪನೆ ಬಂದದ್ದೇ ಈ ಹಿನ್ನೆಲೆಯಿಂದ. ಪ್ರೀತಿ-ಭಕ್ತಿಯಂಥ ವಿಚಾರಗಳು ಬಹಿರಂಗ ಆಚರಣೆಯಾಗಬಾರದು. ಅವು ಅಂತರಂಗದ ತೀರ ವೈಯಕ್ತಿಕ ಕ್ರಮಗಳೆಂದು ಭಾವಿಸಲಾಗಿತ್ತು. ಬಹುಶಃ ಭಾರತದಲ್ಲಿ ಪ್ರತಿಮಾ ಸಂಸ್ಕೃತಿ ಬೀದಿಗೆ ಬಂದು ನಿಂತದ್ದು ವಿದೇಶಿಯರ ಆಳ್ವಿಕೆಯ ಕಾಲದಲ್ಲಿ ಎಂದು ಹೇಳಿದರೆ ತಪ್ಪಾಗಲಾರದೇನೋ? ಗ್ರೀಕ್ ರೋಮನ್ನರ ಪ್ರತಿಮಾ ಸಂಸ್ಕೃತಿಯ ಪ್ರಭಾವ ಯುರೋಪಿನ ತುಂಬೆಲ್ಲಾ ಹರಡಿ, ನಂತರ

ಭಾರತಕ್ಕೆ ಬಂದು ರಸ್ತೆಗಳ ವೃತ್ತಗಳಲ್ಲಿ ಮೆರೆದಾಡಿತು. ವಿದೇಶಿಯರ ಆಳ್ವಿಕೆಯಲ್ಲಿ ಅವರ ರಾಜ ರಾಣಿ ಕರ್ನಲ್ ಜರ್ನಲ್‌ಗಳು ಕೂಡ ಪ್ರತಿಮೆಯಾಗಿ ನಿಲ್ಲುವ ಗೌರವಕ್ಕೆ ಭಾಜನರಾದರು. ಅವರು ನಮ್ಮ ದೇಶವನ್ನು ಬಿಟ್ಟು ಹೋದಮೇಲೆ ಆ ಸಂಸ್ಕೃತಿ ನಮ್ಮ ರಕ್ತಕ್ಕೂ ಅಂಟಿಕೊಂಡು ಮುಂದುವರಿಯುತ್ತಿದೆ. ಪ್ರತಿಯೊಂದು ರಾಜಕೀಯ ಪಕ್ಷದ ನಾಯಕ, ಮತ ಧರ್ಮದ ಹರಿಕಾರ, ಚಿತ್ರನಟ-ನಟಿಯರು, ಮಠಾಧೀಶರು ಇಂದು ಪ್ರತಿಮೆಗಳಾಗಿ ನಿಂತು ರಾರಾಜಿಸುತ್ತಿದ್ದಾರೆ.

ಈ ಕಾರಣದಿಂದಲೇ ಅನೇಕ ಅಶಾಂತಿಗೆ ಕಾರಣರಾಗುತ್ತಿದ್ದಾರೆ. ದ್ವೇಷ ವೈಷಮ್ಯಗಳ ನೆಲೆಯಿಂದ ವಿಘ್ನಗೊಂಡು ಕಾನೂನು ಭಂಗವಾಗುವಂಥ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಈ ಪ್ರತಿಮಾ ಸಂಸ್ಕೃತಿ ಕೇವಲ ಅಂಧಾಭಿಮಾನದ ಸಂಕೇತವಾಗುತ್ತಿರುವುದರಿಂದ ಪ್ರತಿಷ್ಠೆಯ ಅಂಶವಾಗುತ್ತಿದೆ. ಇಂದು ಎಲ್ಲೆಂದರಲ್ಲಿ ವಿಜೃಂಭಿಸುತ್ತಿರುವ ಈ ಪ್ರತಿಮೆಗಳು ಜನತೆಯ ಗೌರವಕ್ಕೆ ಪಾತ್ರವಾಗುವುದರ ಬದಲು ಇರಿಸುಮುರಿಸುಗಳಿಗೆ ಕಾರಣವಾಗಿವೆ; ನಗರಗಳ ಸೌಂದರ್ಯಕ್ಕೆ ಮಾರಕವಾಗಿ ಪರಿಣಮಿಸಿವೆ.

ನಿಜವಾಗಿಯೂ ಪ್ರತಿಮೆಗಳ ನಿರ್ಮಾಣವಾಗಬೇಕಿರುವುದು ಜನಾಂಗಗಳ ಅಂತರಂಗದಲ್ಲಿ; ಅವರ ಭಾವಸ್ಮೃತಿಯಲ್ಲಿ. ಈ ಭಾವಲೋಕದಲ್ಲಿ ನಿರ್ಮಾಣವಾಗುವ ಪ್ರತಿಮೆ ನಿಜವಾದ ಅರ್ಥದಲ್ಲಿ ಅತ್ಯಂತ ಗಟ್ಟಿಯಾದದ್ದೂ ಶಾಶ್ವತವೂ ಆಗಿರುತ್ತದೆ. ಬಹಿರಂಗ ಲೋಕದಲ್ಲಿ ನಿರ್ಮಾಣಗೊಳ್ಳುವ ಪ್ರತಿಮೆ ತಾನು ಸೃಷ್ಟಿಯಾದ ಕ್ಷಣದಿಂದಲೇ ಸೀಮಿತಾರ್ಥದ ಚೌಕಟ್ಟಿನಲ್ಲಿ ಬಂಧಿಯಾಗಿಬಿಡುತ್ತದೆ.

೧೯-೧೧-೨೦೦೯

# ಅಗ್ನಿ ಮತ್ತು ಹಿಮ

ಆಂಗ್ಲ ಕವಿ ರಾಬರ್ಟ್ ಫ್ರಾಸ್ಟ್ 'ಅಗ್ನಿ ಮತ್ತು ಹಿಮ' ಎಂಬ ಪದ್ಯವನ್ನು ಬರೆದಿದ್ದಾನೆ. ಅದರಲ್ಲಿ ಹಿಮವನ್ನು ಅತ್ಯಂತ ಕ್ರೂರಿಯೆಂಬಂತೆ ಕರೆದಿದ್ದಾನೆ. 'ಅಗ್ನಿ'ಯನ್ನು ಕಾವು ಎಂಬ ಅರ್ಥದಲ್ಲಿ ಭಾವಿಸಿ, ಅವು ಅಗತ್ಯ ಬೇಕಾದ ಜೀವಪರವಾದ ಅಂಶವೆಂದು ಗುರುತಿಸುತ್ತಾನೆ. ಕಾವು ಸೃಷ್ಟಿಗೆ ಪೂರಕವಾಗಿ ಕೆಲಸ ಮಾಡುತ್ತದೆ. ಅದಿಲ್ಲದಿದ್ದರೆ ಒಳ್ಳೆಯ ಗಾಳಿ, ಮಣ್ಣು, ನೀರುಗಳಿದ್ದರೂ ಸೃಷ್ಟಿ ಸಾಧ್ಯವಾಗುವುದಿಲ್ಲ. ಹೆಣ್ಣು ಗಂಡಿನ ಪ್ರೀತಿಯೆಂಬುದು ಬೆಚ್ಚನೆಯ ಅನುಬಂಧ. ಈ ಬೆಚ್ಚನೆಯ ಅನುಬಂಧದಲ್ಲಿರುವ ಸಮಾಗಮ ಕ್ರಿಯೆಯಲ್ಲಿ ಮಾನವ ಜನಾಂಗ ಮುಂದುವರಿಯುವ ಸಾರ್ಥಕ ಕೆಲಸವಾಗುತ್ತದೆ. ಪ್ರತಿ ಬೀಜ ಮೊಳಕೆಯೊಡೆಯುವಾಗ ಬಿಸಿಯು ಸೃಷ್ಟಿಯಾಗುತ್ತದೆ. ಈ ಬಿಸಿ ಜೀವದ ಇರುವಿಕೆಗೆ- ಮುಂದುವರಿಕೆಗೆ ಸಂಕೇತವಾಗಿ ಕೆಲಸ ಮಾಡುತ್ತದೆ.

ಅದಕ್ಕೆ ತದ್ವಿರುದ್ಧವಾಗಿ ಶೀತಲ ಮನೋಧರ್ಮ ಅಪಾಯಕಾರಿಯಾದುದು. ಅದು ಒಳಗೊಳಗೆ ಕೊರೆಯುತ್ತದೆ. ಅದು ಸಾವಿಗೆ ಸಂಕೇತ;ಕೊಳೆತದ ಸಂಕೇತ; ವಿನಾಶದ ಸಂಕೇತ. ಈ ವಾಸ್ತವಾಂಶವನ್ನು ಎಲ್ಲ ಕವಿ ದಾರ್ಶನಿಕರು ಒಪ್ಪಿ ಕಾಲಕಾಲಕ್ಕೆ ಪುನರುಚ್ಚರಿಸುತ್ತಾ ಬಂದಿದ್ದಾರೆ. ಸೃಷ್ಟಿಪರರಾದ ಈ ಮಂದಿ ಬೆಚ್ಚನೆಯ ಪರವಿದ್ದುದು ಆಶ್ಚರ್ಯವಲ್ಲ. ಸೃಷ್ಟಿಯ ಈ ಮುಖ್ಯ ಅಂಶಗಳು ಮೂಲಭೂತ ವಸ್ತುಗಳಲ್ಲಿ ಪ್ರಧಾನವಾದವು. ಈ ಜಗತ್ತಿನ ಸಮಸ್ತವೂ ಈ ಮೂಲಭೂತ 'ವಸ್ತು'ಗಳಾದ ಅಗ್ನಿ, ಗಾಳಿ, ನೀರು, ಮಣ್ಣುಗಳಿಂದ ಸೃಷ್ಟಿಯಾಗಿದೆಯೆಂದು ತತ್ತ್ವಶಾಸ್ತ್ರ ಮತ್ತು ವಿಜ್ಞಾನಗಳು ಸಾರುತ್ತವೆ. (ಭಾರತೀಯ ತತ್ತ್ವಶಾಸ್ತ್ರ ಕೂಡ ಈ ನಾಲ್ಕರ ಜೊತೆ 'ಆಕಾಶ'ವನ್ನು ಸೇರಿಸಿ ಪಂಚಭೂತವೆಂದು ಕರೆದಿದೆ.) ಅಂದಮೇಲೆ ಈ ಎಲ್ಲಾ ಮೂಲಭೂತ ವಸ್ತುಗಳು ಅತ್ಯಂತ ಮುಖ್ಯವೆಂದಾಯಿತು. ಅದರಲ್ಲಿ ನಮ್ಮ ಕವಿ ಫ್ರಾಸ್ಟ್ ಎರಡರ ಬಗ್ಗೆಯೇ ಏಕೆ ಮಾತನಾಡುತ್ತಾನೆ?

'ಹಿಮ'ವೆಂಬುದು ನೀರಿನ ಸಾಂದ್ರರೂಪ. ಅದಿಲ್ಲದೆ ಬದುಕು ಅಸಾಧ್ಯ. ಈ ಗ್ರಹದ ಮುಕ್ಕಾಲು ಅದೇ ಆಗಿದೆ. ನಮ್ಮ ದೇಹದ ಬಹುಭಾಗ ಅದರಿಂದಲೇ ತುಂಬಿದೆ. ಅಂದಮೇಲೆ 'ನೀರು' ಶೀತಲವೆಂದು ಏಕೆ ಕರೆಸಿಕೊಂಡಿತು? 'ನೀರು' ಎಂದು ಕರೆಯಿಸಿಕೊಳ್ಳುವಾಗ ಅದು 'ಜೀವದ್ರವ್ಯ'. ಅದರ ಕೊರೆಯಾದಾಗ ಸಾವು ನಿಶ್ಚಿತ! ಇಲ್ಲೊಂದು ವಿಚಿತ್ರ ಸತ್ಯವಿದೆ; ನೀರು ದೇಹಕ್ಕೆ ಕಡಿಮೆಯಾದಾಗಲೂ ಸಾವು! ನೀರು ಅಧಿಕವಾದರೂ ಸಾವು! ಅಂದರೆ ಅದರಲ್ಲೊಂದು ಸಮತೋಲನ ನ್ಯಾಯದ ಕಲ್ಪನೆಯಿದೆ. ಯಾವ ಸಮಯದಲ್ಲಾದರೂ ಏರುಪೇರಾಗಬಾರದು.

ಬದುಕು ಬಯಸುವುದು ವಸ್ತುವೊಂದರ ಔಚಿತ್ಯವರಿತ ಭಾಗವನ್ನು. 'ಅಗ್ನಿ' ಬೆಂಕಿಯಾದಾಗ ಕೂಡ ಮಾರಕವೇ! ಅದು ಬೆಚ್ಚನೆಯ ಅನುಭವವಾಗಿ ಮಾತ್ರವಿರಬೇಕು. ಇಲ್ಲದಿದ್ದಲ್ಲಿ ಅದು ನಮ್ಮನ್ನೇ ಸುಡುತ್ತದೆ; ಚಿತೆಯಾಗಿ ಅಪಾಯಕಾರಿಯಾಗುತ್ತದೆ. ದೇಹದಲ್ಲಿ ಅಗ್ನಿಯ ಅಂಶ ಅಧಿಕವಾದಾಗ 'ಉರಿ'ಯ ಅನುಭವವಾಗುತ್ತದೆ. ಕನ್ನಡದ ಈ 'ಉರಿ' ಪದ ಜೀವಂತ ಸುಡುವ ಆದರೆ ಸಾವನ್ನು ತರದೆ ನೋವು ಕೊಡುವ ನಿರಂತರ ಬಾಧೆಯ ಅರ್ಥವನ್ನು ಸ್ಫುರಿಸುತ್ತದೆ. ಇದು ತನ್ನ 'ಬೆಚ್ಚನೆ'ಯ ಚೌಕಟ್ಟನ್ನು ಮೀರಿ ಬೆಂಕಿಯಾದಾಗ ಹಿಮದಂತೆ ಅಪಾಯಕಾರಿಯಾಗುತ್ತದೆ.

ಅಂದರೆ 'ಅಗ್ನಿ' ಮತ್ತು 'ಹಿಮ' ನಮಗೆ ಬೇಕೇಬೇಕು. ಆದರೆ ಅವು ಅತಿಯಾಗಬಾರದು. ಅತಿಯಾದಾಗ ಮೂಲಭೂತ ವಸ್ತುಗಳ ಅಸಮತೋಲನ ಪ್ರಾಪ್ತವಾಗಿ ಪ್ರಕೃತಿ ಏರುಪೇರಾಗುತ್ತದೆ. ಜೀವಿ ಸಾವಿನಂಚಿಗೆ ಸಾಗುತ್ತದೆ. ಈ ಎರಡು 'ವಸ್ತು'ಗಳು ಮಾತ್ರವಲ್ಲ 'ಗಾಳಿ'ಯ ಕೊರತೆ ಸಾವು ತರುತ್ತದೆ; ಮಣ್ಣಿನ ಕೊರತೆ ರೋಗ ರುಜಿನಗಳಿಗೆ ಪಾತ್ರವಾಗುತ್ತದೆ. ಆದುದರಿಂದ ನಮ್ಮ ದೇಹದಲ್ಲಿ ಈ ವಸ್ತುಗಳ ಸಮತೋಲನ, ಸಮರಸ ಸಾಮರಸ್ಯವಿರಬೇಕು. ಆಗ ಮೈಮನಗಳು ಆನಂದವಾಗಿಯೂ ಆರೋಗ್ಯವಾಗಿಯೂ ಇರುತ್ತವೆ.

ಇಲ್ಲಿ ಮುಖ್ಯವಾಗಿ ಅಗ್ನಿ ಮತ್ತು ಹಿಮಗಳನ್ನು ಮೂಲಭೂತ ವಸ್ತುಗಳೆಂಬಂತೆ ನೋಡುವುದರ ಬದಲು ಜೀವಿಯ ಮನೋನೆಲೆಯಲ್ಲಿ ಅವು ಸ್ಥಾಪಿತಗೊಂಡಿರುವ ಗುಣವಿಶೇಷಗಳೆಂದೇ ಪರಿಗಣಿಸುವುದು ಸೂಕ್ತ. ಕವಿಯ ಉದ್ದೇಶವೂ ಅದೇ ಆಗಿದೆ. ನಾವು ಬೆಂಕಿಯಾಗುವುದು ಬೇಡ; ಬೆಚ್ಚನೆಯ ಅಪ್ಪುಗೆಯಾಗಬೇಕು. ನಮ್ಮ ತಲೆಯಲ್ಲಿ- ಮನಸ್ಸಿನಲ್ಲಿ ಶೀತಲರಾಗುವುದು ಬೇಡ; ಬದುಕನ್ನು ರಕ್ಷಿಸುವ ನೀರಾಗಬೇಕು.

೦೩-೧೨-೨೦೦೯

# ಆಸೆಯೆಂಬುದು ಅರಸಿಂಗಲ್ಲದೆ..

ಆಯ್ದಕ್ಕಿ ಮಾರಯ್ಯ ಬಸವಣ್ಣನವರ ಸಮಕಾಲೀನ. ಅವನ ಕಾಯಕ ಅತ್ಯಂತ ವಿಶಿಷ್ಟವಾದುದು; ಪಕ್ಷಿಗಳಿಗೆ ಅನ್ವಯಮಾಡಿ ಹೇಳುವಂಥ ಕಾಯಕ. ಬೆಳೆ ಬೆಳೆಯುವ ಬಯಲಿನಲ್ಲಿ ರೈತರು ಕೊಯ್ಲುಮಾಡಿ ತಮ್ಮ ಧಾನ್ಯಗಳನ್ನು ತೆಗೆದುಕೊಂಡು ಹೋದಮೇಲೆ, ಹೊಲಗಳಲ್ಲಿ ಅಲ್ಲಲ್ಲಿ ಬಿದ್ದಿರುವ ಕಾಳುಗಳನ್ನು ಆಯ್ದು ಕಾಯಕ ಮಾಡುವ ವೃತ್ತಿ ಅವನದು. ಬೆಳಿಗ್ಗೆಯಿಂದ ಸೂರ್ಯ ಮುಳುಗುವವರೆಗೂ ಆಯುವ ಕಾಯಕ ಮಾಡಿ ಆ ದಿನಕ್ಕಾಗುವಷ್ಟು ಧಾನ್ಯಗಳನ್ನು ತಂದು ತನ್ನ ಮಡದಿ ಲಕ್ಕಮ್ಮನಿಗೆ ನೀಡುತ್ತಿದ್ದ. ಅದರಿಂದ ಅವಳು ಆಹಾರ ತಯಾರಿಸುತ್ತಿದ್ದಳು. ಒಮ್ಮೆ ಅವನು ತುಸು ಹೆಚ್ಚು ಅಕ್ಕಿಯನ್ನು ಆಯ್ದು ಮನೆಗೆ ತಂದನು. ಅದು ಅವನ ಮಡದಿಗೆ ಇಷ್ಟವಾಗಲಿಲ್ಲ. ತನ್ನ ಗಂಡನಿಗೆ ಹೀಗೆ ಹೇಳಿದಳು:

**ಆಸೆಯೆಂಬುದು ಅರಸಿಂಗಲ್ಲದೆ**
**ಶಿವಭಕ್ತರಿಗುಂಟೆ ಅಯ್ಯ!...**
**ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ**
**ಮಾರಯ್ಯ ಪ್ರಭು ಅಮರೇಶ್ವರಲಿಂಗಕ್ಕೆ ದೂರ ಮಾರಯ್ಯ.**

ಪಶುಪಕ್ಷಿಗಳು ಅಂದಂದಿನ ಆಹಾರವನ್ನು ಅಂದಂದೇ ಹುಡುಕಿ ಭುಜಿಸುತ್ತವೆ. ಸಂಗ್ರಹಗುಣ ಅವಕ್ಕಿಲ್ಲ. ಸಂಗ್ರಹವೆಂಬುದು ಪ್ರಕೃತಿ ನ್ಯಾಯಕ್ಕೆ ವಿರುದ್ಧವಾದ ಗುಣ. ಸಂಗ್ರಹವೆಂಬುದು ಇತರರ ಆಹಾರವನ್ನು, ಸುಖವನ್ನು ಕಿತ್ತುಕೊಳ್ಳುವ ಪ್ರವೃತ್ತಿ. ಸಂಗ್ರಹವೆಂಬುದು ದುರಾಸೆಯನ್ನು, ಸ್ವಾರ್ಥವನ್ನು ಸೂಚಿಸುತ್ತದೆ. ಈ ಪ್ರವೃತ್ತಿ ಮುಂದೆ ಬೆಳೆದಂತೆಲ್ಲ ಮಾನವ ಜಗತ್ತಿನಲ್ಲಿ ಬಡವ-ಶ್ರೀಮಂತ ವರ್ಗ ವ್ಯವಸ್ಥೆ ಉಂಟಾಗಲು ಕಾರಣವಾಯಿತು. ಮುಂದೆ ಈ ಪ್ರವೃತ್ತಿಯೇ ಬಂಡವಾಳವಾಗಿ ಬಡವರನ್ನು ಶೋಷಿಸುವ ಅಸ್ತ್ರವಾಗಿ ಕೆಲಸ ಮಾಡಿತು. ಈ ಕ್ರೂರತೆಯನ್ನು ಹನ್ನೆರಡನೆ ಶತಮಾನದಲ್ಲಿ ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮ ಗುರುತಿಸಿ ಹೆಚ್ಚು ಅಕ್ಕಿ ತಂದ ಗಂಡನನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. ಇದು 'ಈಶ್ವರನೊಪ್ಪುವ' ಕೆಲಸವಲ್ಲ. ದೇವರಿಂದ ದೂರವಾಗುವ ಸಂಗತಿಯೆಂದು ಗಂಡನಿಗೆ ತಿಳಿಹೇಳುತ್ತಾಳೆ.

ವಚನಕಾರರು ಬದುಕಿನ ಬವಣೆಯನ್ನು ಆಳವಾಗಿ ಗ್ರಹಿಸಿದ್ದರು. ತಾರತಮ್ಯ ಭಾವನೆಯಿಂದಾಗಿ, ಆರ್ಥಿಕ ಧಾರ್ಮಿಕ ಕಾರಣದಿಂದಾಗಿ ಸಾಮಾನ್ಯರು ನಲುಗಿ ಹೋಗಿರುವ ಸತ್ಯವನ್ನು ಅರಿತಿದ್ದರು. ಅದನ್ನು ಗುರುತಿಸಿ ತಮ್ಮ ವಚನಗಳಲ್ಲಿ ವ್ಯಕ್ತಪಡಿಸಿದರು. ಬಡವ-ಬಲ್ಲಿದರಲ್ಲಿನ ಮಾನವಪ್ರೀತಿ-ಮಾನವತೆಯ ಸ್ಪಂದನವನ್ನು ಅರ್ಥಮಾಡಿಕೊಂಡಿದ್ದರು. ಬಡವ

ಬಡವನಿಗಾಗುತ್ತಾನೆ; ಬಡವ ನೋವಿಗೆ ಸ್ಪಂದಿಸಿ ನೆರವಿನ ತುಡಿತವನ್ನು ಮಿಡಿಯುತ್ತಾನೆ. ತನ್ನಲ್ಲಿರುವಷ್ಟರಲ್ಲೇ ಹಂಚಿ ತಿನ್ನುವ ಮನೋಧರ್ಮ ಸಾಮಾನ್ಯನಿಗಿರುತ್ತದೆ. ಈ ಸಾಮಾನ್ಯನಿಗಿರುವ ಗುಣವನ್ನೇ ಕುವೆಂಪು ಅವರು ಗುರುತಿಸಿ 'ಶ್ರೀ ಸಾಮಾನ್ಯತೆ' ಎಂದು ಕರೆದು ಅದು 'ಭಗವನ್ ಮಾನ್ಯಂ' ಎಂದರು. ಈ ಅಂಶವನ್ನೇ ಕಾರ್ಲ್ ಮಾರ್ಕ್ಸ್‌ನು ತನ್ನ ಸಿದ್ಧಾಂತದ ಆತ್ಮವನ್ನಾಗಿಸಿಕೊಂಡಿದ್ದಾನೆ; ಗಾಂಧೀಜಿಯವರು ಹಂಚಿಕೆಯ ಮಂತ್ರವನ್ನಾಡುತ್ತಾರೆ; ವಿನೋಬಾ ಅವರು 'ಭೂದಾನ'ದ ಚಳವಳಿಯನ್ನಾಗಿಸುತ್ತಾರೆ.

ಆಯ್ದಕ್ಕಿ ಲಕ್ಕಮ್ಮ ಇಲ್ಲಿ ಮತ್ತೊಂದು ಮುಖ್ಯ ಮನಸ್ಥಿತಿಯೊಂದನ್ನು ಗುರುತಿಸಿದ್ದಾಳೆ. 'ಆಸೆಯೆಂಬುದು ಅರಸಿಂಗಲ್ಲದೆ..' ಎಂಬ ಮಾತಿನಲ್ಲಿ ಶ್ರೀಮಂತರ ಮನೋಧರ್ಮವನ್ನು ಅನಾವರಣ ಮಾಡಿದ್ದಾಳೆ. ಶಿವಭಕ್ತರಿಗೆ ಆಸೆ ಇರದು ಎಂದರೆ ಕೂಡಿಡುವ ಆಸೆಯಿರದು ಎಂದರ್ಥ. ಶಿವಭಕ್ತ ವರ್ಗ ಮತ್ತು ಜಾತಿ ವ್ಯವಸ್ಥೆಯನ್ನು ಹೊಡೆಯುವ ಗುರಿಯನ್ನಿಟ್ಟುಕೊಂಡಿರುತ್ತಾನೆ. ಅವನು ಸಮತಾಭಾವದಲ್ಲಿ ನಂಬಿಕೆಯಿಟ್ಟವನು. 'ಸರ್ವರಿಗೆ ಸಮಪಾಲು; ಸರ್ವರಿಗೆ ಸಮಬಾಳು' ಎಂಬ ಧ್ಯೇಯವುಳ್ಳವನು. ಆದರೆ 'ಅರಸ'ನಿಗೆ ಈ ಮನೋಧರ್ಮವಿರುವುದಿಲ್ಲ. ಅರಸರಿಗೆ ಕಾರ್ಯಪ್ರಜ್ಞೆಯೇ ಇರುವುದಿಲ್ಲ. ತಮ್ಮ ದೇಹದಂಡನೆಯ ಮೂಲಕ ದೇಹ ಪೋಷಣೆ ಮಾಡಬೇಕೆಂಬ ಅರಿವೂ ಇರುವುದಿಲ್ಲ. ಅವರು ಇತರರ ಕಾಯಕದ ಮೇಲೆ, ಶ್ರಮದ ಮೇಲೆ ಅವಲಂಬಿತರಾಗಿರುತ್ತಾರೆ. ಸಾಮಾನ್ಯರಿರುವುದೇ ತಮ್ಮ ಸೇವೆಗೆಂದು ತಿಳಿದವರು. ಸಾಮಾನ್ಯರು ಅರಸರ ಸೇವಕರು, ಗುಲಾಮರು, ಹೆಚ್ಚೆಂದರೆ ಪರಿವಾರದವರು. ಅರಸುಗಳಿಗೆ ಆಸೆಯೆಂಬುದು ಅಸ್ತಿತ್ವದ ಗುಣವಾಗಿರುತ್ತದೆ. ಭೋಗದಾಸೆ, ಇತರರ ಆಸ್ತಿಯನ್ನು ಮತ್ತು ಇತರ ಸಾಮ್ರಾಜ್ಯವನ್ನು ಕಬಳಿಸುವ ಆಸೆ ಇರುತ್ತದೆ. ಅದಕ್ಕಾಗಿ ಸಾಮಾನ್ಯರ ಆಸ್ತಿಪಾಸ್ತಿಗಳನ್ನು, ಪ್ರಾಣವನ್ನು ನಾಶಮಾಡುತ್ತಾರೆ. ಮುತ್ತಿಗೆ ಹಾಕಿದ ಸಮಯದಲ್ಲಿ ಅತ್ಯಂತ ಕ್ರೂರವಾಗಿ ನಡೆದುಕೊಳ್ಳುತ್ತಾರೆ. ಚರಿತ್ರೆಯಲ್ಲಿ ಈ ಅರಸುಗಳ ಕ್ರೌರ್ಯ ಅಡೆತಡೆಯಿಲ್ಲದೆ ನಡೆದಿರುವುದನ್ನು ನೋಡಬಹುದು.

ಇಂಥ ಸ್ವಾರ್ಥಿಗಳೂ ಆಸೆಬುರುಕರೂ ಆದ ಅರಸುಗಳು ಇಂದು ಇಲ್ಲ. ಇರುವಂಥ ಕೆಲವರಾದರೂ ರೆಕ್ಕೆಪುಕ್ಕ ಕಳೆದುಕೊಂಡು ರಾಜಧನಕ್ಕಾಗಿ ಕೈ ಚಾಚಿ ನಿಂತಿದ್ದಾರೆ. ಆದರೆ ಅವರ ಸ್ಥಾನದಲ್ಲಿ ನವಶ್ರೀಮಂತರು ಉದ್ಭವಗೊಂಡಿದ್ದಾರೆ. ಇಂದು ಭಾರತ ಇಪ್ಪತ್ತು ಶ್ರೀಮಂತರ ಕೈಯಲ್ಲಿದ್ದರೆ, ಜಗತ್ತು ಅಂಥ ನೂರಿಪ್ಪತ್ತು, ಶ್ರೀಮಂತರ ಹಿಡಿತದಲ್ಲಿದೆ. ಸಾಮ್ರಾಜ್ಯಗಳು ಅಳಿದು ಶ್ರೀಮಂತರ ಅರ್ಥಾತ್ ವರ್ತಕರ ನವಸಾಮ್ರಾಜ್ಯಶಾಹಿಗಳು ಜನಿಸಿದ್ದಾರೆ. ಇವರು ಸರ್ಕಾರಗಳನ್ನು ಸಮುದಾಯಗಳನ್ನು ಸ್ವಾರ್ಥಕ್ಕಾಗಿ ತಮ್ಮ ನಿಯಂತ್ರಣಕ್ಕೆ ತೆಗೆದುಕೊಂಡಿದ್ದಾರೆ. ಇಂದು ಜನಪ್ರತಿನಿಧಿಗಳೆನ್ನಿಸಿಕೊಂಡ ನಮ್ಮ (ಜಗತ್ತಿನ) ರಾಜಕಾರಣಿಗಳು ಜನವಿರೋಧಿಗಳಾಗಿ ಈ 'ನವರಾಜ'ರ ಕೈಗೊಂಬೆಗಳಾಗಿದ್ದಾರೆ. ಮತ್ತೆ ಲಕ್ಕಮ್ಮ ಪ್ರಸ್ತುತವಾಗಿ 'ಆಶೆಯೆಂಬುದು ಅರಸಿಂಗಲ್ಲದೆ' ಎಂಬ ಮಾತು ಅನುರಣಿತವಾಗುತ್ತದೆ.

೧೭-೧೨-೨೦೦೯

# ಉಪಕಾರ ಮತ್ತು ಋಣ

ಮನುಷ್ಯ ಸಮುದಾಯ ಜೀವಿ, ಮನುಷ್ಯನೇ ಏಕೆ? ಜೀವಜಗತ್ತಿನಲ್ಲಿ ಸಕಲ ನೂರೆಂಟು ಜೀವ ಸಂಕುಲಗಳು ಕೂಡ ಸಂಘಜೀವಿಗಳೇ ಆಗಿವೆ. ಹುಲಿ ಸಿಂಹಗಳಂತಹ ಮಾಂಸಾಹಾರಿಗಳೂ, ಆನೆ ಜಿರಾಫೆ, ಕಾಡೆಮ್ಮೆ, ಜಿಂಕೆಗಳಂಥ ಸಸ್ಯಾಹಾರಿಗಳೂ, ಪಾರಿವಾಳ ಗುಬ್ಬಿ, ಗಿಳಿ- ಮುಂತಾದ ಪಕ್ಷಿಗಳೂ ಸಂಘಜೀವನವನ್ನು ಇಷ್ಟಪಡುತ್ತವೆ. ಕ್ರಿಮಿಕೀಟಗಳು ಸಾಮ್ರಾಜ್ಯ ಕಟ್ಟಿ ಗುಂಪಿನಲ್ಲೇ ಬದುಕುತ್ತವೆ. ಈ ಗುಂಪು ಜೀವನದಲ್ಲಿ ಸಮಾನ ಜೀವನಾಭಿರುಚಿ ಇರುತ್ತದೆ; ಆಹಾರ ಸಂಸ್ಕೃತಿ ಇರುತ್ತದೆ; ಒಂದೇ ಬಗೆಯ ಜೈವಿಕ ಕ್ರಿಯೆಗಳಿರುತ್ತವೆ. ಸಂಕುಲ ಸಂಕುಲಗಳಲ್ಲಿ ಸಂಕರ ಸಾಧ್ಯವಾಗುವುದಿಲ್ಲ. ಇದರಿಂದಾಗಿಯೇ ಅವು ತಮ್ಮ ಅಸ್ತಿತ್ವದ ಉಳಿವಿಗಾಗಿ ಸಂಘ ಜೀವನವನ್ನು ಮತ್ತಷ್ಟು ಗಟ್ಟಿ ಮಾಡಿಕೊಳ್ಳಲು ಪ್ರಯತ್ನಿಸುತ್ತವೆ. ಜೊತೆಗೆ ಸಂಘ ಜೀವನದಲ್ಲಿ ಇತರ ಸಂಕುಲಗಳಿಂದ ರಕ್ಷಣೆ ದೊರೆಯುತ್ತದೆ. ಜೀವಕ್ಕೆ ಆಪತ್ತು ಬಂದಾಗ ಸಂಘ ಬದುಕು ರಕ್ಷಣೆಗೆ ಬಂದು ಕಾಪಾಡುತ್ತದೆ.

ಮೇಲಿನ ಬದುಕು ಪ್ರವೃತ್ತಿ ಮಟ್ಟದಲ್ಲಿ ನಡೆಯುವಂಥದ್ದು. ಅಂದಮೇಲೆ ಪ್ರವೃತ್ತಿಯಾಚೆಗಿನ ಸಂಸ್ಕೃತಿ ಮತ್ತು ಭಾವಪ್ರಪಂಚದಲ್ಲಿ ವ್ಯವಹರಿಸುವ ಮನುಷ್ಯ ಇನ್ನೂ ಹೆಚ್ಚು ಸಂಘ ಜೀವಿಯಾಗಿರುತ್ತಾನೆ. ಅವನು ಕೇವಲ ಭಾವ ಜಗತ್ತಿನಲ್ಲಿ ವಿಹರಿಸುವುದಿಲ್ಲ; ಅವನು ಅಸಾಧಾರಣ ಬುದ್ಧಿಜೀವಿಯೂ ಆಗಿದ್ದಾನೆ. ಅದನ್ನು ಬಳಸಿಕೊಂಡು ಸಂಸ್ಕೃತಿ ನಾಗರಿಕತೆಗಳನ್ನು ಕಟ್ಟಿದ್ದಾನೆ; ಸಾಹಿತ್ಯ ಸಂಗೀತ ಶಿಲ್ಪ - ಮುಂತಾದ ಕಲಾಜಗತ್ತನ್ನೂ ಸೃಷ್ಟಿಸುತ್ತಾನೆ. ಅಷ್ಟೇ ಅಲ್ಲದೆ ಈ 'ಬದುಕಿನಾಚೆಯ ಬದುಕಿ'ನ ಬಗ್ಗೆ, ಗೂಢಗಳ ಬಗ್ಗೆ ಚಿಂತಿಸಿದ್ದಾನೆ. ಪಾಪ ಪುಣ್ಯ - ಸ್ವರ್ಗ ನರಕಗಳ ಬಗ್ಗೆ ಮಾತನಾಡಿದ್ದಾನೆ. ಅದಕ್ಕಿಂತಲೂ ಎತ್ತರದ ಅಧ್ಯಾತ್ಮದ ಬಗ್ಗೆ ತಲೆ ಕೆಡಿಸಿಕೊಂಡಿದ್ದಾನೆ.

ಇಂಥ ನೆಲೆಯಲ್ಲಿಯೇ ಆತನಿಗೆ ಉಪಕಾರ ಸ್ಮರಣೆಯು ಒಂದು ದೊಡ್ಡ ಮೌಲ್ಯವಾಗಿ ಕಂಡಿದೆ. ತನ್ನ ಕಷ್ಟಕಾಲದಲ್ಲಿ ಸಹಾಯ ಮಾಡಿದವರನ್ನು, ಆಪತ್ಕಾಲದಲ್ಲಿ ರಕ್ಷಣೆ ಮಾಡಿದವರನ್ನು ಜಾತಿ, ಕುಲ, ಮತ ವರ್ಗಗಳ ಯಾವ ಗೋಡೆಗಳನ್ನೂ ಲೆಕ್ಕಿಸದೆ ಸ್ಮರಣೆ ಮಾಡುವ, ಹೃದಯದಲ್ಲಿಟ್ಟು ಪೂಜಿಸುವ ಸಾವಿರಾರು ವ್ಯಕ್ತಿಗಳನ್ನು ನಾವು ಕಾಣಬಹುದು. ಹೀಗೆ ಬದುಕಿನ ಸಂಕಷ್ಟ ಸ್ಥಿತಿಯಲ್ಲಿ ನೆರವಾದವರ ಹೆಸರನ್ನು ತಮ್ಮ ಮಕ್ಕಳಿಗಿಟ್ಟು, ಸದಾ ಅವರ ಹೆಸರನ್ನು ಕರೆದು ಸ್ಮರಿಸಿಕೊಳ್ಳುವ ಹಲವರನ್ನು ನೋಡಬಹುದು. ಈ ಉಪಕಾರ ಕ್ರಿಯೆಯನ್ನು ನಮ್ಮ ಹಿರಿಯರು 'ಋಣ'ವೆಂದು ಭಾವಿಸಿದ್ದೂ ಉಂಟು; 'ಮಹಾಭಾರತ' ಮಹಾಕಾವ್ಯದಲ್ಲಿ ದ್ರೋಣ,

ಭೀಷ್ಮರು ಈ ಋಣಭಾರದಲ್ಲಿ ನರಳುತ್ತಾರೆ. 'ಜೋಳದ ಪಾಳಿ'ಯನ್ನು ತೀರಿಸದೆ ನಮಗೆ ಮುಕ್ತಿಯಿಲ್ಲವೆಂದು ಬಗೆಮು- ಅದಕ್ಕಾಗಿಯೇ ತಮ್ಮ ಪ್ರಾಣತ್ಯಾಗ ಮಾಡುತ್ತಾರೆ. ಹಾಗೆಯೇ ತಮಗೆ ಉಪಕಾರ ಮಾಡಿದ ಶ್ರೀರಾಮನ ಋಣವನ್ನು ತೀರಿಸಲು ಸುಗ್ರೀವ 'ರಾಮಾಯಣ'ದಲ್ಲಿ ರಾಮನ ಪರವಾಗಿ ಹೋರಾಡುತ್ತಾನೆ. ಇಲ್ಲಿ ಉಪಕಾರ ಸ್ಮರಣೆಯೂ ಋಣದ ರೂಪದಲ್ಲಿ ಕ್ರಿಯಾಶೀಲವಾಗುತ್ತದೆ. ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡಬೇಕೆಂಬುದು ಒಂದು ಮೌಲ್ಯವಾಗಿ ಕೆಲಸ ಮಾಡಿರುವುದು ನಮ್ಮ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಆ ಉಪಕಾರವನ್ನು ತೀರಿಸುವುದು ವ್ಯಕ್ತಿಯ ಕರ್ತವ್ಯವೆಂದೂ ಇಲ್ಲದಿದ್ದರೆ ಅದು ಋಣವಾಗಿ ಕಾಡುವುದೆಂದೂ ಅದರಿಂದ ಮುಕ್ತಿ ದೊರೆಯದೆಂದೂ ನಮ್ಮವರು ಭಾವಿಸಿದ್ದರು. ಉಪಕಾರ ಪಡೆದವರು ಅವರ ಸ್ಮರಣೆ ಮಾಡುವುದು ಹಾಗೂ ಅದನ್ನು ತೀರಿಸುವ ಪ್ರಾಮಾಣಿಕ ಯತ್ನ ಮಾಡುವುದು ಸರಿ. ಅದನ್ನು ಒಂದು ನಾಗರಿಕ ನಡೆಯೆಂದೂ ಮೌಲ್ಯವೆಂದೂ ಬಗೆದರೂ ತಪ್ಪಾಗದು. ಆದರೆ, ಉಪಕಾರ ಮಾಡಿದವರು ತಾವು ಮಾಡಿದ ಉಪಕಾರವನ್ನು ಒಂದು ಶೋಷಣೆಯ ಅಸ್ತ್ರವನ್ನಾಗಿ, ದಬ್ಬಾಳಿಕೆಯ ಮಾರ್ಗವಾಗಿ ಬಳಸಿಕೊಳ್ಳುವ ಸಾಧ್ಯತೆಯೂ ಉಂಟು ಎಂಬುದನ್ನು ಮರೆಯಬಾರದು. ಈ ದೃಷ್ಟಿಯ ಉಪಕಾರವು ಅಂತಃಕರಣದ ಮೂಲಕ ಬಂದುದಾಗಿರುವುದಿಲ್ಲ. ದುರಾಲೋಚನೆಯಿಂದ, ಸ್ವಾರ್ಥದಿಂದ ಮಾಡಿದ ಉಪಕಾರಕ್ಕೆ ಬೆಲೆ ಬರುವುದಿಲ್ಲ. ಉಪಕಾರದ ಹಿಂದೆ ಈ ದೃಷ್ಟಿಯಿದ್ದರೆ ಅದನ್ನು ಗೌರವಿಸಬೇಕಾಗಿಲ್ಲ ಮತ್ತು ಮಾನ್ಯ ಮಾಡಬೇಕಿಲ್ಲ.

೩೧-೧೨-೨೦೦೯

# ಅಜ್ಜನ ಹೆಗಲ ಮೇಲೆ...

ಕನ್ನಡದ ಪ್ರಮುಖ ಕವಿಗಳಲ್ಲಿ ಒಬ್ಬರಾದ ಚಂದ್ರಶೇಖರ ಪಾಟೀಲರು ತಮ್ಮ ಪದ್ಯವೊಂದರಲ್ಲಿ ಹೀಗೆ ಹೇಳುತ್ತಾರೆ. 'ಹೋಗಿ ಬರ್ತೇನಜ್ಜ, ಹೋಗಿ ಬರ್ತೇನೆ. ನಿನ್ನ ಪಾದದ ದೂಳಿ ನನ್ನ ಹಣೆಯ ಮೇಲಿರಲಿ, ಅದು ಮಾತ್ರ ಕಣ್ಣಿಗೆ ಬೀಳದಿರಲಿ'- ಈ ಪದ್ಯದ ಸಾಲುಗಳು ಹಳೆಯದು ಹೊಸತರ ಔಚಿತ್ಯಪೂರ್ಣ ಬೆಸುಗೆಯನ್ನೂ ಪ್ರಸ್ತುತತೆಯನ್ನೂ, ಧ್ವನಿಪೂರ್ಣವಾಗಿ ಅಭಿವ್ಯಕ್ತಿಸುತ್ತವೆ. ನಮಗೆ ಹಳೆಯದು ಬೇಕು; ಒಂದು ಸಾಂಸ್ಕೃತಿಕ ಸಂಪತ್ತಿನ ರೂಪದಲ್ಲಿ, ಅನುಭವ ಸಂಪತ್ತಿನ ರೂಪದಲ್ಲಿ, ಜ್ಞಾನ, ವಿಜ್ಞಾನ ಅಧ್ಯಾತ್ಮ ಪರಿಪಾಕ ಮಾರ್ಗದರ್ಶನದ ರೂಪದಲ್ಲಿ. ಅಂದರೆ, ವರ್ತಮಾನವೆಂಬುದು ಸಶಕ್ತವಾಗಿ ಸತ್ತ್ವಭರಿತ ಹೆಜ್ಜೆ ಇಡಬೇಕಾದರೆ ಅದಕ್ಕೆ ಹಳೆಯದರ ಬುನಾದಿ ಬೇಕು. ಈ ಬುನಾದಿಯನ್ನು ನಾವು ಪರಂಪರೆಯೆಂದು ಗುರುತಿಸುತ್ತೇವೆ. ಒಂದು ಶ್ರೀಮಂತ ಪರಂಪರೆಯಿರುವ ಜನಾಂಗಕ್ಕೆ ಶ್ರೀಮಂತವಾದ ತತ್ತ್ವ ಜ್ಞಾನದ ಕಲಾ ಜಗತ್ತಿನ, ಜನಪದ ಸ್ವರೂಪದ ಸತ್ತ್ವಗಳು ವರ್ತಮಾನವನ್ನು ಕಟ್ಟಿ ಕೈ ಹಿಡಿದು ನಡೆಸುತ್ತವೆ. ಇದು ಅನೇಕ ಸಂದರ್ಭಗಳಲ್ಲಿ ಕಲಿಕೆಯ ರೂಪದಿಂದ ವರ್ತಮಾನಕ್ಕೆ ವೇದ್ಯವಾಗದೆ ಅಮೂರ್ತ ನೆಲೆಗಳಲ್ಲಿ ವಂಶವಾಹಿಗಳ ರೂಪದಲ್ಲಿ ಗಮ್ಯವಾಗುತ್ತವೆ. ಈ ಶಕ್ತಿ ಈ ಅಂಶಗಳಾಗಿರುವುದರಿಂದಲೇ ವರ್ತಮಾನ ಪ್ರಜ್ಞಾಪೂರ್ವಕವಾಗಿ ಅವುಗಳನ್ನು ನಿವಾರಿಸಿಕೊಳ್ಳಬೇಕೆಂದು ಬಯಸಿದರೂ ಅವುಗಳನ್ನು ತ್ಯಜಿಸಲಾಗುವುದಿಲ್ಲ. ಅವು ನಮ್ಮ ನಡೆ ನುಡಿಗಳಲ್ಲಿ ಆಂಗಿಕ ಭಾಷೆಯಲ್ಲಿ, ಆಹಾರ ಶೈಲಿಯಲ್ಲಿ ಮತ್ತು ನಮ್ಮ ದೈಹಿಕ ಚಹರೆ ಮತ್ತು ವಿನ್ಯಾಸದಲ್ಲಿ ಆಯಾಚಿತವಾಗಿ ಬಿಂಬಿತವಾಗಿರುತ್ತವೆ.

ಆದುದರಿಂದ ಈ ತೆರನ ಪರಂಪರಾಗತ ಸತ್ವಗಳನ್ನು ನಾವು ತಿರಸ್ಕರಿಸದೆ ಪ್ರೀತಿಸಿ ಸ್ವೀಕರಿಸುವುದು ಒಳ್ಳೆಯದು. ಏಕೆಂದರೆ ವರ್ತಮಾನ ನಿಂತಿರುವುದೇ 'ಅಜ್ಜನ ಹೆಗಲ' ಮೇಲೆ ಎಂಬ ಸತ್ಯವನ್ನು ನಾವು ಒಪ್ಪಿಕೊಳ್ಳಬೇಕು. ಈ ಅಜ್ಜನ ಆಶೀರ್ವಾದದ, ಸಾಂಸ್ಕೃತಿಕ ಮಾರ್ಗದರ್ಶನ ಮತ್ತು ಅನುಭವ ಶ್ರೀಮಂತಿಕೆಗಳು ನಮ್ಮನ್ನು ನಡೆಸುತ್ತವೆ. ಆ ಮೂಲಕ ಭವಿಷ್ಯತ್ತನ್ನು ರೂಪಿಸುವ ಕನಸುಗಳನ್ನು ಮೂಡಿಸುತ್ತವೆ. ಆದರೆ ಕವಿ ಚಂದ್ರಶೇಖರ ಪಾಟೀಲರು ಹೇಳುವಂತೆ ಈ ಅನುಭವ ಪರಂಪರೆ ಆಶೀರ್ವಾದ ರೂಪದ ಮಾರ್ಗದರ್ಶಿಯಾಗಿರಬೇಕೆ ಹೊರತು, ಅದು ನಮ್ಮ ಬೆಳವಣಿಗೆಯನ್ನು ಕುಂಠಿತಗೊಳಿಸಬಾರದು, ನಮ್ಮ ಕಣ್ಣುಗಳನ್ನು ಮಂದಗೊಳಿಸಬಾರದು. ಇಲ್ಲಿ ನಾವು ಅರ್ಥಮಾಡಿಕೊಳ್ಳಬೇಕಾದುದು ಸತ್ತ್ವಭರಿತವಾದುದನ್ನು ಮಾತ್ರ. ಸ್ವೀಕರಿಸಬೇಕಾದುದು ಅನುಕರಣಯೋಗ್ಯ ಅನುಭವ, ಶ್ರೀಮಂತಿಕೆಯನ್ನು ಮಾತ್ರ.

ಮಾತುಗಳೆಲ್ಲವೂ ಬದುಕನ್ನು ಪೂರ್ಣವಾಗಿ ಅನುಭವಿಸಿ, ಮುಪ್ಪನ್ನು ತಬ್ಬಿ, ಸಾವಿನ ಮುಕ್ತತೆಯನ್ನು ಪಡೆಯುವವರಿಗೆ ಅನ್ವಯಿಸುತ್ತವೆ. ಆದರೆ ಬದುಕಿನ ನಡುವೆ, ಅಸ್ವಾಭಾವಿಕವಾಗಿ ಸತ್ತವರಿಗೆ ಈ ಮಾತುಗಳನ್ನು ಹೇಳಲಾಗುವುದಿಲ್ಲ.

ಅಪಘಾತದಲ್ಲಿ ಸತ್ತವರು, ನಾನಾ ಕಾರಣಗಳಿಂದ ಆತ್ಮಹತ್ಯೆಗೆ ಶರಣಾದವರು- ಇಂಥವರ ಮುಖಗಳನ್ನು ಅವಲೋಕಿಸಿದಾಗ ಸಾವಿನ ಸಂತೃಪ್ತತೆ ಕಾಣುವುದಿಲ್ಲ. ಭಯ, ಸಂಕಟ, ನೋವು, ಅಸಹಾಯಕತೆ, ಭೀಕರತೆ ಕಣ್ಣಿಗೆ ರಾಚುತ್ತವೆ. ಅದು ಬಲವಂತವಾಗಿ ದೇಹದಿಂದ ಜೀವವನ್ನು ಬೇರ್ಪಡಿಸುವ ಕ್ರಿಯೆಯಿಂದಾಗಿ ಉದ್ಭವಿಸಿದ ಭಾವಾಭಿವ್ಯಕ್ತಿ, ಇನ್ನೂ ದೇಹ- ಜೀವಗಳ ಬೆಸುಗೆ ಬಲವಾಗಿರುತ್ತದೆ. ದೇಹ ಜೀವದ ಮೂಲಕ ಲೌಕಿಕವನ್ನು ಅನುಭವಿಸಿ ಆನಂದಿಸುವ ಪ್ರಕ್ರಿಯೆಯಲ್ಲಿರುತ್ತದೆ. ಜೀವ ದೇಹದ ಮೂಲಕ ಮಾಗುವ ಹಂತದಲ್ಲಿ ಸಾಗುತ್ತಿರುತ್ತದೆ. ಈ ಸಂದರ್ಭದ ಅಸ್ವಾಭಾವಿಕ ಬೇರ್ಪಡಿಸುವಿಕೆ ದೇಹ- ಜೀವಗಳಿಗೆರಡಕ್ಕೂ ಆನಂದ ತರುವುದಿಲ್ಲ. ಅಪೂರ್ಣತೆಯ ಕಾರಣದಿಂದಾಗಿ ಅತೃಪ್ತಿ ಪ್ರಧಾನವಾಗಿ ಕಾಡಿ ನೋವು ಸಂಕಟಗಳು ಸಾಯುವ ಸಂದರ್ಭದಲ್ಲಿ ಮುಖದಲ್ಲಿ ಕಾಣಿಸಿಕೊಳ್ಳುತ್ತವೆ.

ಹೆಸರಾಂತ ನಾಟಕಕಾರರಾಗಿದ್ದ, ಕವಿಗಳೂ ಆಗಿದ್ದ ನನ್ನ ವಿದ್ಯಾಗುರುಗಳಾದ ಪ್ರೊ. ಎಚ್.ಎಂ. ಚನ್ನಯ್ಯನವರು 'ವ್ಯಕ್ತಿಗೆ ಜನನ-ಮರಣಗಳ ಅನುಭವವಾಗುತ್ತದೆ. ಆದರೆ ಆ ಅನುಭವವನ್ನು ಅವನು ಅಭಿವ್ಯಕ್ತಿಸಲು ಅಸಮರ್ಥನಾಗುತ್ತಾನೆ. ತಾಯಿ ಗರ್ಭದಿಂದ ವ್ಯಕ್ತಿ ಈ ಜಗತ್ತಿಗೆ ಬರುವಾಗ ಆಗುವ ಅನುಭವವನ್ನು ನೆನಪಿಟ್ಟುಕೊಳ್ಳಲಾರ. ಏಕೆಂದರೆ ಅವನು ಮಗು, ಇನ್ನೂ ಪ್ರಜ್ಞೆ ಬೆಳೆದಿರುವುದಿಲ್ಲ. ಪ್ರಜ್ಞೆ ಬೆಳೆಯುವಷ್ಟರಲ್ಲಿ ಅದು ಮರೆತುಹೋಗಿರುತ್ತದೆ. ಸಾಯುವ ವ್ಯಕ್ತಿಗೆ ಸಾಯುವ ಸಂದರ್ಭದಲ್ಲಿ ಸಾವಿನ ಅನುಭವ ನಿಶ್ಚಿತವಾಗಿ ಆಗೇ ಆಗುತ್ತದೆ. ಆದರೆ ಅವನು ಆ ಕ್ಷಣದಲ್ಲಿ ಸತ್ತುಹೋಗುವುದರಿಂದ ಅವನು ಅದನ್ನು ಅಭಿವ್ಯಕ್ತಿಸಲಾಗುವುದೇ ಇಲ್ಲ' ಎಂದು ಹೇಳುತ್ತಿದ್ದರು. ಈ ಮಾತುಗಳು ಸತ್ಯವೆಂದು ಒಪ್ಪಿತವಾಗಲೇಬೇಕು. ಈ ಎರಡೂ ಸಂದರ್ಭದಲ್ಲಿ ಬದುಕಿನ ಅತ್ಯಂತ ಅಮೂಲ್ಯ ಎರಡು ಅನುಭವ ಸತ್ಯಗಳ ಗ್ರಹಿಕೆ ಮತ್ತು ಸಂವೇದನೆಯಾಗುತ್ತದೆ. ಆದರೆ ಅದರ ಅಭಿವ್ಯಕ್ತಿ ಅಸಾಧ್ಯವಾಗಿ ಆ ಸತ್ಯ ನಿಗೂಢವಾಗಿಯೇ ಉಳಿದು ಹೋಗುತ್ತದೆ!

೨೮-೦೧-೨೦೧೦

# ಹೇ ಕನ್ನಡತಿ, ಯಾಕೆ ಹಿಂಗಾಡ್ತಿ?

ಕನ್ನಡ ಟಿವಿ ವಾಹಿನಿಯೊಂದು ಸಮೂಹ ಸಂವಾದ ಏರ್ಪಡಿಸಿತ್ತು. ಚರ್ಚೆಯ ವಿಷಯ: ಯುವ ಜನಾಂಗದ ಉಡುಪಿನ ಅಭಿರುಚಿಯನ್ನು ಕುರಿತಾದದ್ದು. ಬಹುಪಾಲು ಯುವಕರು ಹೆಣ್ಣುಮಕ್ಕಳ ಆಧುನಿಕ ಉಡುಪನ್ನು ತೀಕ್ಷ್ಣವಾಗಿ ವಿಮರ್ಶಿಸುತ್ತಿದ್ದರು. ಅವರು ಪ್ಯಾಂಟು ಷರ್ಟು ಸ್ಕರ್ಟುಗಳನ್ನು ಹಾಕುವುದರ ಬಗ್ಗೆ ಅಸಮ್ಮತಿ ಸೂಚಿಸುತ್ತಿದ್ದರು. ಮೈಮುಚ್ಚುವ ಸಲ್ವಾರ್‌ಗಳನ್ನು ಮತ್ತು ಸೀರೆಗಳನ್ನು ಉಡಬೇಕೆಂದು ವಾದಿಸುತ್ತಿದ್ದರು.

ಮತ್ತೊಂದು ವಾಹಿನಿಯಲ್ಲಿ ಚಿತ್ರಗೀತೆ ಬರುತ್ತಿತ್ತು. ಅದೊಂದು ಛೇಡಿಸುವ ಗೀತೆ, ನಾಯಕ ನಾಯಕಿಯ ಉಡುಗೆ ತೊಡುಗೆಗಳನ್ನು ಟೀಕಿಸಿ 'ಏನೇ ಕನ್ನಡತಿ, ಯಾಕೆ ಹಿಂಗಾಡ್ತಿ?' ಎಂದು ಛೇಡಿಸುತ್ತಿದ್ದ. ಅವಳು ಪ್ಯಾಂಟು ಸ್ಕರ್ಟು ತೊಟ್ಟಿದ್ದಳು.

ಈ ಎರಡೂ ಪ್ರಸಂಗಗಳಲ್ಲಿ ಹೆಣ್ಣುಮಕ್ಕಳು ಭಾರತೀಯ ಸಂಸ್ಕೃತಿಯನ್ನು ಮೀರುತ್ತಿದ್ದಾರೆಂಬುದೇ ಮುಖ್ಯ ಅಪಾದನೆಯಾಗಿದೆ. ಅವಳು ಸದಾ ಸಂಸ್ಕೃತಿ ರಕ್ಷಕಳಾಗಿರಬೇಕು. ಆಚಾರ ಸಂಪ್ರದಾಯಗಳನ್ನು ಪಾಲಿಸಿಕೊಂಡು ಬರಬೇಕೆಂಬುದೇ ಪುರುಷರ ಧೋರಣೆಯಾಗಿತ್ತು. ಆದರೆ ಈ ಎರಡೂ ಪ್ರಸಂಗದಲ್ಲೂ ಗಂಡಸು ಭಾರತೀಯತೆಯನ್ನು ಪ್ರತಿನಿಧಿಸುವಂಥ ಉಡುಪನ್ನೇನು ಧರಿಸಿರಲಿಲ್ಲ. ಯುವಕರು ಪ್ಯಾಂಟು ಷರ್ಟು ಜರ್ಕಿನ್‌ಗಳನ್ನು ಧರಿಸಿದ್ದರೆ, ನಾಯಕ ಅತ್ಯಾಧುನಿಕ ವಿದೇಶಿ ಶೈಲಿಯ ಧಿರಸನ್ನೇ ಧರಿಸಿ ಬೂಟು ಹಾಕಿದ್ದ. ಅಂದರೆ ಅದರರ್ಥ-ಭಾರತೀಯತೆಯೆಂಬುದು ಹೆಂಗಸರಲ್ಲಿರಬೇಕು. ಅದು ಗಂಡಸರಿಗೆ ಅನ್ವಯವಾಗುವುದಿಲ್ಲ. ಅವರು ಹೇಗಿದ್ದರೂ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಾರೆಂಬುದು. ಈ ಲಿಂಗ ತಾರತಮ್ಯಭಾವ ಪುರುಷನೆಂಬ ಅಹಂಕಾರ ಮೂಲದಿಂದ ಜನಿಸಿರುವಂಥದ್ದು. ತಾನು ಹೇಗಿದ್ದರೂ ಆಯಿತು. ಹೆಣ್ಣು ಮನೆಯನ್ನು ಸರಿಯಾಗಿ ನಿರ್ವಹಿಸಬೇಕು; ಸಂಪ್ರದಾಯ ಆಚಾರಗಳನ್ನು ಚಾಚೂತಪ್ಪದೆ ಆಚರಿಸಿ ಮುಂದುವರಿಸಿಕೊಂಡು ಹೋಗಬೇಕು; ಅದು ಅವಳ ಕರ್ತವ್ಯ; ಅದನ್ನು ಮೀರುವುದು ತಪ್ಪು; ಅವಳು ಪುರುಷ ಹಾಕಿದ ಲಕ್ಷ್ಮಣರೇಖೆಯ ಒಳಗೇ ಬದುಕು ಸಾಗಿಸಬೇಕು ಮತ್ತು ಆಧುಸಿಕ ಜೀವನ ಶೈಲಿ, ವಿಚಾರಧಾರೆಗಳಿಗೆ ಪಕ್ಕಾಗಬಾರದೆಂಬುದು ಇಂಥ ಮಾತುಗಳ ಹಿಂದೆ ಅಡಗಿರುವ ಸತ್ಯ.

ಉಡುಪಿನ ವಿಚಾರಕ್ಕೆ ಬಂದರೆ-ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ನಿಜವಾದ ವೇಷಭೂಷಣ ಯಾವುದು ಎಂಬ ಪ್ರಶ್ನೆಗೆ ಮೊದಲು ಉತ್ತರ ಕಂಡುಕೊಳ್ಳಬೇಕು. ಇಡೀ ಭಾರತಕ್ಕೆ ಏಕ ರೂಪವಾದ ಭಾಷೆ, ಆಹಾರ ಪದ್ಧತಿ ಹೇಗಿಲ್ಲವೋ ಹಾಗೆಯೇ ಏಕರೂಪ

ಉಡುಪಿಲ್ಲ. ಪಂಜಾಬಿಯ ಹಾಗೆ ಕೇರಳದವನಿಲ್ಲ; ಬಿಹಾರಿ ಇದ್ದ ಹಾಗೆ ಕಾಶ್ಮೀರಿ ಇಲ್ಲ, ರಾಜಸ್ಥಾನಿ ಇದ್ದ ಹಾಗೆ ತಮಿಳಿಗ ಇಲ್ಲ. ಭಾರತದ ಆತ್ಮ ಅಡಗಿರುವುದೇ ಅದರ ವೈವಿಧ್ಯತೆಯಲ್ಲಿ! ಏಕರೂಪತೆಯ ಏಕತಾನತೆ ಭಾರತೀಯತ್ವ ಅಲ್ಲ, ಸ್ತ್ರೀಯರು ಉಡುವ ಸೀರೆಯೂ ಕೂಡ ಅಖಂಡ ಭಾರತದ ಲಕ್ಷಣವಲ್ಲ. ಸೀರೆಯುಟ್ಟರೂ ಒಂದೊಂದು ಕಡೆ ಒಂದೊಂದು ಬಗೆಯಲ್ಲಿ ಉಡುತ್ತಾರೆ. ಅದು ಕಣ್ಣಿಗೆ ಕಾಣುವ ಸತ್ಯ. ಗಂಡಸರ ಸೊಂಟದ ಕೆಳಗಿನ ದಿರಿಸು ಕೂಡ ಪ್ರದೇಶದಿಂದ ಪ್ರದೇಶಕ್ಕೆ ಬೇರೆ ಬೇರೆ! ದಿರಿಸನ್ನು ಇಡೀ ದೇಶಕ್ಕೆ ಸಾಧಾರಣೀಕರಣಗೊಳಿಸಿ ಸಂಸ್ಕೃತಿಯೆಂಬ ಹೆಸರಿನಲ್ಲಿ ಮಾತನಾಡುವುದು ತಪ್ಪಾಗುತ್ತದೆ.

ಹಾಗೆ ನೋಡಿದರೆ ಭೂಮಿಯ ಮೇಲೆ ಮಾನವ ಉಡುಪನ್ನು ಅನುಕರಣೆಯಿಂದಲೇ ಧರಿಸುತ್ತಾ ಬಂದಿದ್ದಾನೆ. ಗ್ರಾಮ ಸಂಸ್ಕೃತಿ ನಗರ ಸಂಸ್ಕೃತಿಯನ್ನು ಅನುಕರಿಸಿದೆ. ಕೆಳಜಾತಿ/ ವರ್ಗಗಳು ಮೇಲುಜಾತಿ/ವರ್ಗಗಳನ್ನು ಅನುಸರಿಸಿವೆ. ಇದನ್ನೇ ಸಮಾಜಶಾಸ್ತ್ರಜ್ಞರು 'ಸಂಸ್ಕೃತೀಕರಣ' ಎಂದು ಗುರುತಿಸುತ್ತಾರೆ. ಅನುಕರಣೆ ಸಹಜಕ್ರಿಯೆ ಹಾಗೂ ಅದು ಒಂದು ಪ್ರಾದೇಶಿಕ ಹವಾಮಾನಕ್ಕನುಗುಣವಾಗಿ, ಲಭ್ಯ ಸಂಪನ್ಮೂಲಗಳಿಗನುಗುಣವಾಗಿ ವರ್ತಿಸುತ್ತದೆ. ಅನುಕರಣೆ ಮಾಡುವವರು ಇದ್ದುದನ್ನು ಇದ್ದರೀತಿಯಲ್ಲಿಯೇ ಸ್ವೀಕರಿಸುವುದಿಲ್ಲ. ಅನ್ಯ ಸಾಂಸ್ಕೃತಿಕಾಂಶಗಳನ್ನು ತಮ್ಮ ಸಂದರ್ಭ ಮತ್ತು ಅಭಿರುಚಿಗಳಿಗನುಸಾರವಾಗಿ ಮಾರ್ಪಡಿಸುತ್ತಾರೆ. ಅದಕ್ಕೆ ದೇಸೀ ಸ್ಪರ್ಶ ನೀಡುತ್ತಾರೆ. ಅದನ್ನು ಹೊಸತಾಗಿ ಕಟ್ಟುವ ಪ್ರಯತ್ನದಲ್ಲಿ ತೊಡಗುತ್ತಾರೆ. ಇದೊಂದು ಅನ್ಯತೆಯನ್ನು ತಮ್ಮದನ್ನಾಗಿಸಿಕೊಳ್ಳುವ ಕ್ರಿಯೆ. ನಿದರ್ಶನವೊಂದನ್ನು ನೋಡಬಹುದು: ಸೀರೆ ಮತ್ತು ಪಂಚೆ ಮೂಲತಃ ಭಾರತದೇಶದಲ್ಲಿ ಸಂಭವಿಸಿದ ವಿನ್ಯಾಸಗಳಲ್ಲವೆಂದೂ, ಅವು ರೋಮನ್ನರ ಸಂಸ್ಕೃತಿಯ ಕೊಡುಗೆಗಳೆಂದೂ ಕೆಲವರು ವಾದಿಸುತ್ತಾರೆ. ಈ ವಾದದಲ್ಲಿ ಸತ್ಯವಿರುವಂತೆ ತೋರುತ್ತದೆ. ಆದರೆ ರೋಮನ್ನರ ಈ ಉಡುಪನ್ನು ನಮ್ಮವರು 'ಭಾರತೀಕರಣ' ಮಾಡಿಕೊಂಡಿದ್ದಾರೆ.

ಉಡುಪು ಆಡಿಕೊಳ್ಳುವ ಸಂಗತಿಯಾಗಬಾರದು. ಅದು ನಮ್ಮ ದೇಹ ರಕ್ಷಣೆಯ ಸಾಧನ. ಈ ಸಾಧನವನ್ನು ತಂತಮ್ಮ ಅಭಿರುಚಿಗೆ ತಕ್ಕಂತೆ ಕಲಾತ್ಮಕಗೊಳಿಸಿಕೊಂಡು ಜನರು ಧರಿಸುತ್ತಾರೆ. ಅದು ಅಶ್ಲೀಲವೆನ್ನಿಸಿದರೆ ತಪ್ಪು. ಸಭ್ಯ ಗೆರೆಯನ್ನು ಅದು ಮೀರಬಾರದು. ಹಾಗೆ ನೋಡಿದರೆ ಪ್ಯಾಂಟು ಶರ್ಟುಗಳು, ಸಲ್ವಾರ್ ಕಮೀಜ್‌ಗಳು ಹೆಚ್ಚು ಅನುಕೂಲಕರವಾಗಿವೆ ಮತ್ತು ಸಭ್ಯತೆಯನ್ನು ಮೆರೆಯುತ್ತಿವೆ.

೧೧-೦೨-೨೦೧೦

# ಸಮಾನ ಹೃದಯ

ಸಹೃದಯತೆಯೆಂಬುದು ಮಾನವನ ಒಳಗನ್ನು ಕುರಿತು ಮಾತನಾಡುವಂಥದ್ದು. ಮನುಷ್ಯ ಸಾಮಾನ್ಯವಾಗಿ ಅಂತರ್ಮುಖಿಯಾದಾಗ ಅವನೊಳಗಿರುವ ಅಂತಃಸಾಕ್ಷಿ ಜಾಗೃತವಾಗುತ್ತದೆ. ಈ ಅಂತಃಸಾಕ್ಷಿಯು ಸದಾ ಸತ್ಯದ ಪರವೂ ಮಾನವತೆಯ ಪರವೂ ಆಗಿರುತ್ತದೆ. ಈ ಅಂತಃ ಸಾಕ್ಷಿಗೆ ವರ್ಗ ತಾರತಮ್ಯವಾಗಲೀ ಲಿಂಗ ತಾರತಮ್ಯವಾಗಲೀ ಇರುವುದಿಲ್ಲ. ಆದುದರಿಂದಲೇ ಇದು ಸದಾ ಅಂತಃಕರಣದಿಂದ ಕೂಡಿರುತ್ತದೆ. ಸಮಾನ ದುಃಖವನ್ನು, ಸಮಾನ ನಗುವನ್ನು ಸಂವೇದಿಸುವ, ಸಂವೇದಿಸುವ ನಡೆಯಲ್ಲಿಯೇ ಅದನ್ನೇ ಮಿಡಿಯುವ ಮನೋನೆಲೆಯನ್ನು ಪಡೆಯುತ್ತದೆ. ಈ ಮನೋನೆಲೆಯನ್ನೇ ನಾವು ಸಹೃದಯತೆಯೆಂದು ಕರೆವುದು. ಅಂದರೆ ಸಮಾನ ಸಂವೇದನೆ, ಸಮಾನ ಮಿಡಿತ; ಎದೆಗೆ ಎದೆ ತುಡಿವ ಕ್ಷಣ; ಸಮಾನಾಂತರ ಭಾವ ವಿಭಾವಗಳೊಡನೆ ಬೆರೆವ ಸ್ಥಿತಿ ಅಷ್ಟೇ ಅಲ್ಲ- ಅದು ಸಮಾನ ಭಾವಾಂತರಂಗದಲ್ಲಿ ಮನೋಸ್ಥಿತಿಯಲ್ಲಿ ಮುಳುಗೇಳುವ ಮತ್ತು ಅದರ ಮತ್ತೊಂದು ಸಮಾನ ರೂಪವಾಗುವ ಕ್ರಿಯೆ.

ಸಹೃದಯತೆ ಎಂಬ ಸ್ಥಿತಿ ಸಮಾನವಾದ ಅಭಿರುಚಿಯನ್ನು ವ್ಯಕ್ತಪಡಿಸುತ್ತದೆ. ವ್ಯಕ್ತಿಯೊಬ್ಬನ ಅಭಿರುಚಿಯು ಅವನ ವ್ಯಕ್ತಿತ್ವವನ್ನು ಕಟ್ಟಿಕೊಡುತ್ತದೆ. ಅವನ ಆಸಕ್ತಿಗಳು- ಅವನ ನಿರೀಕ್ಷೆಗಳು ಮತ್ತು ಬೆಳವಣಿಗೆಯ ನಡೆಗಳು ಅವನ ಅಭಿರುಚಿಯಿಂದ ನಿರ್ಧರಿತವಾಗುತ್ತವೆ. ಅಭಿರುಚಿಯೆಂಬ ಗುಣ ವ್ಯಕ್ತಿಗೆ ಹುಟ್ಟಿನಿಂದ ಬರುವಂಥದ್ದಲ್ಲ. ಅದು ಕಲಿಕೆಯಿಂದ ಬರುವಂಥದ್ದು. ನಮ್ಮ ಬಾಲ್ಯ ಆವರಣ ನಮ್ಮನ್ನು ಈ ನಿಟ್ಟಿನಲ್ಲಿ ಕಟ್ಟುತ್ತಾ ಹೋಗುತ್ತದೆ. ಇದೊಂದು ಬಗೆಯ ಸಂಸ್ಕೃತೀಕರಣಗೊಳಿಸುವ ಕ್ರಿಯೆ. ಇದರಲ್ಲಿ ನಮ್ಮ ತಂದೆ-ತಾಯಿ, ಗೆಳೆಯರು, ಶಾಲೆ-ಗುರುಗಳು ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತಾರೆ. ಈ ಅರ್ಥದಲ್ಲೇ ನಮ್ಮ ಜನಪದರು 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ?' ಎಂಬ ಗಾದೆಯನ್ನು ಸೃಷ್ಟಿಸಿರುವುದು! ಈ ಹಂತದಲ್ಲಿ ರೂಢಿಸಿಕೊಂಡ ಅಭಿರುಚಿ ನಮ್ಮ ಜೀವನಪರ್ಯಂತ ನಮ್ಮನ್ನು ಸುಸಂಸ್ಕೃತರನ್ನಾಗಿಸುತ್ತದೆ. ಸಹೃದಯಿಗಳನ್ನಾಗಿಸುತ್ತದೆ.

ಸಹೃದಯತೆಯುಳ್ಳವನು ಅಭಿರುಚಿಯುಳ್ಳವನಾಗಿರುವುದರಿಂದ ಗುಣಗ್ರಾಹಿಯಾಗಿರುತ್ತಾನೆ. ಇತರರಲ್ಲಿರುವ ಗುಣವನ್ನು ಮೆಚ್ಚುವ, ಗುರುತಿಸುವ ಕ್ರಮ ಉತ್ತಮವಾದುದು. ಏಕೆಂದರೆ ಇತರರಲ್ಲಿರುವ ಗುಣಾತ್ಮಕ ಅಂಶಗಳನ್ನು ಕಂಡು ಅಸೂಯೆಪಡುವ ಮನಃಸ್ಥಿತಿಯು ಮಾನವತೆಯಿಂದ ದೂರ ನಿಲ್ಲುವಂಥದ್ದು. ಅದು ವ್ಯಕ್ತಿತ್ವವನ್ನು ಇಡಿಯಾಗಿ ಗ್ರಹಿಸುವ ಬದಲು ಒಡೆದು ನೋಡಲು ಯತ್ನಿಸುತ್ತದೆ. ಸದಾ ವ್ಯಕ್ತಿತ್ವದಲ್ಲಿ ಹುಳುಕನ್ನೇ ಹುಡುಕುವ ಕ್ರಿಯೆಯಲ್ಲಿ

ಮಗ್ನವಾಗುತ್ತದೆ. ಇದರಿಂದ ಅದರ ಮನಸ್ಸು ಅಸ್ಪಸ್ಟಗೊಳ್ಳುತ್ತದೆ; ನೆಮ್ಮದಿ ಕಳೆದುಕೊಳ್ಳುತ್ತದೆ. ಅನಾರೋಗ್ಯ ಪೀಡಿತವಾಗುತ್ತದೆ. ಈ ಅನಾರೋಗ್ಯ ಮನಃಸ್ಥಿತಿ ಒಂದು ಬಗೆಯ ಸೋಂಕಿನ ರೀತಿಯಲ್ಲಿ ತನ್ನ ಸುತ್ತಲ ಆವರಣವನ್ನು ಆವರಿಸಿ ರೋಗವನ್ನು ಹರಡುತ್ತಾ ಸಾಗುತ್ತದೆ. ಇಂದು ಇಂಥ ಮನಸ್ಥಿತಿಯು ರಕ್ತಬೀಜಾಸುರ ಸಂತತಿಯ ರೀತಿಯಲ್ಲಿ ಕೆಲಸದಲ್ಲಿ ತೊಡಗಿರುವುದರಿಂದಲೇ ನಮ್ಮ ಸಮಾಜದಲ್ಲಿ ಉಗ್ರವಾದ, ಭಯೋತ್ಪಾದನೆಗಳು ಸೃಷ್ಟಿಯಾಗಿ ಅಶಾಂತಿ ಮೂಡುತ್ತಿದೆ. ವ್ಯಕ್ತಿತ್ವಗಳು ವಿಶಾಲಗೊಳ್ಳುವುದರ ಬದಲು ಕುಬ್ಜಗೊಂಡು ಜನ ವಿಮುಖ ಜೀವ ವಿಮುಖ ಸಮಾಜ ವಿಮುಖ ಸ್ಥಿತಿಯನ್ನು ತಲುಪುತ್ತಿವೆ. ಇಂಥ ವ್ಯಕ್ತಿತ್ವಗಳು ಸ್ವಾರ್ಥಿಗಳಾಗಿ ತಮ್ಮ ಸುತ್ತ ನಾನಾ ಬಗೆಯ ಗೋಡೆಗಳನ್ನು ಕಟ್ಟಿಕೊಳ್ಳುತ್ತವೆ.

ಸಹೃದಯತೆಯೆಂದರೆ ಸಮಾನವಾದ ಹೃದಯ ಮಿಡಿತವೆಂದು ಅರಿಯಬೇಕು. ಅಲ್ಲಿ ಪರಸ್ಪರ ಪ್ರೀತಿ ಮಾತ್ರ ಇರುತ್ತದೆ. ಪ್ರೀತಿಗೆ ಕೊಡುವ ಗುಣ ಮಾತ್ರವಿರುತ್ತದೆ. ಅದು ಆಕ್ರಮಣಶೀಲವಲ್ಲ. ನೀಡುವುದರಲ್ಲಿ ಆನಂದ ಕಾಣುವ ಮನೋ ನೆಲೆಯನ್ನು ಮುಟ್ಟುವ ಪರಿಕ್ರಮ. ಅಂದಮೇಲೆ ದ್ವೇಷ, ಸ್ವಾರ್ಥ ಹೇಗೆ ಬರಲು ಸಾಧ್ಯ? ಇಂಥ ನಿಷ್ಕಲ್ಮಶ ಮನಸ್ಥಿತಿಯನ್ನು ನಮ್ಮ ದಾರ್ಶನಿಕರು ಅತ್ಯಂತ ಗೌರವದಿಂದ ಕಂಡು 'ಕವಿ ಸಮಾನ ಹೃದಯ' ಎಂದು ಕರೆದರು.

೨೫-೦೨-೨೦೧೦

# ಸಂಗೀತ ಮತ್ತು ಸುರತಾನಂದ

ಸಂಗೀತಕ್ಕೆ ಮನ ಸೋಲದವರಿಲ್ಲ. ಅಂಥವರಿಲ್ಲವೆಂದು ವಾದ ಮಾಡಲಾಗದೆ ಇರಬಹುದು. ಅವರು ಕಿವುಡರಾಗಿರಬೇಕು ಅಥವಾ ಮಹಾನ್ ಅರಸಿಕರಾಗಿರಬೇಕು. ಸಸ್ಯಗಳೂ ಪ್ರಾಣಿಗಳೂ ಸಂಗೀತಕ್ಕೆ ಸ್ಪಂದಿಸುತ್ತವೆ ಎಂದೂ ಹೇಳಲಾಗುತ್ತಿದೆ. ಸಸ್ಯಗಳ ಬಗ್ಗೆ ಕರಾರುವಾಕ್ಕಾಗಿ ಹೇಳಲು ಸಾಧ್ಯವಾಗದೆ ಇದ್ದರೂ, ದನ, ಕರು, ನಾಯಿಗಳಂಥ ಪ್ರಾಣಿಗಳೂ ಸಂಗೀತಕ್ಕೆ ಮಾರು ಹೋಗಿ ಪ್ರತಿಕ್ರಿಯೆ ವ್ಯಕ್ತಪಡಿಸುವುದನ್ನು ಕಂಡವರು ಇದ್ದಾರೆ. ಅಂದಮೇಲೆ ಸಂಗೀತದ ಮೋಡಿಗೆ ಒಳಗಾಗದ ಮನುಷ್ಯ ಅಪರೂಪವೇ ಸರಿ.

ಬಹುಶಃ ಆದಿಮಾನವ ಮಾತು ಕಲಿಯುವ ಮುನ್ನವೇ ಸಂಗೀತ ಕಲಿತಿದ್ದನೆಂದು ತೋರುತ್ತದೆ. ಪ್ರಕೃತಿಯು ಉಂಟು ಮಾಡುವ ವಿವಿಧ, ವಿಭಿನ್ನ ಸದ್ದುಗಳನ್ನು ರಾಗಗಳನ್ನು ತನ್ನ ದನಿಯ ಮೂಲಕ ಅನುಕರಣೆ ಮಾಡುವುದನ್ನು ಪ್ರಾರಂಭಿಸಿರಬೇಕು. ಗಾಳಿ ಬೀಸುವಾಗ ಉಂಟಾಗುವ ಶೃತಿ ಲಯಗಳ ಏರಿಳಿತಗಳು ಅವನನ್ನು ಬೆರಗುಗೊಳಿಸಿ, ಅವುಗಳ ಮೋಡಿಗೆ ಮನಸೋತು ಅನುಕರಣೆ ಮಾಡುವುದನ್ನು ಅಭ್ಯಾಸ ಮಾಡಿರಬೇಕು. ಮಾನವನ ಸಂಗೀತ ಪ್ರೀತಿಗೆ ಪ್ರಕೃತಿಯೇ ಮೊದಲ ಗುರು; ಅದೇ ಕೈ ಹಿಡಿದು ನಡೆಸಿದ ಮೊದಲ ತಾಯಿ.

ಸಂಗೀತ ವ್ಯಕ್ತಿಯ ಹೃದಯವನ್ನು ಮೃದುಗೊಳಿಸುತ್ತದೆ; ಅವನ ಭಾವಕೋಶವನ್ನು ಉದ್ದೀಪಿಸಿ ಹೆಚ್ಚೆಚ್ಚು ಮಾನವೀಯಗೊಳಿಸುತ್ತದೆ. ಇದರ ಮುಂದುವರಿದ ಭಾಗಗಳೆಂಬಂತೆ ಸಾಹಿತ್ಯ, ಚಿತ್ರಕಲೆ, ಶಿಲ್ಪಕಲೆ ಮುಂತಾದ ಕಲಾ ಪ್ರಕಾರಗಳು ಇದೇ ಬಗೆಯ ಹೃದಯ ಸಂಚಲನವನ್ನು ಮಾಡುತ್ತವೆ. ಸಂಗೀತ ಭಾವಪ್ರಪಂಚಕ್ಕೆ ಸೇರಿದ ಅಂಶವಾಗಿರುವುದರಿಂದ ಅನೇಕ ವೇಳೆ ಅದು ಸಂಪ್ರದಾಯದಂಥ ಕಟ್ಟಳೆಗಳನ್ನು, ಬಂಧನಗಳನ್ನು ಮೀರುತ್ತದೆ; ಹೊಸ ಸಾಧ್ಯತೆಗಳತ್ತ ಚಲಿಸತೊಡಗುತ್ತದೆ. (ಆದರೆ, ಕಾಲ ಕಳೆದಂತೆಲ್ಲಾ ಸಂಗೀತ ಸಂಪ್ರದಾಯವಾದಿಗಳ ಹಿಡಿತಕ್ಕೆ ಸಿಲುಕಿ ಶಾಸ್ತ್ರೀಯವಾಗಿಬಿಡುವ ಮತ್ತು ಉಸಿರುಗಟ್ಟಿಸಿಕೊಂಡು ನರಳಾಟಕೆಯಾಗುವ ಸ್ಥಿತಿಗೆ ಬಂದುಬಿಡುವುದು ದುರಂತವೇ ಸರಿ.) ಜತೆಗೆ ಭಾವಜಗತ್ತಿನ ಈ ಸಂಗೀತದ ಭಾವ ವಿಭಾವ ವ್ಯಭಿಚಾರಿ ಭಾವಗಳು ತಮ್ಮ ಸಂಘರ್ಷದ ಕಾರಣದಿಂದಾಗಿಯೇ ಅನೇಕ ಸೃಷ್ಟಿಗಳಿಗೆ ಕಾರಣವಾಗುತ್ತವೆ. ವಿಚಾರ, ವಿವೇಚನೆಗಳಾಚೆ ಎದೆಯ ದನಿಯೇ ಪ್ರಧಾನವಾಗಿರುವುದರಿಂದ ಹೃದಯ ಸಂಸ್ಕಾರ ವಿಕಾಸಗೊಳ್ಳುತ್ತದೆ.

ಸಂಗೀತವು ಸಾಹಿತ್ಯದ ಪೂರಕ ಶಕ್ತಿಯಾಗಿ, ಸಹವರ್ತಿಯಾಗಿ ಕೆಲಸ ಮಾಡಲಾರಂಭಿಸಿದ್ದು ಬಹುಶಃ ನಾಗರಿಕತೆ ಬೆಳೆದ ನಂತರವೇ ಇರಬೇಕು. ಸಂಗೀತ ಕೇವಲ ರಾಗಾಲಾಪನೆಯ ಸಾಧನ

ಮಾತ್ರವಲ್ಲ, ಅದರ ಉದ್ದೇಶ ವ್ಯಾಪಕವಾಗಿದೆಯೆಂದು ತಿಳಿದಿರುವುದರಿಂದ ಈ ರೀತಿಯಾಗಿದೆ. ಆದರೆ ಸಂಗೀತ ರಾಗಪ್ರಧಾನವೂ ನಾದಪ್ರಧಾನವೂ ಆದ್ದರಿಂದ ಅದನ್ನು ಓಂಕಾರ ನಾದಕ್ಕೆ ಸಮವಾಗಿ ಕಾಣಲಾಗಿದೆ. ಅದು ವ್ಯಕ್ತಿಯ ನಾಭೀಮೂಲದಿಂದ ಉದ್ಭವಗೊಂಡು ಗಂಟಲಲ್ಲಿ ವಿವಿಧ ಮಜಲಿನ ಏರಿಳಿತ ನಾದದಲ್ಲಿ ವಿಹರಿಸಿ ಬಾಯಿ ಮೂಲಕ ಹೊರಹೊಮ್ಮುತ್ತದೆ. ಈ ಅಭಿವ್ಯಕ್ತಿಯಲ್ಲಿ ಹಲ್ಲು, ನಾಲಿಗೆ, ತುಟಿ, ಕವಟೆಗಳು ಸಹಕರಿಸುತ್ತವೆ.

ಹಿಂದೂಸ್ಥಾನೀ ಸಂಗೀತದಲ್ಲಿ ಮುಳುಗೇಳುವ ಸಹೃದಯರು ಮತ್ತು ಗಾಯಕರು ನಾಭೀ ಮೂಲದಿಂದ ಹೊರಹೊಮ್ಮಿ ವಿವಿಧ ಸ್ತರಗಳಲ್ಲಿ, ಏರಿಳಿತಗಳಲ್ಲಿ ಆಲಾಪನೆ ಮಾಡುವುದನ್ನೂ, ಅದನ್ನು ಅನುಭವಿಸುವುದನ್ನು ಆ ಅನುಭಾವದ ಸಂಧಿ ಕ್ಷಣದಲ್ಲಿ ಉಂಟಾಗುವ ಆನಂದವನ್ನು ಸುರತಾನಂದಕ್ಕೆ ಸಮವೆಂದು ಕರೆಯುತ್ತಾರೆ. ಸ್ತ್ರೀ ಪುರುಷ ಸಂಭೋಗ ಸಮಯದಲ್ಲಿ ಕೇವಲ ಆನಂದವಿರುತ್ತದೆ. ಆ ಆನಂದ 'ಮೈಮನಗಳ' ಅಂತರವನ್ನು ಸಂಪೂರ್ಣವಾಗಿಸಿ ಏಕವಾಗಿಸುವ ಎರಡು ವಿಭಿನ್ನ ಲಿಂಗಗಳನ್ನು ಸಮಲಿಂಗಗೊಳಿಸುವ ಶಕ್ತಿಯನ್ನು ಪಡೆಯುತ್ತದೆ. ಸಂಗೀತಕ್ಕೆ ಈ ಗುಣವಿರುತ್ತದೆ ಎಂದು ಆ ಕ್ಷೇತ್ರದ ಅನುಭವಸ್ಥರು ಹೇಳುತ್ತಾರೆ. ಗಾಯಕ ಮತ್ತು ಕೇಳುಗರ ನಡುವಿನ ದೈಹಿಕ ಅಂತರವನ್ನು ಇಲ್ಲವಾಗಿಸಿ, ಸಂಗೀತ ಹೊರಹೊಮ್ಮುವ ಒಂದು ನೆಲೆ, ಸಂಗೀತವನ್ನು ಆಸ್ವಾದಿಸುವ ಮತ್ತೊಂದು ದೈಹಿಕ ನೆಲೆ- ಎರಡೂ ಒಂದು ನೆಲೆಯಲ್ಲಿ ಮಿಲನಗೊಂಡು ಆನಂದರೂಪ ತಾಳುತ್ತದೆ. ಆಗ ಗಾಯಕ ಬೇರೆ ಅಲ್ಲ, ಕೇಳುಗ ಬೇರೆಯಲ್ಲ. ಇಲ್ಲಿ ಯಾರು ಹೆಣ್ಣು ಯಾರು ಗಂಡು ಎಂದು ವಿಭಜಿಸಿ ನೋಡುವ ಆವಶ್ಯಕತೆಯಿಲ್ಲ. ಸುರತಾನಂದದಲ್ಲಿ ಇದೇ ನೆಲೆ ಪ್ರಾಪ್ತವಾಗುತ್ತದೆ; ಲಿಂಗ ವೈದೃಶ್ಯ ಅಳಿಯುತ್ತದೆ. ಇಂಥ ಅನುಭವ ಸ್ಥಿತಿಯಲ್ಲಿ ಲಿಂಗ, ಕಾಲ, ಕೃತಕ ವರ್ಣವರ್ಗಗಳ ಅಂತರ ನಾಶವಾಗಿ 'ಸಮಾನತೆ' ಸೃಷ್ಟಿಯಾಗುತ್ತದೆ.

ಈ ಆನಂದದ ತುದಿಯನ್ನು ಎಲ್ಲರಿಂದ ಮುಟ್ಟಲು ಸಾಧ್ಯವಿಲ್ಲ. ಅದಕ್ಕೆ ಸಾಧನೆ ಬೇಕು; ಮನೋಸ್ಥಿತಿ ಎತ್ತರಕ್ಕೇರಬೇಕು! ಅಥವಾ ಇದೊಂದು ಭ್ರಾಮಕ ಸ್ಥಿತಿಯೋ?

೨೫-೦೩-೨೦೧೦

# ಸಲ್ಲ, ಪೋಗದಿರು ಬೇಸಿಗೆಯಲಿ - ಬೇಡುವಳಬಲೆ!

ಬಂತು ಗ್ರೀಷ್ಮ!

ಮನುಷ್ಯ ಬಿಸಿಯುಸಿರು ಬಿಡುತ್ತಾನೆ; ಪ್ರಾಣಿ ಪಕ್ಷಿಗಳು ಬಿಸಿಲಬೇಗೆ ತಾಳಲಾರದೆ ತಂಪನ್ನರಿಸಿ ಸುತ್ತುತ್ತವೆ; ಮರಗಿಡಗಳಂತೂ ಬೇಗೆ ತಾಳಲಾರದೆ ನರಳಿ, ಒಣಗಿ ಎಲೆಯುದುರಿಸಿ ಅಳುತ್ತವೆ; ಅವು ಹಲವು ವೇಳೆ ಜೀವವನ್ನೇ ತ್ಯಾಗ ಮಾಡಬೇಕೆಂಬ ತಾಳಲಾರದ ಸ್ಥಿತಿಯಿಂದ ಬರಲು ಬರಲಾಗಿ ಒಣಗಿ ನಿಂತು ಅಗ್ನಿ ಬಂದು ಸುಟ್ಟು ಬೇಗೆ ಸಂಕಟಕ್ಕೆ ಮುಕ್ತಿ ನೀಡಬಾರದೆ? ಎಂದು ಹಂಬಲಿಸುತ್ತವೆ.

ಆಕಾಶವೂ ಅಷ್ಟೆ. ಪ್ರಖರ ಸೂರ್ಯನ ಕಿರಣ ತೀಕ್ಷ್ಣತೆಗೆ ತನ್ನ ನೀಲಮೈಯನ್ನು ಮಂಕಾಗಿಸಿಕೊಂಡುಬಿಡುತ್ತದೆ. ತೆಳು ಬಿಸಿಲಬಿಳುಪು ನೀಲಮೆಗೆ ತೆಳು ಪರದೆ ಕಟ್ಟಿರುವಂತೆ ದಿಗಿಲು ಹುಟ್ಟಿಸುತ್ತದೆ. ಆಕಾಶದಲ್ಲಿ ನೂರಾರು ಲಕ್ಷ ವರ್ಷಗಳ ಸೇಡನ್ನು ತೀರಿಸಿಕೊಳ್ಳುವ ಭರದಲ್ಲಿ ಸೂರ್ಯ ಭೂಮಿಯನ್ನು ಸುಡುತ್ತಿದ್ದಾನೆ. ಜೀವಿ ಜೀವ ಸಂಕುಲಕ್ಕೆ ಕುಡಿವ ನೀರಿಲ್ಲದ ಹಾಗೆ ಮಾಡೇ ಮಾಡುತ್ತೇನೆಂಬ ಹಠಕ್ಕೆ ಬಿದ್ದವನಂತೆ ನೆಲದ ಜೀವಜಲವ ಅನಿಲಗೊಳಿಸಿ ಎಳೆ ಎಳೆದು ಸೇದುತ್ತಿದ್ದಾನೆ. ಅಯ್ಯೋ, ಇದು ಎಂಥ ಸುಡುಬೇಸಿಗೆ!

ಆದರಿದು ಬರಗಾಲವಲ್ಲ; ಬಿರು ಬೇಸಿಗೆ! ಕೆರೆ ಕಟ್ಟೆಗಳು ಸುಂಡಿಹೋಗಿವೆ; ನೀರನ್ನರಿಸಿ ಪಕ್ಷಿಗಳು ವಲಸೆ ಹೋಗುತ್ತಿವೆ. ನದಿಗಳು ಬತ್ತಿಹೋಗಿವೆ; ಕಪ್ಪೆಗಳು ತಂಪನ್ನರಿಸಿ ಬಿಲಸೇರಿವೆ; ಮೀನುಗಳು ಕೆಸರು ಹೊಂಡದಲ್ಲಿ ಏದುಸಿರುಬಿಡುತ್ತಿವೆ; ಹಲವು ಕೆಸರಲ್ಲಿ ಕೆಸರ ಜೊತೆ ಜೊತೆಯಲ್ಲೇ ಒಣಗಿ ತರಗಾಗಿವೆ. ಪ್ರಾಣಿಗಳು ನೀರಿಗಾಗಿ ಹಂಬಲಿಸಿ ಹುಡುಕಾಡಿ ಅಲೆದಲೆದು 'ಶಿವ ಶಿವ' ಎಂದಿವೆ. ಜನಪದ ಕವಿ ಹೇಳುತ್ತಾನೆ: 'ನೀರಿಲ್ದ ಕೆರೆಗೆ ಕರಬಂದು, ಹೋಗಾಗ, ನೋಡದರ ದುಃಖಿಗಳಾ!'

ರಾತ್ರಿಯ ಕಷ್ಟವಂತೂ ಹೇಳತೀರದು. ಉಸ್ಸೆಂದೋ ಸುಸ್ತೆಂದೋ ಹಗಲು ಹೇಗೋ ಕಳೆದು ಹೋಗುತ್ತದೆ. ಆದರೆ ಸಂಜೆಯಾಯಿತೆಂದರೆ ಸಹಿಸಲಾಗದ ದಗೆ! ಗಂಡಸರು ಅತಿ ಕಡಿಮೆ ಬಟ್ಟೆ ಧರಿಸಿ ಗಾಳಿ ಪಾಳಿ ಹಾಕಿಕೊಂಡು ಸೆಕೆಯ 'ಸುಖ' ಅನುಭವಿಸುತ್ತಾರೆ. ಆದರೆ ಹೆಂಗಸರ ಪಾಡಂತೂ ಅನುಭವಿಸಿಯೇ ತೀರಬೇಕು. ಇದು ಪವಿತ್ರ ಪುಣ್ಯಭೂಮಿ; ಮಡಿ ಮೈಲಿಗೆ ಇರುವ ದೇಶ; ತಗ್ಗಿ ಬಗ್ಗಿ ನಡೆಯಬೇಕು; ಮೈತುಂಬಾ ಬಟ್ಟೆ ಹಾಕಬೇಕು. ಹಾಗೆ ಹಾಕುವುದರಿಂದ ಈ ದೇಶದ ಸಂಸ್ಕೃತಿ ಬಾಳುತ್ತದೆ; ಹೆಂಗಸರೆ ಅದನ್ನು ಮುಂದುವರಿಸಿಕೊಂಡು ಹೋಗಬೇಕು- ಎಂದೆಲ್ಲಾ ನಂಬಿರುವ ನಮ್ಮ ವ್ಯವಸ್ಥೆ ಸೆಕೆಗಾಗಿ ಅರೆನಗ್ನವಾಗುವುದನ್ನು ಒಪ್ಪುವುದಿಲ್ಲ. ಹೀಗಾಗಿ ಹೆಂಗಸರು ರಾತ್ರಿಯೆಲ್ಲಾ ಪಡುವ ಸೆಕೆ ಕಷ್ಟವನ್ನು ನೋಡಲಾಗುವುದಿಲ್ಲ. 'ಎಷ್ಟೊತ್ತಿಗೆ

ಬೆಳಗಾದೀತಪ್ಪ' ಎಂದು ಅವರು ಕಾಯುವಂತಾಗುತ್ತದೆ.

ನಮ್ಮ ಕನ್ನಡ ಕವಿಗಳು ಋತು ವರ್ಣನೆಯನ್ನು ಮಾಡುವಾಗ ಗ್ರೀಷ್ಮವನ್ನು ಮರೆತಿಲ್ಲ. ಆದರೆ ಹಿಂದಿಯ ಕವಿಯೊಬ್ಬ ಮಾಡುವ ಗ್ರೀಷ್ಮದ ವರ್ಣನೆ ಗಮನ ಸೆಳೆಯುತ್ತದೆ :

**ದೀರ್ಘದಿನ, ನಿಶಿಹೀನ, ಕ್ಷೀಣ ಜಲಧರ ವೈಶ್ವಾನರ,**
**ಮುದಿತ ಚಕ್ರವಾಕ ಚಿತ್ರ, ಉದಿತರವಿ, ಬಳಲಿಹನು ಹಾದಿಯ ನರ,**
**ಬೀಸುತಿಹುದು ಬೆಂಕಿ ಗಾಳಿ, ತಪಿಸುತಿಹುದು ತನುಮನವನು.**
**ಒಣಗಿಹುದು ಕೆರೆ ಕಟ್ಟೆ, ಕೆಸರ ಬಸಿರಲಿ ಒದ್ದಾಡುತಿಹುದು ಮೀನು,**
**ಕಾಂಬುದು ದಿಗಂಬರನೋಲು ಬೋಳು ಮರವು, ಉದುರಿಹುದು ತರುಲತೆಗಳೆಲೆ,**
**ದುಃಖಿಗಳು ಸಂಪನ್ನ ವಿಪನ್ನರೆಲ್ಲರು; ನಲ್ಲ, ಪೋಗದಿರು ಬೇಸಿಗೆಯಲಿ-ಬೇಡುವಳಬಲೆ.**

ಕಡು ಬೇಸಿಗೆಯ ಮಲೆಸೀಮೆಯ ಕಾಡುಗಳನ್ನು ನೋಡಬೇಕು. ಎತ್ತರೆತ್ತರಕ್ಕೆ ಬೃಹತ್ ಮರಗಳು; ಅವುಗಳ ಅಕ್ಕಪಕ್ಕದಲ್ಲಿ ಬೆಳೆದ ಕಿರು ಮರಗಳು; ಅವುಗಳ ಇಕ್ಕೆಲಗಳಲ್ಲಿ ಬೆಳೆದ ಗಿಡ ಪೊದೆಗಳು; ಇವೆಲ್ಲದರ ಬುಡದಲ್ಲಿ ನೆಲದಲ್ಲಿ ಹಾಸುಗೆಯಂತೆ ಹಾಸುಕೊಂಡಿರುವ ಹುಲ್ಲುಗಳು; ಇವುಗಳನ್ನೆಲ್ಲ ಬಂಧಿಸುತ್ತ ಹಬ್ಬಿ ಹರಡಿರುವ ಬಳ್ಳಿಗಳು- ಎಲ್ಲವೂ ಒಣಗಿ ಕರಕಲಾಗುತ್ತವೆ. ಮಲೆನಾಡ ತಂಪೆಲ್ಲಿ ಮಾಯವಾಯಿತು? ನೀರೆಲ್ಲಿ ಇಂಗಿಹೋಯಿತು? ಕವಿ ಕುವೆಂಪು ಮೋಹಿಸಿದ ಹಸುರೆಲ್ಲಿ ಹಾರಿಹೋಯಿತು? ನಮ್ಮ ಪ್ರಶ್ನೆಗಳಿಗೆಲ್ಲ ಬಿಸಿಲೊಂದೇ ಉತ್ತರ! ಆ ಮಲೆನಾಡಿನ ಒಣಗಿದ ಸಸ್ಯ ಸಂಪತ್ತೆಲ್ಲಾ, ಅದನ್ನಂಟಿ ಜೀವ ಸಾಗಿಸುವ ಕ್ರಿಮಿಕೀಟ ಪ್ರಾಣಿ ಸಂಕುಲವೆಲ್ಲಾ ಬೆಂಕಿ ಎಲ್ಲಿ ಬಂದು ಆಹುತಿ ತೆಗೆದುಕೊಳ್ಳುತ್ತದೋ ಎಂಬ ಭಯದಲ್ಲಿ ಉಸಿರು ಹಿಡಿದು ಬದುಕುತ್ತವೆ.

ಇದಕ್ಕಿಂತ ರೌರವ ನರಕ ಸದೃಶ ಬದುಕು ಬಯಲಸೀಮೆಯದು. ಅಲ್ಲಿ ಬೇಸಿಗೆಯ ಧಗೆಯೊಂದೇ ಸತ್ಯ; ಮಿಕ್ಕೆಲ್ಲವೂ ಮಿಥ್ಯ! ನಗರಗಳಂತೂ ತಾವೇ ಸೃಜಿಸಿಕೊಂಡಿರುವ ನಗರಾರಣ್ಯದ ಬೆಂಕಿ ವೃತ್ತದಲ್ಲಿ, ಶಾಖ ಕೇಂದ್ರಿತ ಸೆಲ್ಲುಗಳಲ್ಲಿ ಸಿಲುಕಿ ನರಳುವ ಪರಿ-ಯಾತನಾ ಶಿಬಿರ! ನಮ್ಮ ಕವಿ ಕೆ.ಎಸ್.ನ. ಅವರು ಹೇಳುವಂತೆ ನಗರ ಬದುಕು- 'ಗಿಳಿ ಕೋಗಿಲೆ ಹಾಡಿದರೂ ತಲೆದೂಗದ ಬಾಳು'.

ಇದಕ್ಕೆಲ್ಲ ಒಂದೇ ಪರಿಹಾರ; ಮಳೆರಾಯನ ಕೃಪೆ ಭುವಿಯ ಮೇಲೆ ಬೀಳಬೇಕು, ಜಗದ ತಾಪ ಪರಿಹಾರಕ ಮಳೆರಾಯನನ್ನು ನಮ್ಮ ಜನ ಮೈಮನದಿಂದ ಹೀಗೆ ಪ್ರಾರ್ಥಿಸುತ್ತಾರೆ:

**ಬಾರೋ ಬಾರೋ ಮಳೆರಾಯ ಬಾಳೆ ತೋಟಕೆ ನೀರಿಲ್ಲ**
**ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ**
**ಬಂದುಯ್ಯೋ ಮಳೆರಾಯ ಕೆರೆ ಕಟ್ಟೆಗೆ ನೀರಿಲ್ಲ...**

ಅವರೊಡನೆ ನಮ್ಮ ದನಿಯು ಸೇರಿ ಅನುರಣಗೊಳ್ಳಬೇಕು, ಅಷ್ಟೆ.

೨೨-೦೪-೨೦೧೦

# ಮಾರಿಗುಡಿ

ಊರೆಂದರೆ ಅಲ್ಲೊಂದು ಮಾರಿ ಗುಡಿ ಇರುತ್ತದೆ. 'ಮಾರಿ ಗುಡಿ' ಹೆಸರೇ ಹೇಳುವಂತೆ ಮಾರಿಯ ದೇವಾಲಯವನ್ನು ಗ್ರಾಮ ಭಾಷೆಯಲ್ಲಿ 'ಗುಡಿ' ಎನ್ನುತ್ತಾರೆ. 'ಗುಡಿ' ಎಂದರೆ ಶಿಷ್ಟ ದೇವತೆಗಳನ್ನು ಪ್ರತಿಷ್ಠಾಪಿಸಿರುವ ಬೃಹತ್ ಕಟ್ಟಡಗಳು, ಅವುಗಳ ಶಿಲ್ಪ ವೈಭವ, ಕಲಾಬೆರಗನ್ನು ಕಲ್ಪಿಸಿಕೊಳ್ಳಲಾಗದು. 'ಗುಡಿ' ಎಂದರೆ ಜೋಪಡಿ ಎಂದೂ ಅರ್ಥವಿದೆ. ಬಹುಪಾಲು ಮಾರಿ ಗುಡಿಗಳಲ್ಲಿ ವಿಗ್ರಹಗಳು ಸರಿಯಾದ ರೂಪದಲ್ಲಿರುವುದಿಲ್ಲ; ಅದೊಂದು ಸಂಕೇತವೆಂಬಂತೆ ಅಮೂರ್ತ, ಅಸ್ಪಷ್ಟ ಆಕೃತಿ ಗುಡಿಯ ಗರ್ಭಭಾಗದಲ್ಲಿ ಕೂತಿರುತ್ತದೆ. ಈ ಗುಡಿಗಳ ವಿಸ್ತಾರವೂ ಕೇವಲ ಆರು ಆರೋ ಆರು ಐದೋ ಅಡಿಯಿರುತ್ತದೆ. ಆ ವಿಸ್ತೀರ್ಣದ ನಡುವೆ 'ಮಾರಿ' ಕೂತಿರುತ್ತಾಳೆ; ಅದೊಂದು ಕಲ್ಲು, ಕುಂಕುಮ, ಹರಿಶಿಣ, ಕಾಡು ಹೂಗಳನ್ನು ಧರಿಸಿಕೊಂಡು ಒಂದು ಬಗೆಯ ಅಲೌಕಿಕ ವಾತಾವರಣವನ್ನು ಸೃಷ್ಟಿಸಿಕೊಂಡಿರುತ್ತದೆ.

'ಮಾರಿ' ಎಂದರೆ 'ನಾಶ'ವೆಂಬ ಅರ್ಥವೂ 'ಮೃತ್ಯು ದೇವತೆ' ಎಂಬ ಅರ್ಥವೂ ಇದೆ. ಭಯಾನಕ ಸಾಂಕ್ರಾಮಿಕ ರೋಗಗಳನ್ನು ಮಾಡುವ ನಾಶಕಾರಕಳೆಂಬ ಪ್ರತಿಹ್ಯವನ್ನು ಮಾರಿಯರು ರೂಢಿಸಿಕೊಂಡಿರುತ್ತಾರೆ. ಆದ್ದರಿಂದ ಅವರು ಸಮುದಾಯಗಳಲ್ಲಿ ಭಯವನ್ನೂ ನಿಗೂಢವಾದ ಕುತೂಹಲವನ್ನೂ ಮೂಡಿಸಿರುತ್ತಾರೆ. ಅವರನ್ನು ಶಿಷ್ಟರು 'ಕ್ಷುದ್ರ ದೇವತೆ'ಗಳೆಂದು ಕರೆಯುತ್ತಾರೆ. ಆ ಕಲ್ಪನೆಗನುಗುಣವಾಗಿ ಅವರು ಶೀಘ್ರಕೋಪಿಗಳೂ ಪೀಡಕರೂ ಎಂಬ ಪಟ್ಟಕಟ್ಟಿಕೊಂಡಿರುತ್ತಾರೆ. ತನ್ನ ಭಕ್ತರನ್ನು ಮಾರಿಯರು ಹೆದರಿಸಿಟ್ಟುಕೊಂಡಿರುತ್ತಾರೆ; ಭಕ್ತರು ಕೂಡ ಭಯ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಗ್ರಾಮದಲ್ಲಿ ನೀತಿ ನಿಯಮ, ದಾನ ಧರ್ಮಗಳ ಸ್ವಯಂ ಕಟ್ಟುಗಳಲ್ಲಿ ಬದುಕುತ್ತಾರೆ. 'ಮಾರಿ' ಮುನಿದಾಳು' ಎಂಬ ಎಚ್ಚರಿಕೆಯ ಕತ್ತಿ ಅವರ ಮನದ ತಲೆಯ ಮೇಲೆ ಸದಾ ಇರುತ್ತದೆ. ಇದೊಂದು ಬಗೆಯ ಮನಶ್ಶಾಸ್ತ್ರೀಯ ನೆಲೆಯ ಕಟ್ಟು, ತಮ್ಮ ತಮ್ಮಲ್ಲಿಯೇ ಮಾಡಿಕೊಂಡ ನೈತಿಕ ಪ್ರಜ್ಞೆಯ ಜಾಗೃತಿಯ ಅನಾವರಣ.

ಈ ಮಾರಿಯರು ಮಾಂಸಾಹಾರಿಗಳು. ಅವರಿಗೆ ರಕ್ತವೆಂದರೆ ಇಷ್ಟ. ಕೋಳಿ ಕುರಿ ಮೇಕೆ ಕೋಣ ಮುಂತಾದ ಪ್ರಾಣಿಗಳ ರಕ್ತವನ್ನು ಅವರಿಗೆ ನಿಯಮಿತವಾಗಿ ಅರ್ಪಿಸಬೇಕು. ಆ ಅರ್ಪಣೆಗೆಂದೇ ಹಬ್ಬಗಳನ್ನು ಮಾಡಬೇಕು. ಈ ಮಾರಿಯರು ಶೂದ್ರರ ದೇವತೆಗಳು. ನಮ್ಮ ನಾಡಿನಲ್ಲಿ ಶೂದ್ರರೆಲ್ಲರೂ ಮಾಂಸಾಹಾರಿಗಳು (ಅಲ್ಲೊಂದು ಇಲ್ಲೊಂದು ಅನ್ಯಪ್ರಭಾವ ಕಾರಣದಿಂದ ಮಾಂಸ ತ್ಯಜಿಸಿರುವ ಜಾತಿಗಳಿರಬಹುದು) ಎಂದೂ ಜನತೆ ತಮ್ಮಂತೆಯೇ ತಮ್ಮ ದೇವರುಗಳನ್ನು ಸೃಜಿಸಿಕೊಳ್ಳುತ್ತಾರೆ. ತಾವು ತಿನ್ನುವ ಆಹಾರವನ್ನು ಅವರಿಗೂ ಆರೋಪಿಸುತ್ತಾರೆ.

ಅಪ್ಸರಮಟ್ಟಿಗೆ ಸಮಾನತೆ ಪ್ರಾಪ್ತವಾಗುತ್ತದೆ. ನಮ್ಮ ಕರುನಾಡ ಬಹುಮುಖ್ಯ ದೇವತೆಯಾದ ಚಾಮುಂಡಿಯು ಕೂಡ ಮಾರಿಯೇ! ಅವಳಿಗೆ ಮೈಸೂರಿನ ಜನ 'ಮರಿ' ಕಡಿದು ಅದ್ಧೂರಿಯಾಗಿ ವರ್ಷಕ್ಕೊಮ್ಮೆ ಹಬ್ಬ ಆಚರಿಸುತ್ತಾರೆ. ಮೈಸೂರಿನ ಮೂಲವಾಸಿಗಳೆಲ್ಲರ ಮನೆ ಮನೆಯಲ್ಲೂ ಅಂದು 'ಬಾಡಿನ ವಾಸನೆ' ಹರಿದಾಡುತ್ತದೆ. ಈ ಮಾರಿ ಚಾಮುಂಡಿ ಮೈಸೂರು ಅರಸರ ಮನೆ ದೇವತೆಯಾದ ಮೇಲೆ ಅವಳಿಗೆ ಶಿಷ್ಟರೂಪ ಕೊಡಲು ಯತ್ನಿಸಲಾಯಿತು. ಆದರೂ ಅವಳು ಎಂದಿಗೂ ಮಾರಿಯೇ. ಬಹಳ ಹಿಂದೆ ಬೆಟ್ಟದ ಮೇಲೆಯೇ ಅವಳಿಗೆ 'ಮರಿ ಬಲಿ' ನೀಡಲಾಗುತ್ತಿತ್ತು. ಇಂದಿಗೂ ಚಾಮುಂಡಿ ದೇವಾಲಯದ ದಕ್ಷಿಣದ ಮಗ್ಗುಲಿಗೆ ಒಂದು ಬಲಿ ಅರೆ ಇದೆ. ಇವಳ ತಂಗಿ ಉತ್ತನಹಳ್ಳಿ ಮಾರಿ ಕೂಗಳತೆಯಲ್ಲಿಯೇ ಇದೆ. ಇವರಿಬ್ಬರ ಬಗ್ಗೆ ವಿಪುಲವಾದ ಜನಪದ ಕಾವ್ಯ ಇದೆ.

ಮಾರಿಯರು ಮಾತೃಪ್ರಧಾನ ಸಂಸ್ಕೃತಿಯ ರೂಪಗಳು! ನಿಮಗೆ ಆಶ್ಚರ್ಯವಾಗಬಹುದು- ಈ ದೇವತೆಗಳೆಲ್ಲರೂ ಹೆಂಗಸರೇ! ಗ್ರಾಮ್ಯ ದೇವತೆಗಳಲ್ಲಿ 'ಗಂಡು ದೇವತೆ'ಗಳೇ ಇಲ್ಲ. ಅವರೆಲ್ಲರೂ ಗ್ರಾಮ ಪರಿಸರದಲ್ಲಿ ಹುಟ್ಟಿ ಬೆಳೆದು ಊರ ಹಿತಕ್ಕಾಗಿ ಬಲಿಯಾದ ಸಮುದಾಯ ಮುಖಿ ಹೆಣ್ಣುಗಳು, ಕೆರೆಗೋ ಮತ್ತೊಂದಕ್ಕೊ 'ಆಹಾರ'ವಾಗಿ, ಅನಂತರ ತಮ್ಮ ತ್ಯಾಗ ಕಾರಣದಿಂದಾಗಿಯೇ ಮಾರಿಯರಾಗಿ ಪರಿವರ್ತನೆಗೊಂಡು ಪೂಜನೀಯರಾದರು. ಇಲ್ಲಿ ಗಂಡಸು ಅಮಾನ್ಯ. ಅವನು ಸ್ತ್ರೀಯಷ್ಟು ತ್ಯಾಗಜೀವಿಯಲ್ಲ. ಸಮುದಾಯ ಜೀವಿಯಲ್ಲ! ಹೀಗಾಗಿ 'ಆಹಾರ'ವಾಗದೆ ಹೊರಗುಳಿದುಬಿಡುತ್ತಾನೆ. ಅಥವಾ ಪುರುಷನ ಕ್ರೌರ್ಯವೂ 'ಆಹಾರ'ವಾಗುವುದರ ಹಿಂದೆ ಕೆಲಸ ಮಾಡಿದೆ ಎಂದು ತಿಳಿಯಬೇಕು. ಮಾರಿಯರನ್ನು ಅಧ್ಯಯನ ಮಾಡುವುದರ ಮೂಲಕ ಸ್ತ್ರೀ ಸಂಸ್ಕೃತಿಯ ಚರಿತ್ರೆಯನ್ನು, ಪರಿವರ್ತನಾಶೀಲ ಸಾಮಾಜಿಕತೆಯನ್ನು ಅರಿಯಬಹುದು.

ಶಿಷ್ಟ ದೇವತೆಗಳೆಲ್ಲರೂ ಗಂಡುಗಳು, ಅಲ್ಲಿ ಬರುವ ಸ್ತ್ರೀ ದೇವತೆಗಳು ಪುರುಷ ದೇವತೆಗಳ ಪತ್ನಿಯರು ಅಥವಾ ಸಂಬಂಧಿಗಳು. ಅಲ್ಲಿ ಅವರಿಗೆ ಅಗ್ರಸ್ಥಾನವಿಲ್ಲ. ಎರಡನೆಯ ಸ್ಥಾನ. ಇದು ಪುರುಷ ಪ್ರಧಾನ ಸಂಸ್ಕೃತಿಯ ಪ್ರತಿರೂಪ.

೨೦-೦೫-೨೦೧೦

# ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ..

ಲೋಭತನವನ್ನು ಶ್ರೇಷ್ಠವೆಂದು ಜಗತ್ತಿನ ಯಾವ ಮೂಲೆಯ ಯಾವ ಧರ್ಮವೂ ಹೇಳಿಲ್ಲ. ಲೋಭಿಯು ಸಮಾಜಘಾತುಕನೂ ಕುಟುಂಬಪೀಡಕನೂ ಹೃದಯಹೀನನೂ ಆಗಿರುತ್ತಾನೆ. ಅವನು ತಾನೂ ತಿನ್ನ; ಪರರಿಗೂ ಉಣಲು ಬಿಡ. ಅವನು ಆತ್ಮವಂಚಕ; ತಾನೇನು ಮಾಡುತ್ತಿದ್ದೇನೆಂಬ ವಿವೇಚನೆ ಅವನಲ್ಲಿ ಸುಳಿಯದು. ಆ ಬಗ್ಗೆ ಪರರು ನೀತಿಬೋಧನೆ ಮಾಡಿದಾಗ ಅದಕ್ಕೆ ಅವನು ಕಿವುಡನಾಗುತ್ತಾನೆ ಹಾಗೂ ಅವರ ಮೇಲೆ ಹರಿಹಾಯ್ದು, ಅವರು ಸ್ವಾರ್ಥಿಗಳೆಂದೂ ತನ್ನ ಹಣ ದೋಚಲು ಕಾಯುತ್ತಿರುವ ಕಳ್ಳರೆಂದೂ ಆರೋಪ ಮಾಡುತ್ತಾನೆ. ಅವನು ಕಾಸಿಗೆ ಕಾಸು ಕೂಡಿಹಾಕಿ ಅದರ ಲೆಕ್ಕದಲ್ಲಿ ಆನಂದ ಕಾಣುತ್ತಾನೆ. ಇದನ್ನೇ ನಮ್ಮ ಕವಿಗಳು ಮತ್ತು ದಾರ್ಶನಿಕರು 'ಲಕ್ಷ್ಮೀಮೋಹ'ವೆಂದು ಕರೆದು 'ತಪ್ಪು' ಎಂದು ತಿಳಿಸುತ್ತಾರೆ.

ನಮ್ಮ ದಾಸ ಶ್ರೇಷ್ಠರಾದ ಪುರಂದರದಾಸರು ಲೋಭಿಯನ್ನು, ಅವನ ಲೋಭತನವನ್ನು ವಿಡಂಬಿಸುತ್ತಾರೆ:

**ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಉಡಲಿಲ್ಲ**
**ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವ್ಯಲ್ಲೋ ಪ್ರಾಣಿ!**
**ಮತ್ತೆ ಉಪ್ಪಿಲ್ಲದೆ ಉಂಡ್ಯಲ್ಲೋ ಪ್ರಾಣಿ!**
**ಹತ್ತು ಸಾವಿರ ಹೊನ್ನು ತಿಪ್ಪೇಲಿ ಪೋಪಾಗ**
**ಮೃತ್ತಿಕೆ ಬಾಯಲ್ಲಿ ಬಿತ್ತಲ್ಲೋ ಪ್ರಾಣಿ!**

ತನ್ನ ಲೋಭತನದಿಂದ ಉಣ್ಣದೆ ಉಡದೆ ಹೂತಿಟ್ಟ ಹಣವು ಒಂದಲ್ಲ ಒಂದು ದಿನ ಪರರ ಪಾಲಾಗೇ ಆಗುತ್ತದೆ. ಆಗ ಅತ್ತು ಏನು ಪ್ರಯೋಜನ? ಆಗ ಉಪ್ಪಿಗೂ ಗತಿಯಿಲ್ಲದೆ ಹಲುಬಿದರೆ ಏನು ಬಂತು? ಹೂತಿಟ್ಟ ಹಣ ತಿಪ್ಪೆಗೆ (ಕಸಕ್ಕೆ) ಸಮ. ಅದು ಕಸವಾಗಿ ಹೊರಟು ಹೋಗುತ್ತದೆ. ಆಗ ಮನುಷ್ಯಪ್ರಾಣಿ ಹುಲ್ಲು ತಿನ್ನಬೇಕಾಗುತ್ತದೆಯೆಂದು ಪುರಂದರದಾಸರು ಜೀವನ ಮೀಮಾಂಸೆ ಮಾಡುತ್ತಾರೆ. ಪುರಂದರದಾಸರು ಆಸ್ತಿಕ ಮನೋಧರ್ಮವನ್ನು ಮತ್ತು ದೈವ ಸಂಕಲ್ಪ ನಂಬಿಕೆಯನ್ನು ಪಕ್ಕಕ್ಕಿಟ್ಟು ತುಸು ಅವರ ಮಾತುಗಳನ್ನು ಅರ್ಥೈಸಬೇಕಾಗುತ್ತದೆ. 'ಹರಿ ಕೊಟ್ಟ ಕಾಲಕ್ಕೆ ಉಣ್ಣಬೇಕು, ಉಡಬೇಕು' ಎಂಬ ಮಾತಿನ ಅರ್ಥ- ಭೌತಿಕ ಬದುಕನ್ನು ಅದು ಕೈಗೆ ಸಿಕ್ಕಾಗ ಅನುಭೋಗಿಸಬೇಕು ಎಂದೇ ಆಗುತ್ತದೆ. ಬದುಕನ್ನು ಅಲೌಕಿಕದ ಹೆಸರಿನಲ್ಲಿ ನಿರಾಕರಿಸಬಾರದು; ಅದರ ಸಾರವನ್ನು ಸವಿಯಬೇಕು; ಕಾಲ ಮಿಂಚಿದ ನಂತರ ಕೇವಲ ನಿರಾಸೆ ಮಾತ್ರ ಉಳಿಯುತ್ತದೆ. ಅಂದರೆ ಸಂಪೂರ್ಣ ಭೋಗದಲ್ಲಿ ಮುಳಗಬೇಕು ಎಂದು ಅರ್ಥವಲ್ಲ.

ಪ್ರಕೃತಿದತ್ತ ಸಂಪನ್ಮೂಲವನ್ನು ಪ್ರಕೃತಿ ನಿಯಮಕ್ಕನುಗುಣವಾಗಿ, ಮಿತಿಯಲ್ಲಿ ಬಳಸಿಕೊಳ್ಳಬೇಕು. ಆಗ ಬದುಕಿಗೊಂದು ಅರ್ಥ ಬರುತ್ತದೆ; ರುಚಿ ಸಾಧಿತವಾಗುತ್ತದೆ.

ಬದುಕು ಮಾಡುವುದು ಎಂದರೆ ಲೋಭತನವಲ್ಲ; ಅತಿ ಭೋಗವೂ ಅಲ್ಲ. ಇವೆರಡರ ನಡುವಿನ ಸುವರ್ಣ ನೆಲೆ, ಪ್ರತಿಯೊಂದು ಸಮಾಜವೂ ವ್ಯಕ್ತಿಯೂ ಮಿತಿಗುಳುಳ್ಳ ಸರಳ ಸಭ್ಯ ಜೀವನ ನಡೆಸುವುದನ್ನು ಪ್ರೀತಿಪೂರ್ವಕವಾಗಿ ಅಭ್ಯಾಸ ಮಾಡಿಕೊಳ್ಳಬೇಕು. ಇಲ್ಲದಿದ್ದಲ್ಲಿ ಜೀವನ ಎರಡು ಅತಿರೇಕಗಳ ನಡುವೆ ಸಿಲುಕಿ ನರಳುತ್ತದೆ. ಲೋಭಿ ನೆಲೆಯಲ್ಲಿ ಬದುಕು ಅರ್ಥ-ರಸ ರಹಿತ ಒಣ ಕಾಷ್ಠವಾದರೆ, ಭೋಗ ನೆಲೆಯಲ್ಲಿ ಅತಿಯಾದ ಸೇವನೆಯ ನೆಲೆಯಲ್ಲಿ ಬಹುಬೇಗ ಸವಿ ಕಳೆದುಕೊಂಡು ರೋಗಮೂಲವಾಗುತ್ತದೆ. ಹಾಗೆ ನೋಡಿದರೆ ಇವೆರಡೂ ರೋಗಕಾರಕಗಳೇ ಆಗಿವೆ. ಒಂದು ಮಾನಸಿಕ ರೋಗವಾದರೆ, ಮತ್ತೊಂದು ದೈಹಿಕ ರೋಗವಾಗಿ ಪರಿಣಮಿಸುತ್ತದೆ.

ದಾಸರು ಕೂಡಿಡುವುದನ್ನು ವಿರೋಧಿಸುವಂತೆ ಕಂಡರೂ ಅವರು ಅದಕ್ಕೆ ಸಂಪೂರ್ಣ ವಿರೋಧಿಗಳಲ್ಲ. ಹಿತಮಿತವಾಗಿ ವಿವೇಚನಾಯುತವಾಗಿ ಉಳಿಸಿ ಬಳಸಿದಲ್ಲಿ 'ಉಪ್ಪಿಲ್ಲದೆ ಉಣ್ಣುವ' ಮತ್ತು 'ಮೃತ್ತಿಕೆ' ತಿನ್ನುವ ಪ್ರಮೇಯ ಬರುವುದಿಲ್ಲ. ಆಧುನಿಕ ಅಸ್ತಿತ್ವವಾದದ ಸುಳಿವು ದಾಸರ ಮಾತಿನಲ್ಲಿ ತೋರುತ್ತದೆ. ಪರರ ಬದುಕಿಗೆ ಮಹತ್ವ ನೀಡುವುದರ ಜೊತೆ ಜೊತೆಯಲ್ಲಿಯೇ ಇಹದ ಬದುಕಿಗೂ ಅಷ್ಟೇ ಪ್ರಾಮುಖ್ಯತೆ ನೀಡಬೇಕು ಎಂಬುದು ಮುಖ್ಯ ಆಶಯ. ವಚನ ಚಳವಳಿಯ ಪ್ರಭಾವ ದಾಸರ ಮೇಲೆ ಆಗಿರುವುದಕ್ಕೆ ಇದೊಂದು ಪುಟ್ಟ ನಿದರ್ಶನ. ದೈವ ಸಂಕಲ್ಪ ಮತ್ತು ಭಗವಂತನ ನಿಯಾಮಕ ಸಿದ್ಧಾಂತದ ಮಧ್ವ ಸಿದ್ಧಾಂತದ ಅನುಯಾಯಿಗಳಾದರೂ ಕನಕ-ಪುರಂದರರು ಭೌತಿಕ ಬದುಕಿಗೆ, ಅದರ ಅರ್ಥವಂತಿಕೆಗೆ ಮಹತ್ವ ನೀಡಿದ್ದರು. ಲೋಭತನ ನೀರಸ ಬದುಕನ್ನು ಸೃಷ್ಟಿಸುತ್ತದೆ. ಭೋಗತನ ದುರಾಸೆ, ಕಬಳಿಕೆಯನ್ನು ರೂಢಿಸುತ್ತದೆ. ಇವೆರಡರಲ್ಲೂ ರಸಜೀವನವಿಲ್ಲ. ಬೇಂದ್ರೆ ಅವರು ತಿಳಿಸುವಂತೆ 'ಸಮರಸವೇ ಜೀವನ'ವಾಗಬೇಕಾದರೆ ಇವೆರಡರ ಸಮತೋಲನ ಸೃಷ್ಟಿಯಾಗಬೇಕು.

೦೩-೦೬-೨೦೧೦

# ಬಳೆಗಳೆ, ಬಣ್ಣದ ಬಳೆಗಳೆ...

'ಬಳೆ' ಎಂದರೆ ವೃತ್ತಾಕಾರದಲ್ಲಿರುವ ಮರದ, ಮಣ್ಣಿನ, ಕಲ್ಲಿನ, ಲೋಹದ ವಸ್ತುವಿಶೇಷ, ಅದಕ್ಕೆ 'ಆಭರಣ ವಿಶೇಷ'ವೆಂಬ ಅರ್ಥಬಂದಿರುವುದು ಇತ್ತೀಚಿನ ಚರಿತ್ರೆಯಲ್ಲಿ, ಬಳೆಯನ್ನು ಕೂದಲನ್ನು ಗಂಟು ಹಾಕಿಕೊಳ್ಳಲು, ಕುತ್ತಿಗೆಯನ್ನು, ಕೈಗಳನ್ನು ಅಲಂಕರಿಸಿಕೊಳ್ಳಲು ಬಳಸುತ್ತಾರೆ. ನಮ್ಮ ಪ್ರಾಚೀನ ಶಿಲ್ಪಕಲೆಯಲ್ಲಿ ಕಲ್ಲಿನಿಂದ ಈ ಬಳೆಗಳನ್ನು ಮಾಡಿರುವುದನ್ನು ಗಮನಿಸಬಹುದು. ಅತಿ ಪುರಾತನ ಸಂಸ್ಕೃತಿಗಳ ಚಿತ್ರಕಲೆಗಳಲ್ಲಿ ಬಳೆ ವಿಶೇಷವಾಗಿ ಗಮನ ಸೆಳೆಯುತ್ತದೆ. ಇನ್ನು ಕಾವ್ಯಗಳಲ್ಲಂತೂ ಅವುಗಳ ವರ್ಣನೆ ಸ್ತ್ರೀ ವರ್ಣನೆಯ ಅವಿಭಾಜ್ಯ ಅಂಗವಾಗಿ ಹೋಗಿದೆ. ಕಾಲಿಗೆ ಅವು ಅಲಂಕರಣಗೊಂಡು ಕಡಗವೆಂಬ ಹೆಸರು ತಾಳಿದ್ದೂ ಆಯಿತು. ಕಾಲ ಕಳೆದಂತೆ ಚಿನ್ನ ಬೆಳ್ಳಿಗಳಲ್ಲಿ ತಯಾರಿಸುವುದು ಪ್ರಾರಂಭ ಮಾಡಿದ ಮೇಲೆ ಅವುಗಳಿಗೆ ಶ್ರೀಮಂತಿಕೆಯ ಸ್ಥಾನಮಾನ- ಅಂತಸ್ತು ಪ್ರಾಪ್ತವಾಗಿ ವರ್ಗ ಅಸಮಾನತೆಗೆ ನಾಂದಿಯಾಯಿತು.

ಅದೊಂದು ಆಭರಣ ವಿಶೇಷವಾಗಿ ಉಳಿದಿದ್ದರೆ ನಾವು ಚಿಂತನೆ ಮಾಡಬೇಕಾದ ಆವಶ್ಯಕತೆಯಿರುತ್ತಿರಲಿಲ್ಲ. ಬಳೆ ಮಧ್ಯ ಯುಗದಲ್ಲಿ ತಾಳಿದ ರೂಪ ಮತ್ತು ಬಳಕೆಯಾದ ವಿಧಾನ- ಉದ್ದೇಶಗಳಿಂದಾಗಿ ಕ್ರೌರ್ಯಕ್ಕೆ ಸಂಕೇತವಾಯಿತು. ಬಳೆ ಹಾಕುವುದು ಎಂದರೆ ಬಂಧನದಲ್ಲಿಡುವುದು, ಅಪರಾಧಿ ತಪ್ಪಿಸಿಕೊಂಡು ಹೋಗದ ಹಾಗೆ ಬಂಧಿಸಿಡುವುದು ಎಂದಾಯಿತು. ಅವು ಕಬ್ಬಿಣದಲ್ಲಿ ತಯಾರಾಗಿ ಆರೋಪಿಗಳನ್ನು ಬಂಧಿಸುವ ಭಯಂಕರ ಸಾಧನವಾದುವು. ಏಕ ಕಾಲದಲ್ಲಿ ಈ ಮೂರೂ ಭಾಗಗಳನ್ನು ಬಂಧಿಸಿ ಕಬ್ಬಿಣದ ಕಂಭಗಳಿಗೋ ಮರದ ಕೊಕ್ಕೆಗಳಿಗೋ ಕಟ್ಟುವುದು; ಕುತ್ತಿಗೆ ಕೈಕಾಲುಗಳಿಗೆ ಈ ಬಳೆ ತೊಡಿಸಿ ಅಮಾನವೀಯವಾಗಿ ದರದರನೆ ಎಳೆದುಕೊಂಡು ಹೋಗುವುದು- ಮುಂತಾದ ಶಿಕ್ಷಾಕ್ರಮಗಳು ರೂಢಿಗೆ ಬಂದವು.

ಈ ಬಳೆಗಳು ಅಲಂಕರಣ ಸಾಧನಗಳ ಹೆಸರಿನಲ್ಲಿ ಅನೇಕ ವಿಕೃತಿಗಳನ್ನು ಸೃಷ್ಟಿಸಿವೆ. ಪೂರ್ವ ಏಷ್ಯಾದ ಅನೇಕ ಆದಿವಾಸಿಗಳು ಬಳೆಗಳನ್ನು ಕುತ್ತಿಗೆಯಲ್ಲಿ ಒಂದರ ಮೇಲೊಂದರಂತೆ ಪೇರಿಸಿ, ಕುತ್ತಿಗೆಯನ್ನೇ ಉದ್ದ ಮಾಡಿಕೊಳ್ಳುತ್ತಾರೆ. ಅನೇಕ ಬುಡಕಟ್ಟುಗಳಲ್ಲಿ ಅಲಂಕಾರದ ಹೆಸರಿನಲ್ಲಿ ಕಿವಿ, ತುಟಿ ಮತ್ತು ಮೂಗುಗಳನ್ನು ವಿಕಾರಗೊಳಿಸಿಕೊಳ್ಳುತ್ತಿದ್ದರು. ಈ ಬಳೆಗಳಿಂದಾಗುತ್ತಿದ್ದ ದೈಹಿಕ ತೊಂದರೆಗಳನ್ನು ಅರ್ಥ ಮಾಡಿಕೊಳ್ಳಲಾಗದಷ್ಟು ಮುಗ್ಧತೆ- ಮೌಢ್ಯತೆಯಲ್ಲಿ ಅವರು ಸಿಲುಕಿಹಾಕಿಕೊಂಡುಬಿಡುತ್ತಿದ್ದರು. ಮುಂದೆ ಅದೊಂದು ಸಂಪ್ರದಾಯ-

ಆಚರಣೆಯಾಗಿ ಅವರ ಬದುಕನ್ನು ರೌರವಕ್ಕೆ ಗುರಿ ಮಾಡುತ್ತಿತ್ತು.

ಭಾರತದಲ್ಲೂ ಮುಖಕ್ಕಿಂತ ಅಗಲವಾದ ವೃತ್ತಾಕಾರದ ಬಳೆಗಳನ್ನು ಹಾಕಿಕೊಂಡು 'ಸೌಂದರ್ಯ ಮೆರೆಯುತ್ತಿದ್ದ' ಶ್ರೀಮಂತ ಮಹಿಳೆಯರಿಗೇನೂ ಕೊರತೆಯಿಲ್ಲ. ಅವರನ್ನು ಅನುಕರಿಸುತ್ತಿದ್ದ ಕೆಳವರ್ಗದ ಮಹಿಳೆಯರು ಬೆಳ್ಳಿ, ಬಳ್ಳಿ, ಎಲೆಗಳನ್ನು ಧರಿಸಿ ತಮ್ಮ ಸೌಂದರ್ಯ 'ವೃದ್ಧಿ'ಸಿಕೊಳ್ಳುತ್ತಿದ್ದರು. ಅದರಲ್ಲೂ ನಮ್ಮ ದೇಶದ ಉತ್ತರ ಭಾಗದ ಶ್ರೀಮಂತ ವರ್ಗ ಒಂದು ನೆಲೆಯಲ್ಲಿ ನಿಂತರೆ; ಆದಿವಾಸಿ ಜನಾಂಗಗಳು ಇನ್ನೊಂದು ನೆಲೆಯಲ್ಲಿ ನಿಲ್ಲುತ್ತವೆ. 'ಬಳೆ' ಎಂಬ ಸಾಮಾನ್ಯ ವಿಶೇಷವೊಂದು ಭಾರತೀಯ ಬದುಕಿನ ವೈರುಧ್ಯವನ್ನು- ಸಮಾನಾಂತರ ಜೀವನ ಗತಿಯನ್ನು ಅಭಿವ್ಯಕ್ತಿಸಿ ರೂಪಕವಾಗುತ್ತದೆ.

ಗಾಜಿನ ಬಳೆಗಳು ಬಂದಮೇಲೆ ಭಾರತದ ಮನೆಮನೆಯಲ್ಲಿ ಅವುಗಳ ನಿನಾದ ಅನುರಣಿತವಾಗತೊಡಗಿತು. ಚಿನ್ನದ ಬಳೆಯನ್ನು ಮಾಡಿಸಿಕೊಳ್ಳುವ ಶ್ರೀಮಂತ ಮಹಿಳೆಯರು ಕೂಡ ಗಾಜಿನ ಬಳೆಗಳ ರೂಪ-ಸೌಂದರ್ಯ ವೈಭವಕ್ಕೆ ಮನಸೋತು ಗಾಜಿನ ಬಳೆ ಧರಿಸುತ್ತಾರೆ; ಚಿನ್ನದ ಬಳೆಗಳನ್ನು ಅವುಗಳ ತುದಿಗಳಲ್ಲಿಟ್ಟು ಆನಂದಿಸುತ್ತಾರೆ. ಬಳೆಗಳಲ್ಲಿ ಬಣ್ಣಬಣ್ಣದ ವೈವಿಧ್ಯವಿದೆ; ಮಧ್ಯೆ ಮಧ್ಯೆ ಚಿನ್ನದ ಚಿತ್ತಾರದ ಕುಸುರಿ ಕೆಲಸ ಬೇರೆ!

ಭಾರತದಲ್ಲೂ ಈ ಬಳೆ ಸಂಪ್ರದಾಯದ- ಮೌಢ್ಯದ ಬಲೆಗೆ ಸಿಲುಕಿಕೊಂಡಿದೆ. ಈಗ ಇದು ಮುತ್ತೈದೆತನದ, ಸುಮಂಗಲಿತನದ ಸಂಕೇತವಾಗಿದೆ. ಅವಳಿಗೆ ವೈಧವ್ಯ ಪ್ರಾಪ್ತವಾದರೆ ಅವುಗಳನ್ನು ಧರಿಸುವಂತಿಲ್ಲ; ಶ್ರಾದ್ಧದ ದಿನ ಅವುಗಳನ್ನು ಒಡೆದು ಅವಳು ವಿಧವೆಯೆಂದು ಘೋಷಿಸುತ್ತಾರೆ. ಆಧುನಿಕ ಚಿಂತನಶೀಲ ಮಹಿಳೆ ಬಳೆಯಿಂದ ಹೊರಬರಲು ಯತ್ನಿಸಿದ್ದಾಳೆ. ಅದು ಬಂಧನದ, ಶೋಷಣೆಯ ಸಂಕೇತವೆಂದು ಅವಳು ಅರಿತಿದ್ದಾಳೆ. ಬಳೆಗಳಿಲ್ಲದೆಯೂ ಅವಳು ನಿರಾಭರಣ ಸುಂದರಿಯಾಗಿರಬಹುದೆಂದು ಸಾಬೀತು ಮಾಡಿದ್ದಾಳೆ.

ಬಳೆ ಎಂದರೆ 'ಬೆಳೆ' ಎಂಬ ಅರ್ಥವೂ ಇದೆ; 'ಅಭಿವೃದ್ಧಿಯಾಗು' ಎಂಬ ಅರ್ಥವೂ ಇದೆ. ಆದರೆ ಅದು ಮಸುಕಾಗಿರುವುದು ದುರಂತ.

೧೭-೦೬-೨೦೧೦

# ತುಂಗೆ, ಮಂಗಳ ತರಂಗೆ!

ಭಾರತದ ಜೀವನದಿಗಳಲ್ಲಿ ಗಂಗಾನದಿಗೆ ವಿಶೇಷವಾದ ಸ್ಥಾನವನ್ನು ನೀಡಲಾಗಿದೆ. ಭರತಖಂಡವನ್ನು ಉದ್ಧರಿಸಲು ಸ್ವರ್ಗದಿಂದ ಭುವಿಗಿಳಿದವಳು ಗಂಗೆ, ಅವಳು ಶಿವನ ಮುಡಿಯಿಂದ, ಹರಿಯ ತೊಡೆಯಿಂದ ಪುನೀತಳಾಗಿ ಭಗೀರಥನ ಅಭೀಪ್ಸೆಯನ್ನು ಈಡೇರಿಸಲು ಮನಸ್ಸು ಮಾಡಿದಳೆಂದು ಕಥೆಗಳು ಹೇಳುತ್ತವೆ. ಮಾನಸ ಸರೋವರದಲ್ಲಿ ಜನಿಸುವ ಸಿಂಧು, ಬ್ರಹ್ಮಪುತ್ರ ನದಿಗಳು ಭಾರತವನ್ನು ಅರಳಿಸಿರುವುದು ಅತ್ಯಲ್ಪ. ಆದರೆ ಗಂಗೆ ಮಾತ್ರ ಉತ್ತರ ಭಾರತದ ಸಾವಿರಾರು ಮೈಲುಗಳ ವಿಸ್ತಾರದಲ್ಲಿ ಹರಿದು, ಅಲ್ಲಿನ ಜನರ ದಾಹವನ್ನು ಹಿಂಗಿಸಿದ್ದಾಳೆ; ಲಕ್ಷಾಂತರ ಎಕರೆಗಳ ಕೃಷಿಗೆ ಕಾರಣೀಭೂತಳಾಗಿ ಜನರ ಹೊಟ್ಟೆ ಬಟ್ಟೆಗಳ ಹಸಿವನ್ನು ಪೂರೈಸಿದ್ದಾಳೆ. ಆದ್ದರಿಂದ ನಮ್ಮ ಜನ ಅವಳನ್ನು ದೇವರೆಂದೂ, ಪುಣ್ಯಾತ್ಮಳೆಂದೂ, ಪಾಪಹರಳೆಂದೂ ಕರೆದು ಕೊಂಡಾಡಿದ್ದಾರೆ. ಕಥೆ ಕಾವ್ಯಗಳನ್ನು ಕಟ್ಟಿ ಹಾಡಿದ್ದಾರೆ.

ನಮ್ಮ ಕನ್ನಡದ ಮಹತ್ವದ ಕವಿ ರಾಘವಾಂಕನು ಗಂಗೆಯನ್ನು ವಿಶೇಷವಾಗಿ ಸ್ತುತಿಸಿದ್ದಾನೆ:

**ಬಿಡೆ ಕೇಳ್ದಡಘಹರಂ ನೆನೆಯೆ ಪುಣ್ಯೌಘ ನುಡಿ**
**ದಡೆ ಸರ್ವಸಿದ್ಧಿ ಕಂಡಡೆ ಜನ್ಮನಾಶ ಪೊಗ**
**ಳ್ದಡೆ ಸುರೇಂದ್ರತ್ವ ಸೋಂಕಿದಡೆ ಕಮಲಜಪದವಿ ಮರೆದೊಮ್ಮೆ**
**ಕುಡಿತಗೊಂಡು**
**ಕುಡಿದನಾದಡೆ ಮುಕ್ತಿಯವಗಾಹವಿರ್ದನಾ**
**ದಡೆ ಗಣೇಶತ್ವ ಸಾರ್ದಡೆ ಮಹಾರುದ್ರತ್ವ**
**ವಡೆವರೀ ಗಂಗೆಯಿಂದಾರಾದಡೆಂಬ ಮಹಿಮೆಗೆ ಸಾಕ್ಷಿವೇದಮತವು**

ಆದರೆ ಕಾಲ ಕಳೆದಂತೆಲ್ಲಾ ಗಂಗೆ ಮಲಿನಗೊಂಡಿದ್ದಾಳೆ. ಅವಳನ್ನು 'ಸೋಂಕಿದರೆ' ಕಮಲಜ ಪದವಿ ಬರುವುದರ ಬದಲು ನಿಜಕ್ಕೂ 'ಜನ್ಮನಾಶ'ವಾಗುವ ಸ್ಥಿತಿ ಇಂದು ಬಂದು ತಲುಪಿದೆ. ಈ ಸ್ಥಿತಿಗೆ ಅವಳು ಕಾರಣಳಲ್ಲ. ಅವಳನ್ನು ದೇವತೆಯೆಂದು ಆರಾಧಿಸುವ ಜನರೇ ದಿನನಿತ್ಯ ಅವಳ ಮೇಲೆ ನಡೆಸುತ್ತಿರುವ ಹಲ್ಲೆಯಿಂದಾಗಿ ಅವಳ ದಿವ್ಯತ್ವವನ್ನು ಕಳೆದುಕೊಂಡಿದ್ದಾಳೆ. ಇಂದು ಭಾರತದ ನದಿಗಳಲ್ಲೆಲ್ಲಾ ಅತ್ಯಂತ ಕೊಳಕಾದ ನೀರುಳ್ಳವಳೆಂದು ಅಪಖ್ಯಾತಿಯನ್ನು ಅವಳು ಹೊಂದಿದ್ದಾಳೆ. ಸದಾ ಕಾರ್ಖಾನೆಗಳಿಂದ, ನಗರ ಪಟ್ಟಣಗಳಿಂದ ಹರಿಯುವ ಕೊಳಚೆ ನೀರು; ಹಾನಿಕಾರಕ ರಾಸಾಯನಿಕಗಳು ಅದರ ಶುದ್ಧತ್ವವನ್ನು ಹಾಳುಮಾಡಿವೆ. ಗಂಗಾನದಿಯ ತೀರದಲ್ಲಿರುವ ಪುಣ್ಯ ಕ್ಷೇತ್ರದಲ್ಲಿ ಸಾಯುವುದಕ್ಕಾಗಿಯೇ ಹಂಬಲಿಸುವ ಲಕ್ಷಾಂತರ ಜನರು

ಭಾರತದಲ್ಲಿ ಇಂದೂ ಇದ್ದಾರೆ. ಅಂತಹವರಿಗಾಗಿಯೇ ನೂರಾರು ರುದ್ರಭೂಮಿಗಳು ಉದ್ಭವವಾಗಿವೆ. ಅವು ಸ್ವರ್ಗಕ್ಕೆ ಕಳಿಸುವ ವ್ಯಾಪಾರ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿವೆ. ಜನರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಂಡು ಈ ರುದ್ರಭೂಮಿಗಳೆಂಬ ವ್ಯಾಪಾರ ಸಂಸ್ಥೆಗಳು ಗಂಗೆಯನ್ನು ಮಲಿನಗೊಳಿಸುತ್ತಿವೆ. ನಿತ್ಯ ನೂರಾರು ಅರೆಬೆಂದ ಹೆಣಗಳು ಗಂಗೆಯ ಪಾಲಾಗುತ್ತವೆ. ಅದರ ಜೊತೆಗೆ ಮಾನವನು ಕೂಡ ತನ್ನ ದಿನನಿತ್ಯದ ಕರ್ಮಗಳಾದ ಮಲ ಮೂತ್ರ ವಿಸರ್ಜನೆಯನ್ನು ಗಂಗೆಯಲ್ಲಿಯೇ ಮಾಡುತ್ತಿರುವುದು ಅಸಹ್ಯವನ್ನುಂಟು ಮಾಡುತ್ತಿದೆ. ಗಂಗೆಯ ನೀರಿನ ಮೇಲೆ ಒಂದೆರಡು ಇಂಚು ಕೊಳೆ ತೇಲುತ್ತಿದೆಯೆಂದು ಅಧ್ಯಯನಗಳು ಹೇಳುತ್ತಿವೆ. ಅದರಲ್ಲಿ ಸ್ನಾನ ಮಾಡಿದರೆ ಅನೇಕ ಬಗೆಯ ಚರ್ಮರೋಗಗಳು, ಕುಡಿದರೆ ಸಾಂಕ್ರಾಮಿಕ ರೋಗಗಳು ಬರುತ್ತವೆಯೆಂದು ಅವು ಎಚ್ಚರಿಸಿವೆ. ಬಹುಶಃ ನಮ್ಮ ಕವಿ ರಾಘವಾಂಕ ಇಂದು ಬದುಕಿ ಗಂಗೆಯ ಸ್ಥಿತಿಯನ್ನು ಕಂಡಿದ್ದರೆ ಖಂಡಿತ ಅವನು ಮೇಲಿನಂತೆ ಬರೆಯುತ್ತಿರಲಿಲ್ಲ!

ನಮ್ಮ ಕನ್ನಡ ಸೀಮೆಯ ಜನರು ಗಂಗೆಯ ಶುದ್ಧತೆಯ ಬಗ್ಗೆ ಬಹು ಬೇಗ ಅರಿತಿದ್ದರೆಂದು ತೋರುತ್ತದೆ. ಅವರು 'ತುಂಗಾ ಪಾನಂ, ಗಂಗಾ ಸ್ನಾನಂ' ಎಂದು ನಾಣ್ಣುಡಿಯನ್ನು ಹುಟ್ಟುಹಾಕಿಬಿಟ್ಟರು. ಆದರೆ ಈ ನಾಣ್ಣುಡಿ ಇಂದು ಜನ್ಮತಾಳಿದ್ದಲ್ಲಿ ಖಂಡಿತ 'ಸ್ನಾನವನ್ನು ಮಾಡಿ' ಎಂದು ಕೂಡ ಹೇಳುತ್ತಿರಲಿಲ್ಲ. ಇಂದಿಗೂ ಸಾಯುವ ಸಂದರ್ಭದಲ್ಲಿ ಪ್ರಾಣ ಬಿಡುತ್ತಿರುವವರ ಬಾಯಿಗೆ 'ಗಂಗಾ ಜಲ'ವನ್ನು ಬಿಡುವ ಸಂಪ್ರದಾಯವಿದೆ. ಉತ್ತರದ ಗಂಗೆಯನ್ನೇ ಗಂಗಾಪಾತ್ರೆಯಲ್ಲಿಟ್ಟು ಕಾಪಾಡಿ- ಅದನ್ನು ಬಾಯಿಗೆ ಬಿಟ್ಟಲ್ಲಿ ಪ್ರಾಣ ಕ್ಷಣಾರ್ಧದಲ್ಲಿ ಹೋಗುವುದರಲ್ಲಿ ಸಂದೇಹವಿಲ್ಲ!

ಆದರೆ ನಮ್ಮ ತುಂಗಾನದಿ ಹಾಗಲ್ಲ. ಇಂದಿಗೂ ಅವಳು ಪರಿಶುದ್ಧಳಾಗಿದ್ದಾಳೆ. ಸಹ್ಯಾದ್ರಿಯ ಗಿರಿಶೃಂಗದಲ್ಲಿ ಜನಿಸಿ, ಕಾಡು ಮೇಡು ಕಣಿವೆಗಳಲ್ಲಿ ಹಾದು ಬರುವಾಗ ಅನೇಕ ಗಿಡಮೂಲಿಕೆಗಳ ಸ್ಪರ್ಶದಿಂದ ಕುಡಿಯಲು ಯೋಗ್ಯಳಾಗುತ್ತಾಳೆ; ಆರೋಗ್ಯವೃದ್ಧಿಗೆ ಸಹಾಯಕಳಾಗುತ್ತಾಳೆ. ಶುಭ್ರತೆ, ಪಾರದರ್ಶಕತೆ ಅವಳ ಲಕ್ಷಣ. ಅದನ್ನು ಗಮನಿಸಿಯೇ ಪುರಂದರದಾಸರು ಅವಳನ್ನು 'ತುಂಗೆ, ಮಂಗಳ ತರಂಗೆ' ಎಂದು ಕರೆದು ಗೌರವಿಸುತ್ತಾರೆ. ಆದರೆ ಇಂದು ನಾವು ಎಚ್ಚರ ತಪ್ಪಿ ಅವಳನ್ನು ಅಮಂಗಳಗೊಳಿಸಿದರೆ, ಅವಳು ಕೂಡ ಗಂಗೆಯಂತಾಗುತ್ತಾಳೆ ಎಂಬ ವಿವೇಕ ನಮ್ಮನ್ನು ಸದಾ ಕಾಡುತ್ತಿರಬೇಕು.

೧೫-೦೭-೨೦೧೦

# ಆಕಾಶಮುಖಿ

ಭೂಮಿಯನ್ನು ಮುಕ್ಕಾಲು ಭಾಗ ಆವರಿಸಿಕೊಂಡಿರುವ ಸಾಗರ ತಳದಲ್ಲಿ ವಿಪುಲವಾದ ಅರಣ್ಯವೇ ಮೇಲ್ಮುಖವಾಗಿ ಬೆಳೆದು ನಿಂತಿದೆ. ಸೂರ್ಯನ ಬೆಳಕು ಅದರ ಚುಂಬಕ ಸೆಳೆತ. ಅದನ್ನು ಮುಟ್ಟಬೇಕು, ಸ್ಪರ್ಶಿಸಬೇಕೆಂಬ ತವಕ. ಆದ್ದರಿಂದಲೇ ನೀರಿನ ಪಾತಾಳದಲ್ಲಿರುವ ನೀರು ಸಸ್ಯವೆಲ್ಲವೂ ಆಕಾಶ ಮುಖಿಯಾಗಲು ಸದಾ ತವಕಿಸುತ್ತಿರುತ್ತದೆ. ಅಲ್ಲೇ ಇರುವ ಪ್ರಾಣಿಗಳೆಲ್ಲವೂ ಮೇಲ್ಮುಖವಾಗಿ ಚಲಿಸಲು ಬಯಸುತ್ತವೆ. ಪೃಥ್ವಿಕೊಳ್ಳವಾಸಿಗಳಾದ ಇವಕ್ಕೆ ಗಾಳಿ ಬೆಳಕನ್ನು ಅಪ್ಪಿಕೊಳ್ಳುವಾಸೆ ಸದಾ ತುಡಿಯುತ್ತಿರುತ್ತದೆ. ಬಹುಶಃ ಇವುಗಳ ಪೂರ್ವಿಕರ್‍ಯಾರೋ ಭೂಮಿ ಮೇಲೆ ಬಂದು ಸೂರ್ಯನ ನೇರ ಶಾಖ ಮತ್ತು ಬೆಳಕನ್ನು ಅನುಭವಿಸಿ ಸಂತತಿ ಸ್ಥಾಪಿಸಿದರೆಂಬ ಸತ್ಯವನ್ನು ಅರಿತಾಗ ಗಗನಮುಖಿತನದ ಇಚ್ಛೆ ಅರ್ಥವಾಗುತ್ತದೆ.

ಇನ್ನು ಭೂಮಿಯ ಮೇಲಿರುವ ಮರ ಗಿಡ ಬಳ್ಳಿಗಳನ್ನು ನೋಡಿದಾಗ, ಅವು ಸದಾ ಆಕಾಶಮುಖಿಗಳೇ. ಅವುಗಳಲ್ಲಿ ಕೆಲವಂತು ಸೂರ್ಯನ ಸ್ಪರ್ಶವಿಲ್ಲದೆ ಹೋದರೆ ಪ್ರಾಣವನ್ನೆ ಕಳೆದುಕೊಳ್ಳುತ್ತವೆ. ಮತ್ತೆ ಕೆಲವು ಕೋಮಲಕಾಯಗಳೂ ಉಂಟು. ಅವಕ್ಕೆ ನೇರ ಶಾಖ-ಸ್ಪರ್ಶ ಬೇಡ. ಆದರೆ ಸೂರ್ಯನ ಬೆಳಕು ಬೇಕು. ಇನ್ನು ದಟ್ಟವಾದ ಅರಣ್ಯಗಳಲ್ಲಿ ಭುವಿಯಿಂದ ನೇರ ಚಿಮ್ಮಿದ ಬಾಣದಂತೆ ಎತ್ತರೆತ್ತರಕ್ಕೆ ಬೆಳೆದ ಮರಗಳು ಸದಾ ಊರ್ಧ್ವಮುಖಿಗಳೇ!

ಈ ಗಗನಮುಖೀ ಬುದ್ಧಿ ಪ್ರಾಣಿಗಳಲ್ಲೂ ಉಂಟು. ಅವು ತಲೆತಗ್ಗಿಸಿ ಮೇವು ಮೇದರೂ ಆಕಾಶದ ಹಂಬಲ ಸದಾ ಇದ್ದೇ ಇರುತ್ತದೆ. ತಮ್ಮ ಸಂತಸದ ಸಮಯದಲ್ಲಿ ನಲಿದು ಕುಣಿದಾಡುವಾಗ, ಕೆನೆದು ಸದ್ದು ಮೂಡಿಸುವಾಗ ಅವು ಆಕಾಶ ಗಮನಿಗಳೇ ಆಗಿರುತ್ತವೆ. ಈ ವಿಷಯದಲ್ಲಿ ಮನುಷ್ಯನೇನೂ ಕಡಿಮೆಯಲ್ಲ; ಅವನು ಎಲ್ಲಕ್ಕಿಂತ ಒಂದು ಕೈ ಮಿಗಿಲಾಗಿ ಆಕಾಶವನ್ನು ಪ್ರೀತಿಸುತ್ತಾನೆ. ಆಕಾಶ ಅವನಿಗೆ ಮುಖ್ಯ ಪ್ರಕೃತಿವಿಶೇಷ. ಅಲ್ಲಿ ಅವನು ಸೌಂದರ್ಯವನ್ನು ಕಾಣುತ್ತಾನೆ. ಹಗಲು ಕಾಣುವ ಸೂರ್ಯ; ಸೂರ್ಯನ ಏರಿಳಿತಗಳಿಂದುಂಟಾಗುವ ವರ್ಣವ್ಯತ್ಯಾಸ; ಅವನ ಬೆಳಕು- ಸಂಜೆಗಳು ಅವನು ಮೋಡಗಳ ಜೊತೆಯಾಡುವ ಕತ್ತಲೆ ಬೆಳಕಿನಾಟಗಳು- ಮನುಷ್ಯನ ಕನಸುಗಳನ್ನು ಬಿತ್ತಿ ಬೆಳೆಸಿವೆ. ಕಲ್ಪನೆಗಳನ್ನು ವಿಸ್ತರಿಸಿವೆ. ಅವನ ಸೃಜನಶೀಲ ಸೃಷ್ಟಿಗೆ ಬೀಜ ಬಿತ್ತಿ ಜ್ಞಾನ-ವಿಜ್ಞಾನಗಳನ್ನು ಅರಳಿಸಿವೆ; ನಾಗರಿಕತೆಗಳು ವಿಕಾಸಗೊಂಡಿವೆ.

ಆಕಾಶ ಮನುಷ್ಯನ ಭೌತಿಕ ಪ್ರತಿಭೆಯನ್ನು ಮಾತ್ರ ವಿಸ್ತರಿಸಿಲ್ಲ. ಅದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಅವನ ಬೌದ್ಧಿಕ-ಆಧ್ಯಾತ್ಮಿಕ ಶೋಧಕ್ಕೆ ಅದು ಮೂಲವಾಯಿತು.

ಗ್ರಹ-ಉಪಗ್ರಹಗಳ ಮೂಲ ಹುಡುಕಲು, ನಕ್ಷತ್ರಗಳ ರಹಸ್ಯವನ್ನು ಭೇದಿಸಲು ಆಕಾಶದ ಬಗೆಗಿನ ಅವನ ಕುತೂಹಲವೇ ಮೂಲವಾಯಿತು. ಅದರ ಮತ್ತೊಂದು ಮಗ್ಗುಲೆಂಬಂತೆ ಅವನ ಕಲ್ಪನೆಗಳು ವಿಸ್ತರಿಸಿ ಸ್ವರ್ಗ ನರಕಗಳು- ಲೋಕ ಕಲ್ಪನೆಗಳು ಬೆಳೆದವು. ಆ ಲೋಕಗಳಲ್ಲಿ ಜೀವಿಗಳನ್ನು ಕಲ್ಪಿಸಿಕೊಂಡು, ಕಾವ್ಯ ಪುರಾಣಗಳನ್ನು ಬರೆಯಲಾಯಿತು. ಅವುಗಳಿಗೆ ಬೆನ್ನೆಲುಬಾಗಿರಲೆಂಬಂತೆ ತತ್ತ್ವಸಿದ್ಧಾಂತಗಳನ್ನು ಹೆಣೆಯಲಾಯಿತು. ತಾನೇ ಹೆಣೆದ ಈ ಕಲ್ಪನಾ ಸಿಕ್ಕುಗಳಲ್ಲಿ ತಾನೇ ಬಂಧಿತನಾಗಿ, ಆತಂಕ, ನೋವು, ನಲಿವುಗಳಲ್ಲಿ ಮುಳುಗಿಹೋದನು. ಈ ಎಲ್ಲ ವಾಸ್ತವ-ಕಲ್ಪನಾ ಪ್ರಪಂಚದ ನಡುವೆ- ಆಕಾಶ ಸದಾ ಸವಾಲಾಗಿ, ಶೋಧಕ್ಕೆ ಕೈ ತೆರೆದು ಸದಾ ಸ್ವಾಗತಿಸುವ ನಿಗೂಢವಾಗಿ ನಿಂತು ಅಧ್ಯಾತ್ಮದ ಪ್ರಶ್ನೆಯಾಗಿಯೇ ನಿಂತುಬಿಟ್ಟಿತು. ಈ ಎಲ್ಲ ಸವಾಲುಗಳ ನಡುವೆ ಕಣ್ಣಿಗೆ ಕಾಣುವ ಸತ್ಯವೆಂಬಂತೆ ಸೂರ್ಯ ಮಾತ್ರ ಇರುತ್ತಾನೆ.

ಭಾರತದ ಅಧ್ಯಾತ್ಮ ಪ್ರಪಂಚ ಮತ್ತು ಗ್ರಾಮೀಣ ಬದುಕಿನಲ್ಲಿ ತಲೆ ಎತ್ತಿ ನಡೆಯುವುದನ್ನು ಸ್ವಾಭಿಮಾನದ ಸಂಕೇತವೆಂದು ಗುರುತಿಸಲಾಗಿದೆ. ತಲೆ ಬಗ್ಗಿಸುವುದು ಗುಲಾಮಗಿರಿಯ ಸೂಚನೆಯೆಂದು ತಿಳಿಯಲಾಗಿದೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ, ಮತೀಯ ವ್ಯವಸ್ಥೆಯಲ್ಲಿ ತಲೆತಗ್ಗಿಸಿ ನಿಲ್ಲುವುದು, ವಂದಿಸುವುದು ಗೌರವದ, ಭಯ ಭಕ್ತಿಗಳ ಅಭಿವ್ಯಕ್ತಿಯೆಂದು ಬೋಧಿಸಲಾಗಿದೆ. ಕೆಲವು ಸಂಪ್ರದಾಯಸ್ಥ ಕುಟುಂಬಗಳು ಈ ಸಂಪ್ರದಾಯವನ್ನೇ ಮೌಲ್ಯವೆಂದು ಭಾವಿಸಿ ತಮ್ಮ ಮಕ್ಕಳಿಗೆ ಸದಾ ತಗ್ಗಿ ಬಗ್ಗಿ ನಡೆಯಬೇಕೆಂದು ಆಜ್ಞೆ ಮಾಡುತ್ತಿರುತ್ತಾರೆ.

ರಾಮಮನೋಹರ ಲೋಹಿಯಾ ಅವರು ನಾವು ಸದಾ ಸವಾಲುಗಳಿಗೆ ಎದೆಯೊಡ್ಡಿ ನಿಂತಿರುವ ಪರ್ವತ ಶಿಖರಗಳಂತಿರಬೇಕೇ ಹೊರತು, ತುಸು ಗಾಳಿಗೂ ಹೆದರಿ ತಲೆ ತಗ್ಗಿಸಿ ಬಾಗುವ ಗರಿಕೆಯಂತಿರಬಾರದೆಂದು ಹೇಳುತ್ತಾರೆ. ಸಾವಿರಾರು ವರ್ಷಗಳಿಂದ ಬಾಳಿ ಬಂದಿರುವ ಸಂಸ್ಕೃತಿ ನಮ್ಮದೆಂದು ಬೀಗುವುದರಲ್ಲಿ ವಿಶೇಷತೆಯಿಲ್ಲ; ಆತ್ಮಾಭಿಮಾನದಿಂದ ತಲೆ ಎತ್ತಿ ಬಾಳಿ ಬದುಕು ಮಾಡಿದ್ದೇವೆಂಬುದು ಅತಿ ಮುಖ್ಯವಾಗುತ್ತದೆ. ಸದಾ ಪರಕೀಯ ದಾಳಿಗೆ ತಲೆ ಬಗ್ಗಿಸಿ ನೆಲಹಾಸು ಹಾಸಿದ ಭಾರತೀಯ ಸಂಸ್ಕೃತಿ ಬಗ್ಗೆ ಚಿಂತನೆ ಮಾಡಬೇಕಿದೆ.

೨೯-೦೭-೨೦೦೦

# ಕೋಗಿಲೆ ದನಿಯ ಹಿಂದಿನ ಕ್ರೌರ್ಯ

ನಮ್ಮ ಪರಿಸರದಲ್ಲಿ ಗೋಮುಖ ವ್ಯಾಘ್ರ ವ್ಯಕ್ತಿತ್ವವೊಂದು ಸದಾ ಸುತ್ತಮುತ್ತ ಸುಳಿದಾಡುತ್ತಿರುತ್ತದೆ. ಅದರ ಅನುಭವ ಸೂಕ್ಷ್ಮ ಸಂವೇದನಾ ಮನಸ್ಥಿತಿಯ ವ್ಯಕ್ತಿಗಳಿಗೆ ಆಗುತ್ತದೆ. ಅದು ನಗುವಿನ ಹಿಂದಿರುವ ಶಕುನಿತನ. ಈ ಶಕುನಿತನವನ್ನು ದುಷ್ಟವೆಂದು ಅರ್ಥ ಮಾಡಿಕೊಳ್ಳುವುದರಲ್ಲಿ ಮುಗ್ಧ ಶ್ರೀಸಾಮಾನ್ಯತೆಗೆ ಕಷ್ಟವಾಗುತ್ತದೆ. ಅರ್ಥವಾಗುವಷ್ಟರಲ್ಲಿ ಶಕುನಿತನ ತನ್ನ ಕತ್ತಿಯನ್ನು ನಗುನಗುತ್ತಲೇ ಜಳಪಿಸಿ ಹಿಂಸೆ ಕೊಟ್ಟಿರುತ್ತದೆ. ಇತರರಿಗಿರಲಿ, ಸ್ವತಃ ಸುಯೋಧನನಿಗೆ ತನ್ನ ಮಾವ ಶಕುನಿಯ ಆಂತರ್ಯವನ್ನು ಅರ್ಥ ಮಾಡಿಕೊಳ್ಳಲಾಗಲಿಲ್ಲ; ಅವನಲ್ಲಿ ಅಡಗಿರುವ ಪಿತೂರಿಯನ್ನು ಅರಿಯಲಾಗದೆ ದುರಂತವನ್ನು ಕಂಡ. ಆದರೆ ಶಕುನಿಗೆ ಸಮಾನಾಂತರವಾದ, ದುರ್ಯೋಧನನ ಜೊತೆಯಲ್ಲಿಯೇ ಕಷ್ಟಸುಖವನ್ನು ಹಂಚಿಕೊಂಡ ಕರ್ಣನನ್ನು ಅವಲೋಕಿಸಿರಿ. ಧೀರೋದಾತ್ತ ವ್ಯಕ್ತಿ; ಒಳಗೊಂದು ಹೊರಗೊಂದು ಇಲ್ಲದ ವ್ಯಕ್ತಿ! ನೇರ ನಡೆ ನುಡಿ, ಸತ್ಯನಿಷ್ಠೆ. ಸ್ವಾಮಿನಿಷ್ಠೆಯಲ್ಲಿ ಯಾರಿಗೂ ಎರಡನೆಯವನಲ್ಲ. 'ಜೋಳದ ಪಾಳಿ'ಗೆ ಬದ್ಧನಾಗಿ ಕ್ಷಾತ್ರಧರ್ಮವನ್ನು ಮೆರೆದು ಯುದ್ಧಭೂಮಿಯಲ್ಲಿ ಅಸುನೀಗಿದ. ಪಂಪ 'ಭಾರತದಲ್ಲಿ ಯಾರನ್ನು ಮರೆತರೂ ಕರ್ಣನನ್ನು ನೆನೆಯಿರಿ' ಎಂದು ನುಡಿಯುತ್ತಾನೆ. ಹಾಗೆ ನೋಡಿದರೆ ಕರ್ಣನು ಕೂಡ ದುಷ್ಟ ಚತುಷ್ಟಯರಲ್ಲಿ ಒಬ್ಬ. ಆದರೆ ವ್ಯಕ್ತಿತ್ವದಲ್ಲಿ ನೇರ, ಪಾರದರ್ಶಕ; ಮುಖವಾಡವಿಲ್ಲದ ಬದುಕು! ಅವನೆಂದೂ ರಕ್ತ ಸಂಬಂಧಕ್ಕೆ ಮೋಹಿತನಾಗಿ ಸ್ವಾಮಿದ್ರೋಹ ಮಾಡಲಿಲ್ಲ. ಅದನ್ನು ತನ್ನ ಹೆತ್ತ ತಾಯಿಯ ಮುಂದೆ ಘೋಷಿಸಿಕೊಳ್ಳುತ್ತಾನೆ. ಆದರೆ ಶಕುನಿ ಅಂಥವನಲ್ಲ. ನಗು ನಗುತ್ತಲೇ ನರಿಯ ರೀತಿ ವರ್ತಿಸಿ, ನಂಬಿಸಿ, ಪಾತಾಳದತ್ತ ಕರೆದೊಯ್ಯುತ್ತಾನೆ.

ಇದು ಕೇವಲ ಮನುಷ್ಯಲೋಕದ ಡಾಂಬಿಕ ವರ್ತನೆಯೆಂದು ತಿಳಿಯಬೇಕಿಲ್ಲ. ಸಸ್ಯಲೋಕದ ಅನೇಕ ಗಿಡ ಬಳ್ಳಿಗಳು ನಳನಳಿಸುತ್ತಲೇ ಇತರೆ ಗಿಡಮರಗಳ ರಸ ಹೀರಿ ಲೋಕ ಮಾನ್ಯತೆಗಳಿಸುತ್ತವೆ. ಇವುಗಳಲ್ಲೆಲ್ಲಾ ಶ್ರೀಗಂಧ ಅತ್ಯಂತ ಮೋಸಗಾರ ಸಸ್ಯ.

ಶ್ರೀಗಂಧ ಕನ್ನಡಿಗರಿಗೆ ಅತ್ಯಂತ ಪ್ರಿಯವಾದ ಮರ. ಶ್ರೀಗಂಧದ ಉಲ್ಲೇಖವಿಲ್ಲದೆ, ಸ್ಪರ್ಶವಿಲ್ಲದೆ ಕನ್ನಡನಾಡಿನ ವರ್ಣನೆ ಇಲ್ಲವೆಂಬಂತೆ ಅದು ನಮ್ಮ ದೇಸೀ ಸಂಸ್ಕೃತಿಯ ಅಂಗವೇ ಆಗಿಹೋಗಿದೆ. ಈ ಸಿರಿಗಂಧದ ಲೇಪನದಿಂದ, ಅದರ ಸುವಾಸನೆಯಿಂದ ಕನ್ನಡಿಗರು ಬೀಗುತ್ತಾರೆ; ಆತ್ಮಾಭಿಮಾನದಿಂದ ಅದು 'ತಮ್ಮದೆಂದು' ಹೇಳಿಕೊಂಡು ನಲಿಯುತ್ತಾರೆ. ಆದರೆ ಈ ಸುಗಂಧಿತ ಗುಣದ ಮರ ಎಂಥ ಸ್ವಾರ್ಥಿ ಎಂದರೆ- ಅದು ತನ್ನ ಸುತ್ತಮುತ್ತ ಯಾವ ಮರಗಿಡಗಳ

ಬೇರೂ ಬದುಕದಂತೆ ಮಾಡುತ್ತದೆ. ಪರಾವಲಂಬಿ ಸಸ್ಯಗಳಾದರೋ ಕಣ್ಣಿಗೆ ಕಾಣುವಂತೆ ಬೇರೆ ಮರದ ಪೊಟರೆಗೋ ತೂತಿಗೋ ಆತುಕೊಂಡು ಬೇರು ಬಿಟ್ಟು ರಸ ಹೀರುತ್ತವೆ. ಶ್ರೀಗಂಧ ಹಾಗಲ್ಲ. ಸ್ವತಂತ್ರ ಮರದಂತೆ ಕಂಗೊಳಿಸುತ್ತದೆ. ಸಮಾಜದ ಗೌರವ ಪ್ರೀತಿಗಳಿಗೆ ಪಾತ್ರವಾಗಿ ಅಂತರಂಗದಲ್ಲಿ ನಿಗೂಢವಾಗಿ ಕ್ರೂರವಾದ ಕೆಲಸದಲ್ಲಿ ತೊಡಗಿರುತ್ತದೆ! ತನ್ನ ಘಾತಕ ಬೇರುಗಳನ್ನು ಇತರೆ ಮರಗಿಡಗಳ ಬೇರುಗಳೊಳಕ್ಕೆ ನುಗ್ಗಿಸಿ, ಆ ಮರ ಗಿಡಗಳಿಗೆ ಹೋಗುವ ರಸವನ್ನೆಲ್ಲಾ ಹೀರಿ ತಾನು ಪುಷ್ಟಗೊಳ್ಳುತ್ತದೆ. ತನ್ನ ಸುತ್ತಮುತ್ತಲಿನ ಮರಗಿಡಗಳು ನೋಡು ನೋಡುತ್ತಿರುವಂತೆಯೇ ಸೊರಗುವಂತೆ, ಸೀಕಲಾಗುವಂತೆ ಮಾಡುತ್ತದೆ. ಇದರದು ಕೂಡ ಗೋಮುಖ ವ್ಯಾಘ್ರ ವ್ಯಕ್ತಿತ್ವವೇ ಅಲ್ಲವೆ?

ಕಾಡಿನ ಪ್ರಾಣಿಗಳು ಈ ಗುಣದಿಂದ ಹೊರತಲ್ಲ. ಚಿರತೆಯ ಬೇಟೆಯನ್ನು ಕದಿಯುವ ಹುಲಿ ಸಿಂಹ, ಹುಲಿ ಸಿಂಹಗಳ ಬೇಟೆಗೆ ಸದಾ ಹೊಂಚುಹಾಕುವ ನರಿಗಳು- ಕತ್ತೆಕಿರುಬಗಳು ಖದೀಮತನಕ್ಕೆ ಉದಾಹರಣೆಗಳು, ಅಷ್ಟೆ. ಸೂಕ್ಷ್ಮಾತಿಸೂಕ್ಷ್ಮ ಜೀವಕೋಟಿಗಳಲ್ಲಿ ಬದುಕುವುದಕ್ಕೆ ನಿರಂತರ ನಡೆಯುತ್ತಿರುವ ಹೋರಾಟದಲ್ಲಿ ಒಂದನ್ನೊಂದು ತಿಂದು, ವಂಚಿಸಿ ಜೀವಜಾಲದ ಆಟ ನಡೆಯುತ್ತಿರುತ್ತದೆ. ಅದರಲ್ಲಿ ಮನಕಲಕುವ ಕ್ರೌರ್ಯವೆಂದರೆ ಕೋಗಿಲೆಯದು. ಸ್ವಂತ ಗೂಡು ಕಟ್ಟಲರಿಯದ, ವರ್ಷಪೂರ್ತಿ ಕಾಣಿಸಿಕೊಳ್ಳದ, ಎರಡು ಮೂರು ಬಗೆಯ ಮೋಸದ ದನಿ ಹೊರಡಿಸುವ ಕೋಗಿಲೆ ಅಂಥ ಸುಂದರವಾದ ಪಕ್ಷಿಯೇನಲ್ಲ. ಕಾಗೆಯ ತಮ್ಮನಂತೆ ತೋರುತ್ತದೆ. ಕಣ್ಣು ಮಾತ್ರ ರವ ರವ ಕೆಂಪು. ಮುಖಹೇಡಿಯಂತೆ ಎಲೆಗಳ ಮರೆಯಲ್ಲಿ ನೆಗೆದಾಡುತ್ತಿರುತ್ತದೆ. ಗಂಡು ಹೆಣ್ಣಿಗಿಂತ ಸುಂದರವೆನ್ನಬಹುದು- ತನ್ನ ಗರಿಗಳ ವಿಭಿನ್ನತೆಯಿಂದ. ಆದರೆ ಇದರ ದನಿಗೆಂಥ ಮಾದಕತೆ ಇದೆ? ಎಂಥವರ ಎದೆಯನ್ನು ಕ್ಷಣಾರ್ಧದಲ್ಲಿ ಆರ್ದ್ರಗೊಳಿಸುವ ಶಕ್ತಿ! ಅದಕ್ಕೇ ನಮ್ಮ ಪಂಪನಿಗೆ ಕೋಗಿಲೆಯೆಂದರೆ ಪಂಚಪ್ರಾಣ. ಮರುಜನ್ಮವೊಂದಿದ್ದರೆ 'ಕೋಗಿಲೆಯಾಗಿ ಜನಿಸುವ' ಬಯಕೆ ಅವನದು.

ಆದರೆ ಅದರ ದನಿಯ ಹಿಂದಿರುವ ಅದರ ಮನದಲ್ಲಿ ಎಂಥ ಕ್ರೌರ್ಯವಿದೆಯೆಂದು ಅರಿತಾಗ ನಮ್ಮ ಎದೆಯೊಡೆಯುತ್ತದೆ. ಕಾಗೆಯ ಗೂಡಿನಲ್ಲಿ ಕಳ್ಳತನದಿಂದ ಮೊಟ್ಟೆ ಇಟ್ಟು ಮಾಯವಾದ ಕೋಗಿಲೆಯಮ್ಮನ ಮರಿ ಕೋಗಿಲೆ- ಕಾಗೆಯಿಂದಲೇ ಗುಟುಕು ಪಡೆದು ಬೆಳೆದು ಕಾಗೆಯ ಮೊಟ್ಟೆಗಳನ್ನು ತಳ್ಳಿ ಗೂಡಿನಿಂದ ಕೆಳಗೆ ಬೀಳಿಸುತ್ತದೆ; ಮರಿಗಳನ್ನು ಕೆಳಕ್ಕೆ ತಳ್ಳಿ ಸಾಯಿಸುತ್ತದೆ. ಇದೆಂಥ ಕ್ರೌರ್ಯ! ಇದೆಂಥ ಪ್ರಕೃತಿ ಚೋದ್ಯ? ಇದೆಂಥ ನ್ಯಾಯ?

೧೨-೦೮-೨೦೧೦

# ಸರ್ಕಾರದ ಕೆಲಸ ದೇವರ ಕೆಲಸ

ಸ್ವಾತಂತ್ರ್ಯ ಪೂರ್ವದ ನಮ್ಮ ಹಿರಿಯರಿಗೆ ಒಂದು ದೊಡ್ಡ ಕನಸಿತ್ತು: ನಮಗೆ ಸ್ವಾತಂತ್ರ್ಯ ಬಂದ ಮೇಲೆ ನಮ್ಮನ್ನು ನಾವು ಆಳಿಕೊಳ್ಳುತ್ತೇವೆ; ನಮಗೆಲ್ಲರಿಗೂ ಅಕ್ಷರಜ್ಞಾನ ಸಿಗುತ್ತದೆ. ಆದರಿಂದ ನಮ್ಮ ಅರಿವು ವಿಸ್ತಾರಗೊಳ್ಳುತ್ತದೆ. ನಾವೇ ಸರ್ಕಾರಿ ನೌಕರರೂ, ಅಧ್ಯಾಪಕರೂ, ಕಾರ್ಮಿಕರೂ, ರಾಜಕಾರಣಿಗಳೂ ಆಗುತ್ತೇವೆ. ನಮ್ಮ ಅರಿವಿನ ಕಾರಣದಿಂದಾಗಿ ನಾವು ಯಾರನ್ನೂ ಶೋಷಣೆ ಮಾಡುವುದಿಲ್ಲ; ಭ್ರಷ್ಟಾಚಾರವೆಸಗುವುದಿಲ್ಲ; ಜಾತೀಯತೆಯನ್ನು ಆಚರಿಸುವುದಿಲ್ಲ; ನಾವೆಲ್ಲರೂ ಸಮಾನರು- ಸಮಾನತೆ ನಮ್ಮ ಮಂತ್ರ, ಆಶಯ, 'ಕಟ್ಟುವೆವು ನಾವು ಹೊಸ ನಾಡೊಂದನು' ಎಂಬ ಆದರ್ಶದಲ್ಲಿ ಆ ಹಿರಿಯರು ಹೋರಾಡಿ ದೇಶಕ್ಕೆ ಸ್ವಾತಂತ್ರ್ಯ ದಕ್ಕಿಸಿಕೊಟ್ಟರು. ಆದರೆ ಆರು ದಶಕಗಳ ನಮ್ಮ ಸ್ವಾತಂತ್ರ್ಯ ಜೀವನದಲ್ಲಿ ನಮ್ಮ ಹಿರಿಯರು ಕಂಡ ಆದರ್ಶದ ಕನಸು ಪಡೆದಿರುವ ರೂಪವನ್ನು ಕಂಡರೆ ಎಂಥವರಿಗೂ ಆತಂಕವಾಗುತ್ತದೆ. ಕನಸು ಕಾಣುವುದು ಕೂಡ ಭ್ರಮೆಯೇನೋ ಎಂಬ ಭಯ ಮೂಡುತ್ತದೆ.

ಇಂದು ನಮ್ಮನ್ನು ನಾವೇ ಶೋಷಣೆ ಮಾಡುತ್ತಿದ್ದೇವೆ. ನಾವು ಕೆಲಸ ಬಯಸುತ್ತೇವೆ; ಗೌರವಯುತವಾದ ವೇತನ ಬಯಸುತ್ತೇವೆ. ಆದರೆ ಅದಕ್ಕೆ ನಿಷ್ಠರಾಗಿ ದುಡಿಯಲು ನಾವು ಸಿದ್ಧರಿಲ್ಲ. ನಾವು ಮಾಡುವ ಕೆಲಸ ಸಮುದಾಯಕ್ಕೆ ಹಿತವಾಗುವಂತಿರಬೇಕು; ನಮ್ಮ ಆತ್ಮ ಮೆಚ್ಚುವಂತಿರಬೇಕು ಎಂಬ ಕಾಯಕನಿಷ್ಠೆ ನಮಗೆ ಮರೆತುಹೋಗಿದೆ. ಬಸವಧರ್ಮ ಇಂದು ಹುಸಿಯಾಗುವ ಹಂತಕ್ಕೆ ತಲುಪಿದೆ. ಯಾವುದೇ ಕೆಲಸವನ್ನು ಮಾಡಬೇಕಾದ ಹಂತದಲ್ಲಿ 'ಅಯ್ಯೋ ಮಾಡಬೇಕಲ್ಲ. ಅಯ್ಯೋ ಯಾರು ಮಾಡುತ್ತಾರೆ' ಎಂಬ ಉದಾಸೀನ ಭಾವ ಮನೆಮಾಡಿಕೊಳ್ಳುತ್ತಿದೆ. ಅಷ್ಟೋ ಇಷ್ಟೋ ಮಾಡುವ ಕೆಲಸದಲ್ಲಿ ಕಾಟಾಚಾರ ಎದ್ದು ಕಾಣುತ್ತಿದೆ. ಅದನ್ನೇ ಬಸವಣ್ಣ ತನ್ನ ವಚನವೊಂದರಲ್ಲಿ ಈ ರೀತಿ ವಿಡಂಬಿಸುತ್ತಾನೆ :

**ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ಕೆಟ್ಟರು ನಿಜವಿಲ್ಲದೆ**
**ಮಾಡುವ ನೀಡುವ ನಿಜಗುಣ ಉಳ್ಳಡೆ**
**ಕೂಡಿಕೊಂಬ ಕೂಡಲ ಸಂಗಮದೇವ**

ಕರ್ತವ್ಯದಲ್ಲಿ ನಿಷ್ಠೆ, ಶ್ರದ್ಧೆ ಇಲ್ಲದೆ ಮಾಡುವ ಕೆಲಸವು ಪ್ರಯೋಜನಕ್ಕೆ ಬಾರದು. ಅದು ಶಿವ ಮೆಚ್ಚುವ ಕಾಯಕವಾಗದು. ಇಂದು ನಮ್ಮ ನೌಕರ- ಅಧಿಕಾರಿಶಾಹಿ ಜನರು, ವರ್ತಕರು ಮತ್ತು ರಾಜಕಾರಣಿಗಳು ತಮ್ಮ ದುಡಿಮೆಯಲ್ಲಿ 'ಮನ'ವಿಲ್ಲದವರು; ನಡೆಯಲ್ಲಿ 'ನಿಜ'ವಿಲ್ಲದವರು. ಆದ್ದರಿಂದಲೇ ಭ್ರಷ್ಟಾಚಾರ ಇಂದು ನಮ್ಮ ಸುತ್ತಮುತ್ತ ತಾಂಡವವಾಡುತ್ತಿದೆ.

ಹೌದು. ಇದನ್ನೆಲ್ಲಾ ಮಾಡುತ್ತಿರುವವರು ಯಾರು? ನಾವೇ! ನಮ್ಮವರೇ! ಅದು ಯಾರಿಗೆ? ನಮಗೇ! ನಮ್ಮವರಿಗೇ! ಇದೊಂದು ಬಗೆಯ ಆತ್ಮದ್ರೋಹದ, ದೇಶದ್ರೋಹದ ಕೆಲಸ. ಸಮುದಾಯದ ಕೈತುತ್ತಿನಿಂದ ಬೆಳೆದ ನಾವು ಆ ಸಮುದಾಯವನ್ನೇ ಶೋಷಿಸಹೊರಡುವುದು ಎಂಥ ದುರಂತ? ಇದನ್ನು ನಮ್ಮ ಪಾಲ್ಕುರಿಕೆ ಸೋಮನಾಥನ ಮಾತುಗಳಿಂದ ವಿಶದೀಕರಿಸಬಹುದು: 'ಧರೆ ಬೀಜಂಗಳ ನುಂಗೆ, ಬೇಲಿ ಹೊಲನೆಲ್ಲಂ ಮೇದೊಡಂ, ಗಂಡ ಹೆಂಡಿರನತ್ಯುಗ್ರದಿ ಶಿಕ್ಷಿಸಲ್, ಪ್ರಜೆಗಳಂ ಭೂಪಾಲಕಂ ಬಾಧಿಸಲ್, ತರುವೇ ಪಣ್ಗಳಂ ಮೆಲ್ಲೆ, ಮಾತೆ ವಿಷಮಂ ಪೆತ್ತರ್ಭಗೂಡಿಸಲ್, ಹರಕೊಲ್ಲಲ್ ಪರಕಾಯ್ವನೇ ಹರಹರ ಶ್ರೀ ಚನ್ನಸೋಮೇಶ್ವರಾ.' ನಮ್ಮ ದೇಶವಾಸಿಗಳನ್ನು ಅವರ ಮಕ್ಕಳೇ ಶೋಷಿಸುತ್ತಿರುವ ಪರಿಯನ್ನು ಇದಕ್ಕಿಂತ ಚೆನ್ನಾಗಿ ಹೇಳಲು ಸಾಧ್ಯವೆ? ಸೋಮನಾಥನ ಮಾತುಗಳು ನಮ್ಮ ಒಳಗಣ್ಣನ್ನು ತೆರೆಸಬೇಕಾಗಿದೆ.

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರು ವಿಧಾನಸೌಧವನ್ನು ಕಟ್ಟಿಸಿ ಅದರ ಹೆಬ್ಬಾಗಿಲ ಮೇಲು ಭಾಗದಲ್ಲಿ 'ಸರ್ಕಾರದ ಕೆಲಸ ದೇವರ ಕೆಲಸ' ಎಂದು ಬರೆಸಿದರು. ಸರ್ಕಾರದ ಕೆಲಸವನ್ನು ನಿಷ್ಠೆ ಮತ್ತು ಭಯ ಭಕ್ತಿಗಳಿಂದ ಮಾಡಬೇಕೆಂಬುದು, ಅದರಲ್ಲಿ ಲೋಪವಾದರೆ ದೇವರು ಮೆಚ್ಚುವುದಿಲ್ಲವೆಂಬುದೂ ಅದರ ಆಶಯವಾಗಿತ್ತು. ಆದರೆ ನಮ್ಮನ್ನಾಳುವ ಕಾರ್ಯಾಂಗ ಮತ್ತು ಶಾಸಕಾಂಗಗಳು ಅದನ್ನು ಮತ್ತೊಂದು ರೀತಿಯಲ್ಲಿ ಅರ್ಥ ಮಾಡಿಕೊಂಡಂತೆ ತೋರುತ್ತದೆ. 'ದೇವರ ಪೂಜೆಯನ್ನು ಹೇಗೆ ಬೇಕಾದರೂ ಮಾಡಬಹುದು. ಅದ್ದೂರಿ ಆಡಂಬರ ವೈಭವಗಳಿಂದಲೂ ಆಚರಿಸಬಹುದು ಅಥವಾ ಒಂದು ತುಳಸಿದಳದಿಂದಲೂ ಮಾಡಬಹುದು. ಅದರಂತೆಯೇ ಸರ್ಕಾರಿ ಕೆಲಸವು ದೇವರ ಕೆಲಸವಾದ್ದರಿಂದ ಸಮಯಪ್ರಜ್ಞೆ, ಕಾರ್ಯದಕ್ಷತೆಯಿಂದ ಮಾಡಿದರೂ ಆಗುತ್ತದೆ ಅಥವಾ ಕಾಟಾಚಾರದಿಂದ ಅಲ್ಪ ಸ್ವಲ್ಪ ಮಾಡಿದರೂ ಆಗುತ್ತದೆ'- ಎಂದು ಕೆಲಸ ಮಾಡದೆಯೇ ಉದ್ಯೋಗಿಯಾಗಲು ತೊಡಗಿದವು. ಇಂದು ಇಂಥ ವೈಚಿತ್ರ್ಯದಲ್ಲಿ ನಾವು ಬದುಕುತ್ತಿದ್ದೇವೆ. ಹಿರಿಯರ ಕನಸುಗಳನ್ನು ನೆಲಸಮಗೊಳಿಸುತ್ತಾ ಯಾರೋ ಪುಣ್ಯಾತ್ಮರು ತಂದುಕೊಟ್ಟ ಸ್ವಾತಂತ್ರ್ಯವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದೇವೆ.

ಮೇಲಿನ ನನ್ನ ಮಾತುಗಳು ನೈರಾಶ್ಯನೆಲೆಯಿಂದ ಬಂದಂತೆ ತೋರುವುದು ನಿಜ. ಆದರೆ ನಾವು ನಿರಾಶರಾಗಬೇಕಿಲ್ಲ. ಉಚಿತಾನುಚಿತ ವಿವೇಕವನ್ನು ನಾವು ರೂಢಿಸಿಕೊಂಡು, ನಮ್ಮ ಬುದ್ಧಿಗೆ ಬಡಿದಿರುವ ಕಲ್ಮಶವನ್ನು ತೊಡೆದುಕೊಂಡು ನಮ್ಮ ದೇಶಕ್ಕಾಗಿ ದುಡಿಯಬೇಕಾದ ಸಂಕಲ್ಪ ಮಾಡಬೇಕಿದೆ. ಅದಕ್ಕೆ ಬೇಕಾಗಿರುವುದು ನಮ್ಮ ಆತ್ಮದ ಎಚ್ಚರ. ಈ ಎಚ್ಚರವನ್ನು ತಂದು ಕೊಡುವ ಅತ್ಯುತ್ತಮ ಕೀಲಿ ಕೈಗಳನ್ನು ನಮ್ಮ ಹಿರಿಯರಾದ ಗಾಂಧಿ, ವಿವೇಕ, ಬುದ್ಧ, ಬಸವ, ಕುವೆಂಪು ಅವರು ತೋರಿಸಿದ್ದಾರೆ. ಅದನ್ನು ಗುರುತಿಸುವ ಕಣ್ಣು ನಮ್ಮಲ್ಲಿ ಮೂಡಬೇಕಿದೆ.

೨೬-೦೮-೨೦೧೦

# ಭಿಕ್ಷೆ ಮತ್ತು ಬಾಯಾರಿಕೆ

ಭಿಕ್ಷಾಟನೆ ನಮ್ಮ ಅಹಂಕಾರ ನಿರಶನಗೊಳಿಸುವ ಅತ್ಯಂತ ಉತ್ತಮ ಮಾರ್ಗವೆಂದು ಅಧ್ಯಾತ್ಮ ರಂಗದಲ್ಲಿ ಭಾವಿಸಲಾಗಿದೆ. ನಮ್ಮೊಳಗಿರುವ ಜಾತಿ ಮದ, ಶ್ರೀಮಂತಿಕೆಯ ಮದ, ಯೌವ್ವನದ ಮದಗಳು ನಮ್ಮನ್ನು ಇತರರ ಬಳಿ ಯಾಚಿಸುವುದನ್ನು ತಡೆಹಿಡಿಯುತ್ತವೆ. ಅವುಗಳನ್ನು ಮೀರಿ ಅನ್ನ ಬೇಡಿ ತಿನ್ನುವ ಕ್ರಿಯೆಗೆ ವ್ಯೈಮನಗಳನ್ನು ಅಣಿಗೊಳಿಸಿಕೊಳ್ಳಬೇಕಾಗುತ್ತದೆ. ಆಗ ಸಮಾಜ ಭಿಕ್ಷುವಿನ ಅಂತರಂಗ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವ ಕ್ರಿಯೆಗೆ ಹೋಗದೆ, ಅವನ ವಯಸ್ಸು, ದೈಹಿಕ ಶಕ್ತಿಗಳನ್ನು ಗಮನಿಸಿ ದುಡಿದು ತಿನ್ನದೆ ಭಿಕ್ಷೆ ಬೇಡುತ್ತಿರುವ ರೀತಿಗೆ ಹಂಗಿಸುತ್ತದೆ; ಹೀಯಾಳಿಸುತ್ತದೆ; ಅವಮಾನಿಸುತ್ತದೆ. ಈ ಹಂತದಲ್ಲಿ ವ್ಯಕ್ತಿಯ ಅಂತರಂಗದಲ್ಲಿರಬಹುದಾದ ಸ್ವಾಭಿಮಾನವು ಅಹಂಕಾರದ ರೂಪ ತಾಳಿ ಪ್ರತಿಭಟಿಸಲು ಯತ್ನಿಸುತ್ತದೆ. ಆ ಸಂದರ್ಭದಲ್ಲಿ ಜನಿಸುವ ಅಹಂಕಾರವನ್ನು ಅದುಮಿಟ್ಟುಕೊಳ್ಳುವ ಸ್ಥಿತಿಯನ್ನು ಭಿಕ್ಷಾಟನೆ ತಂದುಕೊಡಬೇಕು. ಅಂದರೆ, ಅಧ್ಯಾತ್ಮದ ಸಾಧನೆಯ ಹಾದಿಯಲ್ಲಿ ಭಿಕ್ಷಾಟನೆ ಸಂಯಮ ಕಲಿಸುವ, ನಿರ್ಗುಣಗೊಳಿಸುವ ಮುಖ್ಯವಾದ ಕಲಿಕೆಯ ಮಾರ್ಗವೆಂದು ತಿಳಿಯಬೇಕು.

ಪ್ರಕೃತಿ ತಾಯಿಯ ಇನ್ನಿತರ ಮಕ್ಕಳಾದ ಪ್ರಾಣಿಗಳು ಆಹಾರವನ್ನು ಕೂಡಿಡುವುದಿಲ್ಲ. ಅಂದಂದಿನ ಆಹಾರವನ್ನು ಅಂದಂದೇ ಸಂಪಾದಿಸಿ ಅಂದಂದೇ ತಿಂದು ನಿರಾಳವಾಗಿರುತ್ತವೆ. ನಿಜವಾದ ಭಿಕ್ಷು ತನಗೆಷ್ಟು ಆಹಾರ ಬೇಕೋ ಅಷ್ಟನ್ನು ಬೇಡಬೇಕು, ನಾಳೆಗೆ ಇಡಬಾರದು. ಕೂಡಿಡುವುದು ಅಥವಾ ನಾಳೆಗೆ ಇಡುವುದು ಆಸೆಯ ಸಂಕೇತ. ಅದು ಮತ್ತೊಬ್ಬರ ಆಹಾರವನ್ನು ಬಚ್ಚಿಟ್ಟಂಥ ಕೆಟ್ಟ ನಡೆ.

ಕಪಟ ಭಿಕ್ಷುಗಳು ಚರಿತ್ರೆಯಲ್ಲೂ ಇದ್ದರು. ಇಂದೂ ಇದ್ದಾರೆ. ಇಂಥವರು ಬುದ್ಧನ ಕಾಲದಲ್ಲೂ, ಮಹಾವೀರನ ಕಾಲದಲ್ಲೂ, ಬಸವಣ್ಣನ ಕಾಲದಲ್ಲೂ ಇದ್ದರು. ಇಂಥವರನ್ನು ಚರಿತ್ರೆಯುದ್ದಕ್ಕೂ ಟೀಕಿಸಲಾಗಿದೆ. ಲೇವಡಿ ಮಾಡಲಾಗಿದೆ. ಇವರು ಬರೀ ಡಾಂಭಿಕರು, ದುಡಿಯಲು ಹೆದರುವ ಮೈಗಳ್ಳರು. ಜೀವನೋಪಾಯಕ್ಕೆ ಸುಲಭವಾದ ಮಾರ್ಗವನ್ನು ಹುಡುಕಿಕೊಂಡವರು. ಇಂಥವರು ವರ್ತಮಾನದಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಧಾರ್ಮಿಕ ಕ್ಷೇತ್ರಗಳಲ್ಲಿ ಇವರು ಪೀಡಕರಂತೆ ಕಾಡುತ್ತಾರೆ. 'ದಾನ ಧರ್ಮ ಮಾಡಿದರೆ ಪುಣ್ಯ ಬರುತ್ತದೆ'- ಎಂಬ ಜನರ ಮೌಢ್ಯವನ್ನು ಇವರು ಚೆನ್ನಾಗಿ ಬಳಸಿಕೊಳ್ಳುತ್ತಾರೆ.

ವರ್ತಮಾನದ ಭಿಕ್ಷುಗಳು ನಾನಾ ರೂಪದಲ್ಲಿ ಅವತಾರವೆತ್ತಿದ್ದಾರೆ. ಸಮಾಜ ಸುಧಾರಕರ

ರೀತಿ, ದೇವ ಮಾನವರ ರೀತಿ, ರಾಜಕಾರಣಿಗಳ ರೀತಿ- ಹೀಗೆ ಅವರ ಅವತಾರಗಳು ಬೆಳೆಯುತ್ತಲೇ ಇರುತ್ತವೆ. ಇಂಥ ಭಿಕ್ಷುಗಳಿಗೆ ಇಂಗದ ಬಾಯಾರಿಕೆ! ಎಷ್ಟು ತಿಂದರೂ ಹಸಿವು! ಇದು ಭೋಗದ ಹಸಿವು, ಭಿಕ್ಷುವಿನ ಗಮ್ಯ, ಗುರಿಗಳಿಗೆ ವಿರುದ್ಧವಾದ ಮಾರ್ಗ. ಇಂಥವರು ಈ ಬಗೆಯ ಭಿಕ್ಷೆ ಬೇಡಿಯೇ ಕೋಟ್ಯಾಧಿಪತಿಗಳಾಗುತ್ತಾರೆ. ಭೋಗ ಸುಖದ ಮರೀಚಿಕೆಯಲ್ಲಿ ಮುಳುಗಿ ತೇಲುತ್ತಾರೆ. ಜನ ವಂಚನೆಯ ವರ್ತುಲದಲ್ಲಿ ಸಿಲುಕಿ ನಾಶವಾಗುತ್ತಾರೆ. ಇಂಥವರೆ ನಿಜಕ್ಕೂ ಸಮಾಜದಲ್ಲಿ ದಂಡಪಿಂಡಗಳಂತೆ ಬದುಕಿ, ಅದನ್ನು ಟೊಳ್ಳು ಮಾಡುವ ಜನ!

ವ್ಯಕ್ತಿಗೆ ಹಸಿವು ಬಾಯಾರಿಕೆಗಳಿರಬೇಕು; ಅದು ಸಹಜ ಕ್ರಿಯೆ. ಅದು ಸಹಜ ನೈಸರ್ಗಿಕ ಪ್ರವೃತ್ತಿಯೂ ಹೌದು. ಆದರೆ ಅದೇ ಪ್ರಧಾನ ವೃತ್ತಿಯಾಗಬಾರದು. ವ್ಯಕ್ತಿ ಬಕಾಸುರನಲ್ಲ. ಅವನು ಬಕಾಸುರನಾದರೆ ಅವನಿಗಾದ ಅಂತ್ಯವನ್ನೇ ಕೊನೆಗೆ ಕಾಣಬೇಕಾಗುತ್ತದೆ. ಜಗತ್ತಿನ ಚರಿತ್ರೆಯಲ್ಲಿ ಇಂಥ ಬಕಾಸುರರನ್ನು ಸಹನೆ ಮೀರಿದ ಸಮಾಜ ತಿಂದು ನೊಣೆದಿದೆ. ಆದರೂ ಇಂಥವರ ಹಸಿವು ಬಾಯಾರಿಕೆಗಳು ಕಡಿಮೆಯಾಗಿಲ್ಲ. ಚರಿತ್ರೆಯಿಂದ ಪಾಠ ಕಲಿತಿಲ್ಲ.

ನಮಗೆಂಥ ಹಸಿವು ಬಾಯಾರಿಕೆಗಳಿರಬೇಕೆಂಬುದಕ್ಕೆ ಗೌತಮ ಬುದ್ಧ ಶ್ರೇಷ್ಠ ಮಾದರಿಯಾಗುತ್ತಾನೆ. ಅವನು ಗತಿಯಿಲ್ಲದೆ ಭಿಕ್ಷುವಾದವನಲ್ಲ; ಹೊಟ್ಟೆಪಾಡಿಗಾಗಿ ತಿರುಕನಾದವನಲ್ಲ. ಅವನ ಹಸಿವು ಬಾಯಾರಿಕೆಗಳು ಉದಾತ್ತವಾದ ಆಶಯ ಮತ್ತು ಗುರಿಯನ್ನು ಹೊಂದಿದ್ದವು. ಜಗದ ನೋವು ದುಃಖಗಳ ಕಾರಣಗಳ ಮೂಲ ಶೋಧಿಸಿ, ಪರಿಹಾರ ಕಂಡುಹಿಡಿಯಲು ಶಪಥ ಮಾಡಿ ಮನೆಯಿಂದ ಹೊರಟ- ಅದೂ ರಾತ್ರಿಯ ಹೊತ್ತು. ರಾತ್ರಿಯಿಂದ ಹಗಲಿಗೆ, ಕತ್ತಲೆಯಿಂದ ಬೆಳಕಿಗೆ! ಅವನ ತ್ಯಾಗವಾದರೂ ಎಂಥದ್ದು? ಅವನ ಹಸಿವು ಬಾಯಾರಿಕೆಗಳು ಎಷ್ಟು ತೀವ್ರವಾಗಿದ್ದವು? ಆ ತೀವ್ರತೆ, ತುಡಿತ ಅವನನ್ನು ಅವನ ರಾಜ್ಯ, ಅರಮನೆ, ಭೋಗ, ಸುಂದರವಾದ ಪತ್ನಿ, ಮೋಹದ ಮಗು- ಎಲ್ಲದರಿಂದ ದೂರ ಮಾಡಿದವು. ಇದಕ್ಕೆ ಬೇಕಾದದ್ದು ಸಾಮಾಜಿಕ ಬದ್ಧತೆ, ಪ್ರೀತಿ, ದೃಢ ನಿರ್ಧಾರ, ಎಲ್ಲ ತೆರನ ಸುಖದ ಮಧ್ಯೆ ಇದ್ದು, ಅದನ್ನು ತ್ಯಾಗ ಮಾಡಲು ಅವನನ್ನು ಗಟ್ಟಿಗೊಳಿಸಿದ್ದವು. ನಡುರಾತ್ರಿ ಕತ್ತಲೆಯಲ್ಲಿ ಅವನು ಕಿತ್ತಿಟ್ಟ ಒಂದೊಂದು ಹೆಜ್ಜೆಯೂ ಮುಂದಿನ ಚರಿತ್ರೆಯನ್ನು ಸೃಷ್ಟಿಸಿದವು. ಅವನೊಬ್ಬ ಮಹಾಭಿಕ್ಷು!

೦೯-೦೯-೨೦೧೦

# ವ್ಯರ್ಥವಲ್ಲವೆ, ಜನ್ಮ ವ್ಯರ್ಥವಲ್ಲವೇ?

ಈ ವಾಕ್ಯದ ಆಶಯವೇ ಅತ್ಯಂತ ನಿರಾಶದಾಯಕವಾಗಿದೆ. ನಮ್ಮ ಸಹೃದಯ ಓದುಗರಿಗೆ ತಿಳಿದಿರುವಂತೆ ಇದೊಂದು ದಾಸವಾಣಿ. ಅವರ ಜೀವನ ಶ್ರದ್ಧೆ, ನಂಬಿಕೆಯ ಪ್ರಕಾರ ಕೃಷ್ಣನ ಸ್ಮರಣೆ ಮಾಡದಿದ್ದಲ್ಲಿ ಜನ್ಮ ವ್ಯರ್ಥವಾಗುತ್ತದೆ; ಮತ್ತೆ ನಾನಾ ಭಾವಗಳಲ್ಲಿ ಜನಿಸಿ ನೋವುಣ್ಣಬೇಕಾಗುತ್ತದೆ; ಮೋಕ್ಷ ಮತ್ತೆ ಮತ್ತೆ ದೂರವಾಗುತ್ತದೆ. ಆದುದರಿಂದ ಈ ಜನ್ಮ ವ್ಯರ್ಥವಾಗುತ್ತದೆ. ಮನುಷ್ಯ ಜನ್ಮದ ನಿಜವಾದ ಗುರಿಯೇ ಮೋಕ್ಷ ಸಾಧನೆ ಅಥವಾ ಮುಕ್ತಿಯೇ ಆಗಿರುತ್ತದೆ ಎಂಬುದು ಭಾರತೀಯ ಬದುಕಿನ ನಂಬಿಕೆ. ಈ ನಂಬಿಕೆಯನ್ನೇ ದಾಸರು ಹಾಡಿನ ರೂಪದಲ್ಲಿ ಹಾಡಿದ್ದಾರೆ. ಆದರೆ ಮುಕ್ತಿಯ ಗುರಿಯೊಂದನ್ನು ಹೊರತುಪಡಿಸಿ ಈ ಜೀವಕ್ಕೆ ಇನ್ನೇನು ಗೊತ್ತುಗುರಿಗಳಿವೆ? ಜವಾಬ್ದಾರಿಗಳಿಲ್ಲವೆ? ಅದೊಂದೇ ನಿಜವಾದ ಅಂತಿಮ ಗಮ್ಯವೆಂದು ಮಾನವ ಜೀವಸಂಕುಲ ಹೊರಟಿದ್ದರೆ, ಈ ಸಂಸ್ಕೃತಿ, ಈ ನಾಗರಿಕತೆ, ಈ ಜ್ಞಾನ-ವಿಜ್ಞಾನ-ತಂತ್ರಜ್ಞಾನಗಳ ಸೃಷ್ಟಿ ಸಾಧ್ಯವಾಗುತ್ತಿತ್ತೆ? ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಗೀತ ಹೊರ ಹೊಮ್ಮಿಸಲಾಗುತ್ತಿತ್ತೇ? ಹೆಣ್ಣು, ಮಣ್ಣು, ಹೊನ್ನುಗಳು ಮಾಯೆಯೆಂದೂ ಮೋಕ್ಷ ಸಾಧನೆಗೆ ಅಡ್ಡಿಯೆಂದು ಬಗೆದಿದ್ದರೆ ಮಾನವ ಜೀವಸಂಕುಲ ಇದುವರೆಗೂ ಮುಂದುವರಿದು ಬರುತ್ತಿತ್ತೇ? ಈ ಮಾನವ ಜನ್ಮ ವ್ಯರ್ಥವೆಂದು ಬಗೆದು ಮೊದಲ ಮಾನವರು ಮುಕ್ತಿ ಸಾಧಿಸಿಬಿಟ್ಟು, ಭಗವಂತನ ಸಾನ್ನಿಧ್ಯದಲ್ಲೇ ಭದ್ರವಾಗಿ ನೆಲೆಯೂರಿ ನಿಂತು, 'ಮಧು ಮದಿರೆ'ಗಳ ಆನಂದ ಪಡೆಯುತ್ತಾ ನಿಂತುಬಿಟ್ಟಿದ್ದರೆ ಏನಾಗುತ್ತಿತ್ತು ಎಂಬುದರ ಕಲ್ಪನೆಯೇ ದಿಗಿಲು ಹುಟ್ಟಿಸುವಂಥದ್ದಲ್ಲವೆ?

ಆದರೆ ಆದದ್ದು ಬೇರೆ! ನೀವು ಮೋಕ್ಷದ ಬಗ್ಗೆ ಮಾತನಾಡುವವರು ಮಾತನ್ನಾಡುತ್ತಲೇ ಇರಿ. ನಾವು ಹುಲುಮಾನವರು ಈ ಬದುಕನ್ನು ಪ್ರೀತಿಸುತ್ತೇವೆ; ಈ ಕಾಡು, ನದಿ, ಗಾಳಿ, ಗಿರಿಶೃಂಗ ಶ್ರೇಣಿಗಳನ್ನು ಪ್ರೀತಿಸುತ್ತೇವೆ; ಅವುಗಳಲ್ಲಿ ಸುಖ ಕಾಣುತ್ತೇವೆ. ಆ ಸುಖವೇ ನಿಜವಾದ ಮೋಕ್ಷ! ಅದೇ ನಿಜವಾದ ಸ್ವರ್ಗ! ಈ ಧರೆಯ ಸ್ವರ್ಗದಲ್ಲಿ ನೀವು ಅಡೆತಡೆಯೆಂದು ಭಾವಿಸಿರುವ ಹೆಣ್ಣುಗಳನ್ನು- ಹಣ್ಣುಗಳನ್ನು ಜೊತೆಯಲ್ಲಿಟ್ಟು ಆನಂದಪಡುತ್ತೇವೆ. ನಮ್ಮ ಈ ಭುವಿಯ ಸ್ವರ್ಗವಲ್ಲಿ ನಿಮ್ಮ ಲೋಕದ ಮೇಲುಕೀಳುಗಳಿಲ್ಲ. ಸಮಾನತೆಯೇ ಎಲ್ಲ. ನಮ್ಮ ಜೊತೆ ಪ್ರಕೃತಿ ತಾಯಿಯ ಇನ್ನಿತರ ಮಕ್ಕಳಾದ ಪ್ರಾಣಿ ಪಕ್ಷಿಗಳು ಬದುಕುತ್ತವೆ. ಪರರ ಬಗ್ಗೆ ಚಿಂತೆ ಇಲ್ಲದ ನಮಗೆ ನಮ್ಮ ಜನ್ಮ ಎಂದಿಗೂ ವ್ಯರ್ಥವೆನ್ನಿಸುವುದಿಲ್ಲ. ಬದುಕಿನ ಕ್ಷಣ ಕ್ಷಣವೂ ಸಾರ್ಥಕವೆನ್ನಿಸುತ್ತದೆ. ಆನಂದದಾಯಕವಾಗಿರುತ್ತದೆ.

ನೀವು ಮೋಕ್ಷದ ಬಗ್ಗೆ ಮಾತನಾಡುವವರು ಸ್ವರ್ಗದಲ್ಲಿ ಕೇವಲ 'ಆನಂದ'ವಿರುತ್ತದೆ. ಅದನ್ನು ಅನುಭವಿಸುವುದೇ ಸ್ವರ್ಗಸುಖ ಎನ್ನುವಿರಿ. ಆದರೆ ಅದು ನಿಮ್ಮ ಕಲ್ಪನೆ, ಕಾಣದ ಕನಸು. ಅದು ದಕ್ಕಿತೋ ಇಲ್ಲವೋ ಕಂಡು ಬಂದವರಿಲ್ಲ. ಆದರೆ ನಮ್ಮದು ಕೈಯಲ್ಲಿರುವ ಪಾರಿವಾಳ; ನಿಮ್ಮದು ಪೊದೆಯಲ್ಲಿರುವ ಪಾರಿವಾಳ, ನಮ್ಮದು ವಾಸ್ತವ ಸತ್ಯ; ನಿಮ್ಮದು ಅವಾಸ್ತವ, ಭ್ರಮೆ, ಆದುದರಿಂದ ನಮಗನ್ನಿಸುತ್ತದೆ; ನಿಮ್ಮ ಜನ್ಮ ನಿಜಕ್ಕೂ ಇಲ್ಲಿ ವ್ಯರ್ಥ!

ಮಾನವ ಜನ್ಮ ದಾಸರು ಹೇಳುವಂತೆ 'ಬಲು ದೊಡ್ಡದು'. ಶ್ರಮದ ಮೂಲಕ ಪಡುವ ಸುಖ, ಮಕ್ಕಳ ನಗುವಿನ ಮೂಲಕ ಪಡೆಯುವ ತೃಪ್ತಿ, ತಂದೆ ತಾಯಿಗಳ-ಗುರು ಹಿರಿಯರ ಸೇವೆಯಲ್ಲಿ ಕಾಣುವ ಸಾರ್ಥಕ್ಯ- ಇವೆಲ್ಲವೂ ಈ ಜನ್ಮದ ಬೆಲೆಯನ್ನು ಗುರುತಿಸುತ್ತವೆ. ಸ್ವರ್ಗವೆಂಬುದು ಇದ್ದ ಪಕ್ಷದಲ್ಲಿ- ಅಲ್ಲಿ ಇಂಥ ಕೆಲಸಗಳನ್ನು ಮಾಡಲು ಆಗುವುದಿಲ್ಲ. ಸ್ವರ್ಗದ ನೆಲೆಯನ್ನು ಸತ್ಯವೆಂದು ತಿಳಿದು, ಅದಕ್ಕಾಗಿ ಹಂಬಲಿಸುತ್ತಾ ಇಹದ ಸತ್ಯವನ್ನು, ರುಚಿಯನ್ನು ಕ್ಷಣಿಕವೆಂದು ಕರೆವುದು ಎಂಥ ಆಭಾಸವಾಗುತ್ತದೆ?

ಚರಿತ್ರೆಯುದ್ದಕ್ಕೂ ಮಾನವ ಅನೇಕ ಸಾರ್ಥಕ ಕೆಲಸಗಳನ್ನು ಮಾಡುತ್ತಲೇ ಬಂದಿದ್ದಾನೆ. ಬಡವರ ದೀನದಲಿತರ, ಗುಲಾಮರ ನೋವನ್ನು ನಿವಾರಿಸಲು ಹೋರಾಡಿದ್ದಾನೆ. ಥೆರೇಸಾ ಅಂಥ ತಾಯಿಯರು, ಗಾಂಧೀಜಿಯಂಥ ಮಹಾ ಮಾನವರು ನಮ್ಮ ಕಣ್ಮುಂದೆ ಸೇವೆ ಮಾಡಿ ಮಾನವ ಜನ್ಮ ವ್ಯರ್ಥವಲ್ಲವೆಂದು ಸಾರಿ ತಿಳಿಸಿದ್ದಾರೆ. ಹೊಲದಲ್ಲಿ ದುಡಿವ ರೈತ, ಗಿರಣಿಗಳಲ್ಲಿ ಬೆವರು ಸುರಿಸುವ ಕಾರ್ಮಿಕ, ಸ್ವಚ್ಛತೆಯನ್ನು ಮಾಡುವ ಜಲಗಾರ- ಯಾವ ದೇವತೆಗಳಿಗಿಂತಲೂ ಅತ್ಯುತ್ತಮರೆಂದು ನಾವು ಅರಿಯಬೇಕಿದೆ. ಇಂಥವರ ನಡುವೆ ನಾವು ಒಬ್ಬರಾಗಿ ಅವರಂತೆ ಮನುಜ ಸೇವೆ ಮಾಡುತ್ತಾ, ನೋವು ನಿವಾರಣೆಗೆ, ಹಸಿವು ನಿವಾರಣೆಗೆ ಕಿಂಚಿತ್ ಶ್ರಮದ ಸೇವೆ ಮಾಡಿದರೆ ಅದು ಶ್ರೇಷ್ಠ ಬದುಕಾಗುತ್ತದೆ. ಇಂಥ ಮನುಜರನ್ನು, ಬದುಕನ್ನು ಕಂಡೇ ನಮ್ಮ ಅನುಭಾವಿ ಸಂತ ಸರ್ವಜ್ಞ 'ಸ್ವರ್ಗಕ್ಕೆ ಬೆಂಕಿ ಹಾಕಿ' ಎಂದು ಹೇಳಿರುವುದು.

೨೩-೦೯-೨೦೧೦

# ಹಣವಂತನಾಗುವ ಆಸೆ

ಮಹಾತ್ಮಗಾಂಧಿಯವರು ಇಂಗ್ಲೆಂಡಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಕಂಡುಕೊಂಡ ಸತ್ಯವೊಂದರ ಬಗ್ಗೆ ಆತಂಕದಿಂದ ಬರೆಯುತ್ತಾರೆ. ಕೈಗಾರೀಕರಣದ ಫಲವಾಗಿ ಲಂಡನ್ ಮುಂತಾದ ನಗರಗಳಲ್ಲಿ ಮಧ್ಯಮ ಗಾತ್ರದ- ಬೃಹತ್ ಗಾತ್ರದ ಉದ್ಯಮಗಳು ಸ್ಥಾಪನೆಗೊಂಡವು. ಅವುಗಳ ಜೊತೆಗೆ ಪೂರಕ ವಾಣಿಜ್ಯ ಸಂಸ್ಥೆಗಳು ತಲೆ ಎತ್ತಿದ್ದವು. ಅವು ದಿಢೀರ್ ಹಣ ತರುವ ಉದ್ಯೋಗಗಳನ್ನು ಸೃಷ್ಟಿಸಿದವು. ಇವುಗಳಿಂದ ಆಕರ್ಷಿತರಾದ ಇಂಗ್ಲೆಂಡಿನ ಗ್ರಾಮವಾಸಿ ಜನರು ತಮ್ಮ ಜಮೀನುಗಳನ್ನು ಮಾರಿ ಅಥವಾ ಪಾಳುಬಿಟ್ಟು ನಗರಗಳಿಗೆ ವಲಸೆ ಬರಲಾರಂಭಿಸಿದರು. ಬೇಸಾಯವನ್ನು ವಂಶಪಾರಂಪರ್ಯವಾಗಿ ಮಾಡಿಕೊಂಡು ಕೈಗೆ ಬಾಯಿಗಷ್ಟೇ ಸೀಮಿತವಾಗಿದ್ದ ಅವರ ಆರ್ಥಿಕ ಬದುಕಿಗೆ ತಿಂಗಳು ತಿಂಗಳು ಬರುವ ಹೊಸ ದುಡಿಮೆಯ ಸಂಬಳ ಅತ್ಯಂತ ಮೋಹಕವಾಗಿ ಕಂಡಿತು. ಅದರ ಪರಿಣಾಮ ಮಾತ್ರ ಭೀಕರವಾಗುತ್ತದೆಯೆಂದು ಅವರು ಊಹಿಸಿರಲಿಲ್ಲ. ವಿಶಾಲವಾದ ಪ್ರಕೃತಿ ಮಡಿಲಲ್ಲಿ, ಗಾಳಿ ಬೆಳಕಿನ ಆರೋಗ್ಯಕರ ವಾತಾವರಣದಲ್ಲಿ ಜೀವಿಸುತ್ತಿದ್ದ ಅವರು ನಾಲ್ಕು ಗೋಡೆಯ ನಡುವಿನ ಉಸಿರು ಕಟ್ಟಿಸುವ ದುಡಿಮೆಯ ಬಂಧನಕ್ಕೆ ಸಿಲುಕಿದರು. ಹೊಸ ಹೊಸ ಸ್ಲಮ್ಮುಗಳು ಸೃಷ್ಟಿಯಾದವು. ಜೊತೆಗೆ ಅವರು ಕೇಳರಿಯದ ರೋಗಗಳಿಂದ ನರಳಿದರು. ಅದಕ್ಕೆ ಸಮಾನಾಂತರವಾಗಿ ಗ್ರಾಮೀಣ ಬದುಕು ಎರಡನೆಯ ದರ್ಜೆಯ ಬದುಕೆಂಬ ಭಾವನೆ ಬೆಳೆಯತೊಡಗಿತು. ಎಲ್ಲರಲ್ಲೂ ನಗರಮುಖೀ ದೃಷ್ಟಿ ಬೆಳೆಯಿತು. ಗ್ರಾಮೀಣ ಉತ್ಪನ್ನಗಳ ಕಡೆ ಆಸಕ್ತಿ ಕಡಿಮೆಯಾಗಿ ಇಳುವರಿ ಕುಂದತೊಡಗಿತು.

ಈ ಪಲ್ಲಟ ಸ್ಥಿತಿಯನ್ನು ಕಂಡ ಗಾಂಧೀಜಿಯವರು ಇದು ಆರೋಗ್ಯಕರ ಬೆಳವಣಿಗೆಯಲ್ಲವೆಂದು ವಿಷಾದಿಸುತ್ತಾರೆ. ಇದು ಪ್ರತಿಯೊಬ್ಬರ ಎದೆಯಲ್ಲಿ ಮೂಡುವ ಹಣವಂತನಾಗಬೇಕೆಂಬ ಆಸೆಯ ಫಲವೆಂದು ಅವರು ಬಗೆಯುತ್ತಾರೆ. ಅದು ವ್ಯಕ್ತಿಯಲ್ಲಿ ಅನೇಕ ಪ್ರಲೋಭನೆಗಳನ್ನು ಉಂಟುಮಾಡುತ್ತದೆ. ಅಸಹಜ ಕೃತಕ ವಾತಾವರಣದಲ್ಲಿ ಸಿಲುಕುವಂತೆ ಮಾಡುತ್ತದೆ. ಹಣ ನಮಗೆ ಮಿತಿಯೊಳಗೆ ಬೇಕು. ದಿನನಿತ್ಯದ ಕನಿಷ್ಠ ಅಗತ್ಯಗಳನ್ನು ತುಂಬಿ ಕೊಡುವಷ್ಟರ ಮಟ್ಟಿಗೆ ಅದಿರಬೇಕು. ಅದು ಅತಿಯಾಗಿ ಸಂಗ್ರಹಿತವಾದರೆ ವ್ಯಕ್ತಿಯನ್ನು ಭೋಗಮೂಲ ವೃತ್ತದಲ್ಲಿ ಬಂಧಿಸಿ, ಸ್ವಾರ್ಥಿಯನ್ನಾಗಿಸುತ್ತದೆ. ಅವನು ಅದನ್ನೇ ಬಂಡವಾಳವನ್ನಾಗಿ ಮಾಡಿಕೊಂಡು ಶೋಷಣೆ ಮಾಡಲು ಉದ್ಯುಕ್ತನಾಗುತ್ತಾನೆ. ಇದರಿಂದ ಸಾಮಾಜಿಕ ಅಸಮಾನತೆ ಸೃಷ್ಟಿಯಾಗುತ್ತದೆ. ನಗರ-ಗ್ರಾಮ ಮತ್ತು ಬಡವ-ಬಲ್ಲಿದ ಎಂಬ ವರ್ಗಗಳು ಉಂಟಾಗಿ ಈ ವರ್ಗಗಳಲ್ಲಿ ದ್ವೇಷ ಮತ್ಸರ ಮುಂತಾದ ಅಮಾನವೀಯ ವರ್ತನೆಗಳು

ಬೆಳೆಯುತ್ತವೆ. ಇದರಿಂದ ಸಾಮಾಜಿಕ ಸ್ವಾಸ್ಥ್ಯ ಕೆಡುತ್ತದೆ. ಈ ಎಲ್ಲ ಅಸಾಮಾಜಿಕ ಸಮಸ್ಯೆಗಳು ಹಣ ಮಾಡುವ ಆಸೆಯಿಂದಲೇ ಮೂಡಿದಂಥವು.

ಸುಮಾರು ಮುಕ್ಕಾಲು ಶತಮಾನದ ಹಿಂದೆಯೇ ಗಾಂಧೀಜಿಯವರು ಇಂಗ್ಲೆಂಡಿನಲ್ಲಿ ಗ್ರಹಿಸಿ ಅರ್ಥ ಮಾಡಿಕೊಂಡ ಸ್ಥಿತಿಯು ಇಂದು ಭಾರತದಲ್ಲಿ ಗೋಚರಿಸುತ್ತಿದೆ. ನಗರ ಜೀವನದ ಆಕರ್ಷಣೆಗೆ ಒಳಗಾಗಿರುವ ಗ್ರಾಮ ಬದುಕು ಇಂದು ಅತ್ಯಂತ ಅತಂತ್ರಸ್ಥಿತಿಯಲ್ಲಿದೆ. ಅಲ್ಲಿ ಕೃಷಿ ಕಾರ್ಮಿಕನಿಲ್ಲ; ದುಡಿಯುವ ಯುವಕರಿಲ್ಲ ಅಥವಾ ಇಂಗ್ಲೆಂಡಿನಲ್ಲಾದಂತೆ ಇಲ್ಲಿ ಕೃಷಿ ಯಾಂತ್ರೀಕರಣಕ್ಕೊಳಗಾಗಿಲ್ಲ. ಗ್ರಾಮಗಳ ಬಹುಪಾಲು ಯುವಕರು ನಗರಗಳಲ್ಲಿ ಕೆಲಸ ಹುಡುಕಿ ವಲಸೆ ಹೋಗಿದ್ದಾರೆ. ಬೆಂಗಳೂರಿನಂಥ ಬೃಹತ್ ನಗರಗಳ ಗಾರ್ಮೆಂಟ್ ಹಾಗೂ ಇತರ ಅಂಗಡಿಗಳಲ್ಲಿ, ಹೋಟೆಲ್ ಇನ್ನಿತರ ಸಣ್ಣ ಸಣ್ಣ ಉದ್ಯಮಗಳಲ್ಲಿ ಅತ್ಯಂತ ಕಡಿಮೆ ಸಂಬಳಕ್ಕೆ ದುಡಿಯುತ್ತಿದ್ದಾರೆ. ಅವರೆಲ್ಲರ ಕಣ್ಣುಗಳಲ್ಲಿ ಇಂದಲ್ಲ ನಾಳೆ ಹಣವಂತನಾಗಬಹುದು, ಅಂಬಾನಿಯೋ ನಾರಾಯಣಮೂರ್ತಿ ಮತ್ಯಾರೋ ಶ್ರೀಮಂತನಂತಾಗಬಹುದು ಎಂಬ ಕನಸುಗಳು ಸುಳಿದಾಡುತ್ತಿರುತ್ತವೆ. ಅವೆಲ್ಲಾ ಮರೀಚಿಕೆ, ಭ್ರಮೆ ಎಂದು ತಿಳಿಯುವಷ್ಟರೊಳಗೆ ವಯಸ್ಸು ಮುಗಿಯುತ್ತಾ ಬಂದಿರುತ್ತದೆ; ಮುಪ್ಪು ದೇಹದ ಅಂಗಾಂಗಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು ಅಸಹಾಯಕಗೊಳಿಸಿರುತ್ತದೆ. 'ಇರುವುದೆಲ್ಲವ ಬಿಟ್ಟು ಇರದುದರ ಕಡೆಗೆ ತುಡಿವುದೇ ಜೀವನ'ವೆಂಬ ಕವಿವಾಣಿ ಇಲ್ಲಿ ನಿಟ್ಟುಸಿರಿಗೆ ಕಾರಣವಾಗುತ್ತದೆ. ಮತ್ತೆ ಗ್ರಾಮಕ್ಕೆ ಬಂದು ದುಡಿಯಲಾಗದ, ನಗರದಲ್ಲಿ ಬದುಕಲಾರದ ಎಡಬಿಡಂಗಿ ಸ್ಥಿತಿಯಲ್ಲಿ ನರಳುವಂಥ ನೆಲೆಗೆ ಬದುಕು ಬಂದು ನಿಂತುಬಿಡುತ್ತದೆ.

ಹಣವಂತನಾಗಬೇಕೆಂಬ ಆಸೆ ಸಂಪೂರ್ಣ ನಿರಾಕರಣ ಸಂಗತಿಯಲ್ಲ. ಆದರೆ ಜೀವನದಲ್ಲಿ ಹಣದ ಸ್ಥಾನ ಎಷ್ಟಿರಬೇಕೆಂಬುದನ್ನು ನಮ್ಮ ವಿವೇಕ ನಿಶ್ಚಯಿಸಿಕೊಳ್ಳಬೇಕು. ಆ ಆಸೆ ಇತರರ ಬದುಕನ್ನು ದರೋಡೆ ಮಾಡುವ ಕ್ರಿಯೆಯಾಗಬಾರದು. ಅದಕ್ಕಾಗಿಯೇ ಗಾಂಧೀಜಿಯವರು ಜೀವನದಲ್ಲಿ ಸರಳತೆಯ ಮಹತ್ವವನ್ನು ಸಾರಿದರು. ತಾವೇ ಸ್ವತಃ ಸರಳವಾಗಿ ಬದುಕಿ ತೋರಿದರು. ಸರಳವಾದ ಬದುಕು ತೃಪ್ತಿಯನ್ನು, ಸ್ವಾವಲಂಬನೆಯ ಬದುಕು ಆತ್ಮಾಭಿಮಾನವನ್ನು ತಂದುಕೊಡುತ್ತದೆ ಎಂದು ದೃಷ್ಟಾಂತವಾಗಿ ಬದುಕಿ ಬಾಳಿದರು. ಹಣವಂತನಾಗಬೇಕೆಂಬ ಆಸೆ ನಮ್ಮ ಎದೆಯಲ್ಲಿ ಸಂಚಾರಿ ಭಾವವಾಗಿ ಝಳಪಿಸಿದಾಗ ಬುದ್ಧ, ಗಾಂಧಿ ಕಣ್ಮುಂದೆ ರೂಪುಗೊಳ್ಳಬೇಕು.

೦೭-೧೦-೨೦೦೯

# ದಲಿತಂ ಬಲ್ಲಿದನಾಗನೆ?

ಇತಿಹಾಸ ಚಕ್ರ ತಿರುಗಲೇಬೇಕು. ಚಲನೆ ಜೀವಂತಿಕೆಯ ಲಕ್ಷಣ, ಚಲನೆ ನಿಂತಕೂಡಲೇ ಜಡತ್ವ ಸ್ಥಾಪಿತವಾಗುತ್ತದೆ. ಅದನ್ನು ಕುವೆಂಪು 'ಶಿಲೆಯಲ್ಲೂ ಚೇತನವಿದೆ'ಯೆಂದು ಗುರುತಿಸಿ, ನಿರಂತರ ದಾಟುವ ಕ್ರಿಯೆಯೇ ಸಾರ್ಥಕ ಬದುಕಿನ ಲಕ್ಷಣವೆನ್ನುತ್ತಾರೆ. ಪ್ರಕೃತಿಯಲ್ಲಿ ಯಾವುದು ಕೂಡ ಇಂದು ಅದು ಸೃಷ್ಟಿಯಾದ ಮೂಲ ಸ್ವರೂಪದಲ್ಲಿಲ್ಲ. ಮರ ಗಿಡ, ಪ್ರಾಣಿ ಪಕ್ಷಿ, ಮನುಷ್ಯನನ್ನೂ ಸೇರಿದಂತೆ ರೂಪ ಲಕ್ಷಣಗಳಲ್ಲಿ ಪರಿವರ್ತನೆಯನ್ನು ಹೊಂದಿವೆ. ಕೆಲವುಗಳ ಪರಿವರ್ತನೆ ಶೀಘ್ರುವೆಂದು ತೋರಿದರೆ, ಮತ್ತೆ ಕೆಲವುದರ ರೂಪಾಂತರ ಶತಶತಮಾನಗಳ ಕಾಲಗಳಲ್ಲಿ ಗೋಚರಿಸುತ್ತದೆ. ಇದನ್ನು ಚಕ್ರದ ರೂಪಕಗಳಲ್ಲಿ ಗುರುತಿಸಬೇಕು. ಮೇಲಿದ್ದುದು ಕೆಳಕ್ಕೆ ಬರಲೇಬೇಕು; ಕೆಳಗಿದ್ದುದು ಮೇಲೇರಬೇಕು. ಕಪ್ಪು ತನ್ನ ಬಣ್ಣ ಕಳೆದುಕೊಂಡು ಬಿಳುಪಿನ ಕಡೆ ಸಾಗಬೇಕು; ಬಿಳುಪು ಇತರೆ ಸಂಸರ್ಗದಿಂದ ಕಪ್ಪಾಗುವುದರತ್ತ ಸಾಗಬೇಕು. ಭೂಮಿ ತನ್ನ ಉಬ್ಬನ್ನು ಕಳೆದುಕೊಂಡು ಹಳ್ಳವಾಗಿ ಸಮುದ್ರಕ್ಕೆ ತಾವು ಮಾಡಿಕೊಡಬೇಕು; ಸಮುದ್ರ ಉಬ್ಬುವ ನೆಲಕ್ಕೆ ತಾವು ಕೊಟ್ಟು ಪಕ್ಕಕ್ಕೆ ಸರಿಯಬೇಕು. ಹೌದು, ಪ್ರಕೃತಿ ಸತ್ಯ! ಇದು ಮನುಷ್ಯ ಲೋಕದ ಜೀವಿತ ವ್ಯಾಪಾರಕ್ಕೂ ಅನ್ವಯವಾಗುತ್ತದೆ.

ಸೋಮೇಶ್ವರ ಶತಕದ 'ಬಡವಂ ಬಲ್ಲಿದನಾಗನೆ? ಎಳೆಗರುಂ ಎತ್ತಾಗದೆ?' ಎಂಬ ಮಾತು ಕೂಡ ಚಲನೆಯ ಅಂಶವನ್ನೇ ಕುರಿತು ಮಾತನಾಡುತ್ತದೆ. 'ಪ್ರತಿಯೊಬ್ಬರಿಗೂ ಅವರ ಕಾಲ ಬರುತ್ತದೆ' ಎಂಬ ಸತ್ಯವನ್ನು ಅಭಿವ್ಯಕ್ತಿಸುತ್ತದೆ. ಆದರೆ ಇಲ್ಲೊಂದು ಸೂಕ್ಷ್ಮವಿದೆ; ಎಳೆಗರು ಎತ್ತಾಗುವುದರಿಂದ ಅದರ ವಂಶದ ವಿಷಯವಾಗಲೀ, ಬಡವ ಬಲ್ಲಿದನಾಗುವುದರಿಂದ ಅವನ ಕುಲವಾಗಲೀ- ಸ್ವಾಭಿಮಾನದ ವಿಷಯದಲ್ಲಿ ಆಗಲಿ ಅದಲುಬದಲಾಗುವುದಿಲ್ಲ. ಎಳೆ ಕರುವಿಗೆ ವಯಸ್ಸು ಮತ್ತು ಶಕ್ತಿ ಪ್ರಾಪ್ತವಾದರೆ, ಬಡವ ಬಲ್ಲಿದನಾಗುತ್ತಾನೆ.

ಆಧುನಿಕ ವಿದ್ಯೆ ತಂದು ಕೊಟ್ಟ ಅರಿವು ಭಾರತೀಯ ಸಾಮಾಜಿಕ ವ್ಯವಸ್ಥೆಯ ಅಚಲತ್ವವನ್ನು ಅಲ್ಲಾಡಿಸಿ ಚಲನೆಯ ಕಡೆ ಕ್ರಿಯಾಶೀಲಗೊಳಿಸಿತು. ಸಾಮಾಜಿಕವಾಗಿ ಅಲ್ಪವಾಗಿಯೂ, ಆರ್ಥಿಕ-ರಾಜಕೀಯವಾಗಿ ವಿಶೇಷವಾದ ರೀತಿಯಲ್ಲಿಯೂ ಪಲ್ಲಟಗಳಾದವು. ಅದರ ಪರಿಣಾಮವಾಗಿ ನಮ್ಮ ಸಮಾಜದ ಅತ್ಯಂತ ಕೆಳಸ್ತರದ ದಲಿತರು ಸಾಮಾಜಿಕವಾಗಿ ಸಿಗಬೇಕಾದ ಸ್ಥಾನಮಾನಗಳ ಬಗ್ಗೆ ಹಕ್ಕೊತ್ತಾಯ ತಂದರು. ಶತಶತಮಾನಗಳಿಂದ ಜಾತಿಯ ಹೆಸರಿನಿಂದ ಈ ದೇಶದಲ್ಲಿ ಆಗಿರುವ ಮಾನವ ಹಕ್ಕುಗಳ ದಮನವನ್ನು ಹೊರ ಜಗತ್ತಿಗೆ ತಿಳಿಯುವ ಹಾಗೆ ಮಾಡಿದರು. ಚರಿತ್ರೆಯುದ್ದಕ್ಕೂ ವಂಚಿತರಾದ ಇವರ ಅಭ್ಯುದಯದ ದೃಷ್ಟಿಯಿಂದ ಮೀಸಲಾತಿ ಸೌಲಭ್ಯವನ್ನು

ಕಲ್ಪಿಸಲಾಯಿತು. ವಿದ್ಯೆ ಕಲಿತ ಲಕ್ಷಾಂತರ ದಲಿತರು ಈ ಅವಕಾಶವನ್ನು ಬಳಸಿಕೊಂಡು ಸರ್ಕಾರಿ-ಅರೆ ಸರ್ಕಾರಿ ಇಲಾಖೆಗಳಲ್ಲಿ ಉದ್ಯೋಗಿಗಳಾದರು. ಚರಿತ್ರೆಯುದ್ದಕ್ಕೂ ಜೀತಗಾರರಾಗಿ, ಗುಲಾಮರಾಗಿ, ಅವಮಾನಿತರಾಗಿ ನೊಂದು ಬೆಂದು ಬದುಕಿ ಬಂದಿದ್ದ ಈ ಜನರಿಗೆ, ಎಂದೂ ಭಕ್ಷ್ಯ ಭೋಜ್ಯಗಳನ್ನು ತಿನ್ನದೆ, ಕೇವಲ ಹಳಸಲು ತಿಂದು ಬಂದಿದ್ದ ಜನರಿಗೆ ಆರ್ಥಿಕ ನೆಲೆ ಸ್ಥಿರವಾಗತೊಡಗಿತು. ಅವರದೇ ಆದ ಮನೆಗಳು, ಹೊಸ ಬಟ್ಟೆ ಬರೆಗಳು, ದ್ವಿಚಕ್ರವಾಹನಗಳು, ಕಾರುಗಳು- ಹೀಗೆ ಕ್ರಮವಾಗಿ ಸೌಲಭ್ಯ ದೊರೆಯತೊಡಗಿದವು. ಜೀವನಮಟ್ಟ ಸುಧಾರಿಸತೊಡಗಿತು. ಅವರು ನೌಕರರಾದರು, ಅಧಿಕಾರಿಗಳಾದರು, ರಾಜ್ಯದ ಗ್ರಾಮಮಟ್ಟದಿಂದ ಹಿಡಿದು ಮಂತ್ರಿಗಳ ಮಟ್ಟದ ರಾಜಕಾರಣಿಗಳಾದರು. ಅಧಿಕಾರವನ್ನು ಕೈಗೆ ತೆಗೆದುಕೊಂಡರು; ಅದನ್ನು ಚಲಾಯಿಸಲಾರಂಭಿಸಿದರು.

ಭಾರತ ಅಸ್ಪೃಶ್ಯತೆಯನ್ನು ಯಾವ ನಾಚಿಕೆಯಿಲ್ಲದಂತೆ, ಎಗ್ಗೂ ಇಲ್ಲದಂತೆ ಆಚರಿಸಿಕೊಂಡು ಬಂದ ದೇಶ! ಮುಟ್ಟಿಸಿಕೊಳ್ಳುವುದನ್ನು 'ಮುಟ್ಟು' ಎಂದು ಕರೆದ ಸಂಸ್ಕೃತಿ! ಪ್ರಾಣಿಗಳಿಗಿಂತ ಕಡೆಯಾಗಿ ಮನುಷ್ಯರನ್ನು ಅಮಾನವೀಯವಾಗಿ ನಡೆಸಿಕೊಂಡ ಈ ಭ್ರಮಾತ್ಮಕ ಮೇಲರಿಮೆಯ ಜನ ಇಂದು ಅಧಿಕಾರ, ಹಣ ಇರುವ ದಲಿತರನ್ನು ಬಹಿರಂಗವಾಗಿಯಾದರೂ ಗೌರವಿಸುತ್ತಾರೆ. ಮನೆಗೆ ಕರೆದು ಊಟ ನೀಡುತ್ತಾರೆ; ಸಹ ಪಂಕ್ತಿ ಭೋಜನ ಮಾಡುತ್ತಾರೆ. ದಲಿತರ ಮನೆಗಳಿಗೆ ಹೋಗಿ ನಗುನಗುತ್ತ ಮಾತನಾಡುತ್ತಾರೆ. ಈ ಬಗೆಯ ಪರಿವರ್ತನೆ- ಮೇಲ್ಪದರದ್ದಾದರೂ ಪರವಾಗಿಲ್ಲ- ಆಗಿರುವುದು ಸತ್ಯ. ಇಂದು ದಲಿತ ಬಲ್ಲಿದನಾಗುತ್ತಿದ್ದಾನೆ. ಆದರೆ ಗ್ರಾಮೀಣ ಭಾರತದ ಆತ್ಮ, ಕೋಮುವಾದಿಗಳ ರೀತಿ ರಿವಾಜುಗಳು ಇನ್ನೂ ಪರಿವರ್ತಿತವಾಗಿಲ್ಲ. ಅವುಗಳ ಅಂತರಂಗದಲ್ಲಿ ದಲಿತರ ಅಭಿವೃದ್ಧಿಯ ಬಗೆಗೆ ಅಸೂಯೆ, ದ್ವೇಷ ಹೊಗೆಯಾಡುತ್ತಿದೆ.

ಇದರ ಜೊತೆಗೆ 'ಬಲ್ಲಿದ'ನಾಗುತ್ತಿರುವ ದಲಿತನು ಇನ್ನೂ ಅವಕಾಶವಂಚಿತವಾಗಿರುವ ಲಕ್ಷಾಂತರ ದಲಿತರ ಬಗ್ಗೆ ಕಳಕಳಿಯಿಂದ ಚಿಂತಿಸಬೇಕಾಗಿದೆ. ತಮ್ಮ ಎಚ್ಚರವನ್ನು ಸರ್ವ ಸಮಾಜದ ಎಚ್ಚರವನ್ನು ತರುವ ಸಾಧನವನ್ನಾಗಿ ಮಾಡಿಕೊಳ್ಳಬೇಕಿದೆ.

೧೪-೧೦-೨೦೧೦

# ಶುದ್ಧತೆಯ ಪ್ರಶ್ನೆ

ಶುದ್ಧತೆಯೆನ್ನುವುದು ಪ್ರಧಾನವಾಗಿ ಮನಸ್ಸಿಗೆ ಸಂಬಂಧಿಸಿದ್ದು. ಈ ಮಾನಸಿಕ ಶುದ್ಧತೆ ಮುಖ್ಯವಾಗಿ ವ್ಯಕ್ತಿಯ ಅಂತಃಸಾಕ್ಷಿಯ ಜಾಗೃತಿಯ ಪರಿಣಾಮವಾಗಿ ಮೂಡುತ್ತದೆ. ಅವನ ಅಂತಃಸಾಕ್ಷಿ ಅವನಲ್ಲಿ ಉಂಟುಮಾಡುವ ವಿವೇಕ. ಸಾತ್ವಿಕತೆಗಳು ಶುದ್ಧತೆಯ ಅಂಶವನ್ನು ಗಟ್ಟಿಮಾಡುತ್ತಾ ಹೋಗುತ್ತವೆ. ವ್ಯಕ್ತಿಯ ಹುಟ್ಟು, ಬೆಳೆದ ವಾತಾವರಣ ಮತ್ತು ಅವನು ಕಲಿತ ವಿದ್ಯೆಗಳು ಅವನಲ್ಲಿ ಮಾನಸಿಕ ಶುದ್ಧತೆಯನ್ನು ತರಬಲ್ಲವೆಂಬುದಕ್ಕೆ ಅಂತಹ ಆಶಾದಾಯಕ ಪುರಾವೆಗಳಿಲ್ಲ. ಆಧುನಿಕ ಶಿಕ್ಷಣ ವ್ಯಕ್ತಿಯಲ್ಲಿ ಶುದ್ಧ ಸಂಸ್ಕಾರವನ್ನುಂಟುಮಾಡಿದಂತೆ ತೋರುವುದಿಲ್ಲ. ಅದು ಮುಖ್ಯವಾಗಿ ವ್ಯಕ್ತಿ ವೃತ್ತಿಪರನಾಗುವಂತೆ ಪೋಷಣೆ ಮಾಡುತ್ತದೆ. ಈ ಅಂಶವನ್ನು ಗಮನಿಸಿಯೇ ಗಾಂಧೀಜಿಯವರು ಬದುಕಿನಲ್ಲಿ ವ್ಯಕ್ತಿಗೆ ಗುರಿಯಷ್ಟೇ ಅದನ್ನು ತಲುಪುವ ಮಾರ್ಗ ಮುಖ್ಯವೆಂದರು. ಆದರೆ ಇಂದು ಆಧುನಿಕ ಶಿಕ್ಷಣ ಕೇವಲ ಗುರಿಯನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡಿದೆ. ಇದರಿಂದ ಅಶುದ್ಧ ಮಾರ್ಗದಿಂದ ವ್ಯಕ್ತಿ ಗುರಿಯ ಕಡೆ ಸಾಗುತ್ತಾನೆ.

ಶುದ್ಧತೆಗೂ ಸಂಪಾದನೆಗೂ ನಿಕಟವಾದ ಸಂಬಂಧವಿದೆ. ಭೋಗಮೂಲ ಉದ್ದೇಶದಿಂದ ಸಂಪಾದಿಸಲೆತ್ನಿಸುವ ಸಂಪತ್ತು-ಪದವಿಗಳು ತಾತ್ಕಾಲಿಕ ಸುಖವನ್ನೂ, ತೃಪ್ತಿಯನ್ನೂ ತಂದುಕೊಡುತ್ತವೆ. ಇವುಗಳು ತಮಗೆ ತಾವೇ ಅರ್ಹತೆ ಹಾಗೂ ಗುಣ ಸಂಸ್ಕಾರ ಅನುಭವಗಳ ಆಧಾರದ ಮೇಲೆ ಪ್ರಾಪ್ತವಾದರೆ, ಬರುವ ಸುಖ ಮತ್ತು ತೃಪ್ತಿ ಶಾಶ್ವತವಾಗುತ್ತವೆ. ಆ ಸುಖ ಮತ್ತು ತೃಪ್ತಿ - ಆ ಸ್ಥಾನ ಮತ್ತು ಸಂಪತ್ತಿನ ಕಾರಣದಿಂದಾಗಿ ಸಮಾಜಕ್ಕೆ ಪ್ರಯೋಜನಕಾರಿಯಾಗಿ ಬದುಕಲು, ಕರ್ತವ್ಯವೆಂಬುದು ಕೇವಲ ವೈಯಕ್ತಿಕ ಸಂಪಾದನೆಯ ಕ್ರಿಯೆಯೆಂದು ಭಾವಿಸದೆ ಸಮುದಾಯಪರ ಜೀವನ ನಡೆಸಲು ಪ್ರೇರೇಪಿಸುತ್ತವೆ. ಇಂಥ ಕ್ರಿಯೆ ಮತ್ತು ಅನುಭವಗಳಿಂದ ಸಿಗುವ ಸುಖ ಮತ್ತು ತೃಪ್ತಿ ವೈಯಕ್ತಿಕ ನೆಲೆಯನ್ನು ಮೀರಿ ನಿಂತು ಅನಂತದ ಕಡೆ ವ್ಯಾಪಿಸುತ್ತದೆ. ಇಲ್ಲಿ ತನ್ನದೆಂಬುದು ಮಾಯವಾಗಿ ಎಲ್ಲರೂ ತಮ್ಮವರೆಂಬ ಭಾವನೆ ಮೂಡುತ್ತದೆ. ಸಮುದಾಯ ಸುಖವನ್ನು ಬಯಸುವವನ ಮನಸ್ಸು ಸ್ವಾರ್ಥ ಮತ್ತು ಲೋಭಗಳಿಂದ ದೂರವಿರುತ್ತದೆ. ಅವನ ದೃಷ್ಟಿ, ಆಸೆ-ಆಶಯಗಳು ವಿಸ್ತಾರಗೊಂಡಿರುತ್ತವೆ. ಬುದ್ಧ, ಗಾಂಧಿ ಇಂಥ ಸ್ಥಿತಿಗೇರಿದ ಮಹಾತ್ಮರು. ಇಂಥ ಸ್ಥಿತಿಯ ಸಂಪಾದನೆಯನ್ನೇ ನಮ್ಮ ಶಿವಶರಣರು ಶೂನ್ಯ ಸಂಪಾದನೆಯೆಂದು ಕರೆದು ವಿಶಾಲವಾದ ಅರ್ಥ ನೀಡಿದರು. ವ್ಯಕ್ತಿ ತನ್ನ ನೆಲೆಯಿಂದ-ಕುಟುಂಬ ನೆಲೆಯಿಂದ ಬಿಡಿಸಿಕೊಂಡು ಜನರ ಸ್ವತ್ತಾಗಿ ಬಾಳುವ ಪರಿಯಿದು. ಇದು ಶುದ್ಧತೆಯ ನಿಜ ಲಕ್ಷಣ.

'ದೈಹಿಕ ಅಶುದ್ಧತೆಗಿಂತ ಮಾನಸಿಕ ಅಶುದ್ಧತೆ ಕೆಟ್ಟದ್ದು' ಎಂದು ಗಾಂಧೀಜಿ ಹೇಳುತ್ತಾರೆ. ನಮ್ಮ ಸಮಾಜವನ್ನು ಅತ್ಯಂತ ಸೂಕ್ಷ್ಮವಾಗಿ ಅವಲೋಕನ ಮಾಡಿ ಹೇಳಿದ ಮಾತಿದು. ನಮ್ಮ ಜನರು ದೈಹಿಕ ಶುದ್ಧಿಯ ಬಗೆಗೆ ನೀಡುವಷ್ಟು ಪ್ರಾಮುಖ್ಯತೆಯನ್ನು ಮಾನಸಿಕ ಶುದ್ಧತೆಯ ಬಗ್ಗೆ ನೀಡುವುದಿಲ್ಲ. ಪರಧನ, ಪರಸತಿ, ಸ್ಥಾನಮಾನಗಳ ಲಾಲಸೆಯಲ್ಲಿ ಸದಾ ಮನಸ್ಸನ್ನು ಅಶುದ್ಧಗೊಳಿಸಿಕೊಂಡಿರುತ್ತಾರೆ. ಧನದ ಮೋಹವಂತೂ ವ್ಯಕ್ತಿಯನ್ನು ಅನೈತಿಕ ಮಾರ್ಗಗಳನ್ನು ತುಳಿಯುವಂತೆ ಮಾಡುತ್ತದೆ; ಸದಾ ಅನ್ಯರಿಗೆ ಮೋಸ ಮಾಡಿ ಬದುಕುವ ಹುನ್ನಾರಗಳನ್ನು ಲೆಕ್ಕ ಹಾಕುತ್ತಿರುತ್ತದೆ. ಮತ್ತೊಂದು ಸಾಮಾನ್ಯ ಉಕ್ತಿ ಹೀಗಿದೆ; 'ನಮ್ಮ ಸಮಾಜದಲ್ಲಿ ದೈಹಿಕ ವ್ಯಭಿಚಾರಿಗಳಿಗಿಂತ ಮಾನಸಿಕ ವ್ಯಭಿಚಾರಿಗಳೇ ಅಧಿಕ'. ವ್ಯಭಿಚಾರಿ ನೇರವಾಗಿ ಮುಚ್ಚುಮರೆ ಇಲ್ಲದೆ, ಕೇವಲ ತನ್ನ ದೈಹಿಕ ತೃಷೆಯನ್ನು ತೀರಿಸಿಕೊಂಡು, ಅನಂತರ ನಿರಾಳವಾಗುತ್ತಾನೆ. ಅಷ್ಟರಮಟ್ಟಿಗೆ ಅವನು ಪಾರದರ್ಶಕ. ಆದರೆ ಸಮಾಜದ ಎದುರು, ಮಾನಿನಿಯರ ಎದುರು ಸಭ್ಯರಂತೆ ವರ್ತಿಸುತ್ತಾ - ಮನಸ್ಸಿನಲ್ಲಿ ಸದಾ ವ್ಯಭಿಚಾರವೆಸುಗುತ್ತಾ, ಮನಸ್ಸನ್ನು ಕೊಳಕು ರಾಡಿ ಮಾಡಿಕೊಳ್ಳುತ್ತಾ ಬದುಕುವ ವ್ಯಕ್ತಿ ಅತ್ಯಂತ ನೀಚನೂ ಅಪಾಯಕಾರಿಯೂ ಆಗಿರುತ್ತಾನೆ. ಇಂಥವರನ್ನೇ ಗೋಮುಖ ವ್ಯಾಘ್ರರೆಂದು ಕರೆದಿರುವುದು.

ಅನಾದಿಕಾಲದಿಂದಲೂ ಸಮಾಜದ ಮೇಲ್ವರ್ಗದ ಜನರು ದೈಹಿಕ ಶುದ್ಧಿಯ ಹೆಸರಿನಲ್ಲಿ ಮಡಿ ಮೈಲಿಗೆ ಆಚರಿಸುತ್ತಾ, ತಮಗಿಂತ ಕೆಳಗಿನವರನ್ನು ತುಚ್ಛವಾಗಿ ಕಾಣುತ್ತಾ ಬಂದರು. ಇದರಿಂದಾಗಿಯೇ ನಮ್ಮ ದೇಶದಲ್ಲಿ ಅಸ್ಪೃಶ್ಯತೆಯಂಥ ಭೀಕರ ಅಮಾನವೀಯ ಪದ್ಧತಿ ಜಾರಿಗೆ ಬಂದಿತು. ಆದರೆ ಶುದ್ಧತೆಯ ಸೋಗಿನಲ್ಲಿ ಅಮಾನವೀಯವಾಗಿ ನಡೆದುಕೊಂಡ ಜನರಿಗಿಂತ, ವಾರಕ್ಕೋ ಹದಿನೈದು ದಿನಕ್ಕೊ ಸ್ನಾನ ಮಾಡುತ್ತಿದ್ದ ಕೆಳವರ್ಗದ ಜನ ತಮ್ಮದೇ ಆದ ನೈತಿಕ ನೆಲೆಯಲ್ಲಿ ಶುದ್ಧವಾಗಿಯೇ ಬಾಳ್ವೆ ಮಾಡಿದರು. ಏಕೆಂದರೆ ಅವರು ತಮ್ಮ ದೈಹಿಕ ಶ್ರಮದ ಮೂಲಕ ನಿರಂತರವಾಗಿ ದೇಶ ಕಟ್ಟುವ ಕೆಲಸ ಮಾಡುತ್ತಿದ್ದರು.

೨೮-೧೦-೨೦೧೦

# ಸಗೋತ್ರವೆಂಬ ಭೂತ

ಭಾರತೀಯ ಭೂತಕಾಲದ ಪರಿಕಲ್ಪನೆಯಾದ 'ಸಗೋತ್ರ'ವೆಂಬುದು ಇಂದು ಮತ್ತೆ ಚರ್ಚಿತವಾಗುತ್ತಿದೆ. ಉತ್ತರದ ಕೆಲವು ರಾಜ್ಯಗಳಲ್ಲಿ ಪ್ರಬಲವಾಗುತ್ತಿರುವ ಖಾಪ್ ಪಂಚಾಯತಿಗಳು (ಜಾತಿ ಪಂಚಾಯ್ತಿಗಳು) ಸಗೋತ್ರವೆಂಬ ಮಂತ್ರವನ್ನು ಹಿಡಿದು ಮಾನವ ಹಕ್ಕುಗಳ ಮೇಲೆ ದೌರ್ಜನ್ಯವೆಸಗುತ್ತಿವೆ. ಸಗೋತ್ರವೆಂಬುದು ವರ್ತಮಾನಕ್ಕೂ ಸಲ್ಲುವ ಶ್ರೇಷ್ಠ ಅನುಕರಣ ಯೋಗ್ಯ ಮೌಲ್ಯವೆಂದು ಬಗೆದು ಸಗೋತ್ರ ವಿವಾಹವಾದವರನ್ನು ಕಾನೂನು ಬಾಹಿರವಾಗಿ ಹತ್ಯೆ ಮಾಡುವ ಹೇಯ ಕೆಲಸಕ್ಕೆ ಈ ಪಂಚಾಯ್ತಿಗಳು ಕೈಹಾಕಿವೆ. ಸಗೋತ್ರದವರು ಒಂದೇ ರಕ್ತಮೂಲದಿಂದ ಬಂದವರು, ಅದರ ನಡುವೆ ರಕ್ತ ಸಂಬಂಧ ಸಲ್ಲದೆಂಬುದು ಸಂಪ್ರದಾಯವಾದಿಗಳ ವಾದ. ಅದು ಧರ್ಮಬಾಹಿರ; ಅದನ್ನು ಮೀರಿದವರಿಗೆ ಉಗ್ರ ಶಿಕ್ಷೆ ನೀಡುವುದರಿಂದ ಸಮಾಜದಲ್ಲಿ ಹೆದರಿಕೆ, ಎಚ್ಚರಿಕೆ ಮೂಡುತ್ತದೆ ಎಂಬುದು ಅವರ ನಂಬಿಕೆ. ಈ ವಾದವನ್ನು ವೈಜ್ಞಾನಿಕವೆಂದು ಕರೆದು ಆಧುನಿಕ ಜೈವಿಕ ಶಾಸ್ತ್ರದ ಹಿನ್ನೆಲೆಯಲ್ಲಿ ಸಮರ್ಥಿಸಿಕೊಳ್ಳುವವರಿಗೇನೂ ಕೊರತೆಯಿಲ್ಲ.

ಸಗೋತ್ರದವರೆಂದರೆ ಒಂದೇ ರಕ್ತ ಮೂಲದಿಂದ ಬಂದವರೆಂದು ತಿಳಿಯುವುದೇ ಮೊದಲ ತಪ್ಪು. ವೇದಕಾಲದಲ್ಲಿ 'ಸಗೋತ್ರ'ವೆಂದರೆ 'ಒಂದೇ ಆವರಣದಲ್ಲಿರುವ ಗೋವುಗಳ ಸಮೂಹ' ಎಂಬ ಅರ್ಥದಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ. ಅಂದರೆ 'ದನಗಳ ದೊಡ್ಡಿ' ಎಂದು ತಿಳಿಯಬೇಕು. ಆ ಕಾಲದಲ್ಲಿ ಸಂಪತ್ತನ್ನು ಗೋವುಗಳ ಆಧಾರದ ಮೇಲೆ ಅಳೆಯಲಾಗುತ್ತಿದ್ದುದರಿಂದ, ಅವುಗಳ ಜೋಪಾನ ಮಾಡುವುದು ಅತಿ ಮುಖ್ಯವಾಗಿತ್ತು. ಊರಿನ ಮುಖ್ಯಸ್ಥನು ಅಥವಾ ಋಷಿಯು ದೊಡ್ಡ ದನಗಳ ದೊಡ್ಡಿಯನ್ನು ಹೊಂದಿರುತ್ತಿದ್ದನು. ಅದರಲ್ಲಿ ಅವನ ಮತ್ತು ಊರಿನ ಎಲ್ಲರ ದನಗಳನ್ನು ಕೂಡಿಹಾಕಲಾಗುತ್ತಿತ್ತು. ಅವುಗಳನ್ನು ಗುರುತಿಸಲು ಅವುಗಳ ಕಿವಿಗಳ ಮೇಲೆ ಮುದ್ರೆಯನ್ನು ಹಾಕಲಾಗುತ್ತಿತ್ತು. ಆ ಗೋವುಗಳನ್ನು ಆ ಗೋತ್ರದ ಹೆಸರಿನಿಂದ ಅಥವಾ ಮುಖ್ಯಸ್ಥನ ಹೆಸರಿನಿಂದ ಕರೆಯಲಾಗುತ್ತಿತ್ತು. ಅನಂತರದ ದಿನಗಳಲ್ಲಿ ಇದು ಜನರಿಗೂ ಅನ್ವಯವಾಗಿ ಆ ಗೋತ್ರದ ಹೆಸರಿನಿಂದಲೇ ಗುರುತಿಸಲಾಗುತ್ತಿತ್ತು. ಅಂದ ಮೇಲೆ ಇಲ್ಲಿ ರಕ್ತ ಮೂಲದ ಪ್ರಶ್ನೆ ಉದ್ಭವವಾಗುವುದೇ ಇಲ್ಲ. ಸಗೋತ್ರವೆಂದರೆ 'ದನಗಳ ದೊಡ್ಡಿ'ಯೆಂಬ ಅಭಿಪ್ರಾಯವನ್ನು ಪಿ.ವಿ.ಕಾಣೆ, ವಿ.ಎಸ್. ಅಗರ್‌ವಾಲರಂಥ ವಿದ್ವಾಂಸರು ಸಮರ್ಥಿಸುತ್ತಾರೆ.

ಗೋತ್ರದ ಕಲ್ಪನೆಯನ್ನು ರಕ್ತಮೂಲ ಸಂಬಂಧಕ್ಕೆ ತಳಕು ಹಾಕಿ, ವಿವಾಹ ಬಂಧನಕ್ಕೆ

ನಿಷೇಧ ಹೇರಲಾರಂಭಿಸಿದ್ದು ಸುಮಾರು ಎರಡೂವರೆ ಸಾವಿರ ವರ್ಷಗಳಿಂದೀಚೆಗೆ ಎಂದು ಗುರುತಿಸಬಹುದು. ಸಾಮಾನ್ಯವಾಗಿ ಇಂದು ಮತ್ತು ಹಿಂದೆ ಈ ಗೋತ್ರದ ಮೂಲಕ ಗುರುತಿಸುವಿಕೆ ಮತ್ತು ಅದರ ಪರಿಪಾಲನೆ ಬ್ರಾಹ್ಮಣ ಕುಲಗಳಲ್ಲಿ ಮಾತ್ರ ಕಂಡುಬರುತ್ತದೆ. ಕ್ಷತ್ರಿಯ ಮೂಲದವರು, ಮತ್ತಿತರರು ಗೋತ್ರದ ಮೂಲಕ ಗುರುತಿಸಿಕೊಂಡರೆ, ಅದು ಕೇವಲ ಅನುಕರಣೆಯ ಪ್ರವೃತ್ತಿ ಎಂದು ತಿಳಿಯಬೇಕಾಗುತ್ತದೆ. ವಂಶವೃಕ್ಷಗಳ ಮೂಲಕ ಗುರುತಿಸಬಹುದಾದಂಥ ಚಾರಿತ್ರಿಕ ಆಧಾರಗಳ ಮೇಲೆ ಮಾತ್ರ ರಕ್ತಮೂಲವನ್ನು ನಂಬಬಹುದು. ಅಂಥವರಲ್ಲಿ ಕೊಟ್ಟು ತರುವಂತಹ ಪದ್ಧತಿಯನ್ನು ನಿಷೇಧಿಸಬಹುದು. ಇಂಥ ನಿಷೇಧಕ್ಕೆ ವೈಜ್ಞಾನಿಕವಾದ ಸಕಾರಣಗಳನ್ನೂ ನೀಡಬಹುದು.

ಭಾರತದಲ್ಲಿ ಜಾತಿ ಜಾತಿಗಳ ನಡುವೆ, ಮತ ಮತಗಳ ನಡುವೆ ಸಂಕರವಾಗಿರುವುದು ಸುಳ್ಳಲ್ಲ. ಅದರ ಜೊತೆಗೆ ಸಾವಿರಾರು ವರ್ಷಗಳಲ್ಲಿ ಬ್ರಾಹ್ಮಣರಂಥ ವಲಸಿಗರು ಊರು ದೇಶಗಳನ್ನು ಬಿಟ್ಟು ಮತ್ತೊಂದು ನೆಲೆಗೆ ವಲಸೆ ಹೋಗುತ್ತಿದ್ದುದು; ಆ ಕಾರಣದಿಂದ ಅನಿವಾರ್ಯವಾಗಿ ಸ್ಥಳೀಯ ಸಂಸ್ಕೃತಿಗೆ/ ವಾತಾವರಣಕ್ಕೆ ತಮ್ಮನ್ನು, ತಮ್ಮ ನಂಬಿಕೆಗಳನ್ನು ಒಗ್ಗಿಸಿಕೊಳ್ಳಬೇಕಾಗಿದ್ದುದು ಅನಿವಾರ್ಯವಾಗಿತ್ತು. ಆಗ ಸ್ಥಳೀಯ ಬ್ರಾಹ್ಮಣ ಜನಾಂಗ-ಜಾತಿಗಳ ನಡುವೆ ಕೊಟ್ಟು ತೆಗೆದುಕೊಳ್ಳುವುದು ಸಹಜವಾಗಿರುತ್ತಿತ್ತು. ಇಂಥ ಸಂದರ್ಭದಲ್ಲಿ ರಕ್ತಸಂಕರ ಧಾರಾಳವಾಗಿ ನಡೆದುಹೋಗುತ್ತಿತ್ತು. ಆಗ ರಕ್ತದ 'ಮಡಿ' ಎಲ್ಲಿ ತಾನೆ ಉಳಿದುಕೊಳ್ಳುತ್ತಿತ್ತು? ಸಾವಿರಾರು ವರ್ಷಗಳ ಈ ರೀತಿಯ ಸಂಕರದಿಂದಾಗಿ ಗೋತ್ರದ ಮೂಲ ಸ್ವರೂಪವೇ ಪಲ್ಲಟವಾಗಿರುವ ಸಾಧ್ಯತೆಯಾಗಿದೆ. ಅಂದಮೇಲೆ ಸಗೋತ್ರ ಪ್ರೇಮವನ್ನಾಗಲೀ ಅದು ಅತ್ಯಂತ ಪವಿತ್ರವೆಂದಾಗಲೀ ವಾದಿಸುವುದು ಅತಾರ್ಕಿಕವಾಗುತ್ತದೆ.

ಹಾಗೆ ನೋಡಿದರೆ ಇಡೀ ಮಾನವಕುಲವೇ ಎರಡು ಮೂರು ಮೂಲ ನೆಲೆಗಳಿಂದ ಉದ್ಭವವಾಗಿದೆಯೆಂದು ಮಾನವಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಧರ್ಮಶಾಸ್ತ್ರಗಳು ಪುರಾಣಗಳು ಏಕಮೂಲ ನೆಲೆಯನ್ನೇ ಸಮರ್ಥಿಸುತ್ತವೆ. ಆಡಂ ಮತ್ತು ಈವ್‌ರಿಂದ ಮಾನವ ಕುಲ ಉದ್ಭವವಾಯಿತೆಂದು ಬೈಬಲ್ ಹೇಳುವಂತೆ ಎಲ್ಲ ಧರ್ಮಗಳು ಮಾನವ ಸಂತತಿಯ ಸೃಷ್ಟಿಮೂಲಗ ಬಗ್ಗೆ ಹೇಳುತ್ತವೆ. ಅಂದಮೇಲೆ ಸಗೋತ್ರ ಪರಿಕಲ್ಪನೆಯನ್ನು ವಂಶವಾಹಿ ಮೂಲದ ಜೊತೆ ಸಮೀಕರಿಸುವುದು ಅಸಮಂಜಸವಾಗುತ್ತದೆ. ಈ ಪರಿಕಲ್ಪನೆಯ ಆಧಾರದ ಮೇಲೆ ನೋಡಿದರೆ ಮಾನವರೆಲ್ಲರೂ ಒಂದೇ ತಾಯಿ-ತಂದೆಯರ ಮಕ್ಕಳೇ! ಒಂದೇ ರಕ್ತವೆಂದು ಬಗೆದು ಮದುವೆಯಾಗದೆ ಉಳಿದುಬಿಟ್ಟಿದ್ದರೆ ಮಾನವ ಸಂತತಿಯೇ ಬೆಳೆಯುತ್ತಿರಲಿಲ್ಲ! ನಾಗರಿಕತೆ-ಸಂಸ್ಕೃತಿಗಳು ಅರಳುತ್ತಿರಲಿಲ್ಲ! ಜ್ಞಾನ-ವಿಜ್ಞಾನ-ತಂತ್ರಜ್ಞಾನಗಳು ಬೆಳಗುತ್ತಿರಲಿಲ್ಲ! 'ಮರ್ಯಾದೆ'ಯ ಹೆಸರಿನಲ್ಲಿ ಇಂದು ನಡೆಯುತ್ತಿರುವ ಅಮಾನವೀಯ ಹತ್ಯೆಗಳಿಗೆ ಮಾನವತೆಯ ಒಮ್ಮತದ ಉತ್ತರ ನೀಡಬೇಕಾಗಿದೆ.

೧೧-೧೧-೨೦೧೦

# ಬಡತನವೆಂಬ ಬೇಗೆ

ಕೆಲವರು ಬಡತನವನ್ನು ಬಡವರಿಗೆ ತಗುಲಿದ ಶಾಪವೆನ್ನುತ್ತಾರೆ. ಏನಿದರ ಅರ್ಥ? ಅವರು ಬಡತನವನ್ನು ಅನುಭವಿಸಲು 'ಶಾಪ'ವೇ ಕಾರಣವಾಗಿದ್ದರೆ, ಅವರು ಮಾಡಿರುವ ಪಾಪವಾದರೂ ಏನು? ಶಾಪ ಕೊಟ್ಟವರು ಯಾರು? ತಲತಲಾಂತರದಿಂದ ತಮ್ಮ ಬಡತನವನ್ನು ನೀಗಿಕೊಳ್ಳಲು ಅವರು ನಿರಂತರವಾಗಿ ಶ್ರಮಪಡುತ್ತಲೇ ಇರುವರಲ್ಲ? ಏಕೆ ಅವರ ದುಡಿಮೆ ಬಡತನದಿಂದ ಪಾರುಮಾಡಿಲ್ಲ? ಮುಗ್ಧತೆ, ಕರ್ತವ್ಯನಿಷ್ಠೆ, ಸ್ವಾಮಿನಿಷ್ಠೆಗಳಷ್ಟರಲ್ಲೇ ನಂಬಿಕೆಯಿಟ್ಟು ದುಡಿದವರು ಬಡತನದಿಂದ ಎಷ್ಟು ಜನ ಪಾರಾಗಿದ್ದಾರೆ? ಈ ನಿಷ್ಠಮೌಲ್ಯಗಳ ಆಚೆ ಈಚೆ ನೋಡಿ: ತಮ್ಮ ಬುದ್ಧಿ ಚುರುಕುತನಗಳ ಜೊತೆಗೆ ಚಾಲಾಕಿತನ- ಕುಯುಕ್ತಿಗಳನ್ನು ಬೆಳೆಸಿಕೊಂಡವರು, ಬಡವರ ಬಡತನಕ್ಕೆ ಅವರ ಹಿಂದಿನ ಜನ್ಮಗಳ ಕರ್ಮವೇ ಕಾರಣವೆಂಬ ತತ್ತ್ವವನ್ನು ಪ್ರಚಾರ ಮಾಡಿ, ನಂಬಿಸಿ ದುಡಿಸಿಕೊಂಡರು. ಬಡತನದ ಬೇಗೆಯಲ್ಲಿ ನರಳುವವರು ಕೂಡ ಬಡತನವೆಂಬುದು ತಮ್ಮ ಪೂರ್ವಜನ್ಮಗಳ ಫಲವೆಂದು ನಂಬಿ ಅನುಭವಿಸುತ್ತಾ ಬಂದರು. ಜೊತೆಗೆ, ಬಡವರನ್ನು 'ದರಿದ್ರ ನಾರಾಯಣ' ಅಥವಾ 'ದರಿದ್ರೋ ದೇವೋಭವ' ಎಂದು ಕರೆದು ವೈಭವೀಕರಿಸಿರುವುದು ಬೇರೆ ಇದ್ದೇ ಇದೆ. ತಮ್ಮ ದುಡಿಮೆಗೆ ತಕ್ಕ ಪ್ರತಿಫಲವಿಲ್ಲದೆ ದುಡಿದು, ಅರೆಹೊಟ್ಟೆ ತಿಂದು, ಹರಿದ ವಸ್ತ್ರಧರಿಸಿ, ಗುಡಿಸಲುಗಳಲ್ಲಿ ಮಲಗಿ ದೇವರೆಂದು ಕರೆಸಿಕೊಳ್ಳುವ 'ಪುಣ್ಯ' ಬಂದದ್ದೇ ಲಾಭ!

ಬಡತನ ತಂದುಕೊಡುವ ನೋವು- ಅವಮಾನ ಅಪಾರವಾದುದು. ಹಸಿವು ಎಂಬುದು ವ್ಯಕ್ತಿಯ ವ್ಯಕ್ತಿತ್ವವನ್ನು, ಸ್ವಾಭಿಮಾನವನ್ನು ಕುಬ್ಜಗೊಳಿಸುತ್ತದೆ. ಈ ಕುಬ್ಜಗೊಂಡ ಸ್ಥಿತಿ ಅವನನ್ನು ದೀನನನ್ನಾಗಿಯೂ ತಿರುಪೆಯವನನ್ನಾಗಿಯೂ ಸುಳ್ಳನನ್ನಾಗಿಯೂ ಕಳ್ಳನನ್ನಾಗಿಯೂ ಮಾಡಿಬಿಡುತ್ತದೆ. ಈ ಸ್ಥಿತಿ ಮೇಲುನೋಟಕ್ಕೆ ಅವನನ್ನು ದರಿದ್ರನೂ ಪಾಪಿಯೂ ಮೈಗಳ್ಳನೂ ಆಗಿರುವಂತೆ ತೋರಿದರೂ, ವಿಚಾರಮಾಡಿದರೆ ಅದಕ್ಕೊಂದು ಚಾರಿತ್ರಿಕ ಕಾರಣವಿದೆಯೆಂಬುದನ್ನು, ಸಾಮಾಜಿಕ ಅಸಮಾನತೆಯ, ಆರ್ಥಿಕ ಶೋಷಣೆಯ ಮತ್ತು ಆಳುವ ಜನರ-ಪುರೋಹಿತಶಾಹಿಯ ಸ್ವಾರ್ಥಗಳು ಕೆಲಸ ಮಾಡಿವೆಯೆಂಬುದನ್ನು ಅಲ್ಲಗಳೆಯಲಾಗದು. ಬಡತನ ನಿವಾರಣೆಗೆ ಪ್ರಾಮಾಣಿಕ ಪ್ರಯತ್ನಗಳು ನಡೆದಿರುವುದು ಚರಿತ್ರೆಯಲ್ಲಿ ಸಿಗಬಹುದು; ವೈಯಕ್ತಿಕ ನೆಲೆಯಲ್ಲಿ ಕೆಲವು ರಾಜರು ಮತ್ತು ಸಮಾಜ ಸುಧಾರಕರು ಪ್ರಯತ್ನಿಸಿರಬಹುದು. ಆದರೆ ವ್ಯವಸ್ಥೆಯ ಹಿಡಿತ ಎಷ್ಟು ಭದ್ರವಾಗಿದೆಯೆಂದರೆ ಅಣುವೊಂದು ಅಲುಗಾಡದ ಸ್ಥಿತಿಯಲ್ಲಿ ಬಡತನ ಸ್ಥಾಯಿಯಾಗಿದೆ. ಅದನ್ನೇ ಬೇಂದ್ರೆಯವರು 'ಅನ್ನಾವತಾರ' ಪದ್ಯದಲ್ಲಿ ಹೃದಯತಟ್ಟುವ ಹಾಗೆ

ಅಭಿವ್ಯಕ್ತಿಸುತ್ತಾರೆ.

'ನಾನು ಸಮಸ್ತ ಭಾರತವನ್ನು ಸುತ್ತಿದ್ದೇನೆ. ಆದರೆ ನನ್ನನ್ನು ಅತ್ಯಂತ ತೀಕ್ಷ್ಣವಾಗಿ ಬಾಧಿಸಿದ ಸಂಗತಿಯೆಂದರೆ ಜನಸಾಮಾನ್ಯರನ್ನು ಪೀಡಿಸುತ್ತಿರುವ ಬಡತನ ಮತ್ತು ದುಃಖ' -ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ವಿವೇಕಾನಂದರನ್ನು ಭಾರತದ ಧಾರ್ಮಿಕ ನೆಲೆಯಲ್ಲಿಯೇ ಹೆಚ್ಚು ವೈಭವೀಕರಿಸಲಾಗಿದೆ. ಅವರು ಭಾರತದ ಬಡವರ ಬಗ್ಗೆ, ಜಾತಿ ವ್ಯವಸ್ಥೆಯ ಬಗ್ಗೆ ಹೇಳಿರುವುದನ್ನು ಮಠಮಾನ್ಯಗಳು, ಆಶ್ರಮಗಳು ಸಾಕಷ್ಟು ಪ್ರಚಾರ ಮಾಡದಿರುವುದು ವ್ಯವಸ್ಥೆಯ ವ್ಯಂಗ್ಯವೂ ಸತ್ಯವೂ ಆಗಿದೆ. ನಮ್ಮ ಜಾತಿ ವ್ಯವಸ್ಥೆಯ ಸಮಾಜದಲ್ಲಿ ನಾವು ಮಾಡುವ ಕಸುಬಿಗೂ ಬಡತನಕ್ಕೂ ಸಂಬಂಧವಿದೆ; ಕೆಲವು ಕಸುಬುಗಳು ಎಷ್ಟು ಗೆಯ್ದರೂ ಆರ್ಥಿಕ ಸಬಲತೆಯನ್ನು ತರಲಾರವು; ಅವು ಕೀಳು ಕಸುಬುಗಳೆಂದು ಪರಿಗಣಿತವಾಗಿವೆ. ಆ ಕಸುಬುಗಳನ್ನು ಶ್ರೀಮಂತ ವರ್ಗದ ಜನ ಮಾಡಲಾರರು. ದುಡಿಮೆಗೆ ತಕ್ಕ ಪ್ರತಿಫಲದಲ್ಲೂ ಮೇಲು ಕೀಳು- ಹೆಚ್ಚು ಕಡಿಮೆಯೆಂಬ ಅಂತರ ಸೃಷ್ಟಿಯಾಗುತ್ತದೆ.

ಬಡತನ ಉಂಟುಮಾಡುವ ದುಃಖದ ಸ್ಥಿತಿ, ಅವಮಾನದ ಕ್ಷಣಗಳನ್ನು ವ್ಯಕ್ತಿಯ ಅರಿವಿನ ಸ್ಫೋಟದ ಕಿಂಡಿಗಳೆಂದು ಬಗೆದಲ್ಲಿ- ಅವನಿಗೆ ಜಗತ್ತು ಹೊಸಬಗೆಯಲ್ಲಿ ಕಾಣುತ್ತದೆ. ಏಕೆಂದರೆ ಬಡತನವು ಸದಾ ವ್ಯಕ್ತಿಯನ್ನು ಅದರಿಂದ ಬಿಡುಗಡೆ ಹೊಂದಲು ಪ್ರೇರೇಪಿಸುತ್ತಿರುತ್ತದೆ. ಬಡತನವನ್ನು ಸಾಮಾಜಿಕ ದ್ವೇಷಕ್ಕೆ ಸಾಧನವನ್ನಾಗಿ ಬಳಸಿಕೊಳ್ಳದೆ, ಅದರಿಂದ ವ್ಯಕ್ತಿ ನೆಲೆಯಿಂದ ಸಾಮಾಜಿಕ ನೆಲೆಯವರೆಗೆ ಬಿಡಿಸಿಕೊಂಡು, ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ನ್ಯಾಯಗಳನ್ನು ಸಮಾನತೆಯ ಆಧಾರದ ಮೇಲೆ ಮೂಡಿಸಲು ಹೋರಾಟ ಪ್ರಾರಂಭಿಸಬೇಕು. ಏಕೆಂದರೆ ಬಡತನವು ಕಲಿಕೆಯ ಆಗರ; ಸಾಧಕನ ಪರೀಕ್ಷಾರಂಗ! ಜೀವನದ ಎಲ್ಲಾ ಮಗ್ಗುಲುಗಳ ಗಟ್ಟಿ ಅನುಭವವನ್ನು ಕಲಿಸುವ ಕಠಿಣ ಕುಲುಮೆ! ಆದುದರಿಂದ ಬಡತನದ ಜೀವನವು ಸಹಸ್ಪಂದನವನ್ನೂ, ನೋವಿನ ಮಿಡಿತವನ್ನೂ ಮತ್ತು ಸರ್ವರ ಸುಖವನ್ನು ಬಯಸುತ್ತದೆ. ಅರಿವನ್ನು ಈ ಮೂಲಕ ವ್ಯಕ್ತಿ ನೆಲೆಯಿಂದ ಸಮುದಾಯದ ನೆಲೆಗೆ ಕೊಂಡೊಯ್ಯಲು ಸಾಧ್ಯ. ಈ ಒಂದು ಅವಕಾಶ ಮತ್ತು ತುಡಿತ ಶ್ರೀಮಂತನಿಗೆ ಸಾಧ್ಯವಿಲ್ಲವೆಂಬುದನ್ನು ಅರಿಯಬೇಕು. ಈ ಹಿನ್ನೆಲೆಯಿಂದಲೇ ಸ್ವಾಮಿ ವಿವೇಕಾನಂದರು 'ನಾನು ಸುಖದ ಸ್ಥಿತಿಯಲ್ಲಿ ಕಲಿತದ್ದಕ್ಕಿಂತ, ದುಃಖದ ಸ್ಥಿತಿಯಲ್ಲಿ ಹೆಚ್ಚು ಕಲಿತಿದ್ದೇನೆ' ಎಂದು ಹೇಳಿರುವುದು.

೨೫-೧೧-೨೦೧೦

# ನನ್ನ ಭಾಗದ ಸೂರ್ಯನನ್ನು ತಿಂದುಬಿಟ್ಟರು!

ಪ್ರಸಿದ್ಧ ಹಿಂದಿ ಕವಿ ಜಾವೆದ್ ಅಖ್ತರ್ ತಮ್ಮ ಒಂದು ಪದ್ಯದಲ್ಲಿ ಹೀಗೆ ಬರೆಯುತ್ತಾರೆ:

**ಗಗನ ಚುಂಬಿಗಳ ದೆಸೆಯಿಂದ**
**ನನ್ನ ಮನೆ ಬಿದ್ದುಹೋಯಿತು,**
**ಕೆಲವು ಜನ ನನ್ನ ಭಾಗದ**
**ಸೂರ್ಯನನ್ನು ತಿಂದುಬಿಟ್ಟರು!**

ನಗರಾರಣ್ಯ ಉಂಟು ಮಾಡಿರುವ ಕ್ರೌರ್ಯವನ್ನು ಅತ್ಯಂತ ವಿಷಾದದ- ನೋವಿನ ಧ್ವನಿಯಲ್ಲಿ ಈ ಪದ್ಯ ಅಭಿವ್ಯಕ್ತಿಸುತ್ತದೆ. ಈ ಸ್ಥಿತಿಗೆ ಈ ಶೋಷಿತರನ್ನು ತಂದ ಗಗನ ಚುಂಬಿಗಳ ತಣ್ಣನೆಯ ಮನಸ್ಥಿತಿಯ ಕ್ರೌರ್ಯವನ್ನು ಸಮರ್ಪಕವಾಗಿ ಅಭಿವ್ಯಕ್ತಿಸುತ್ತವೆ, ಈ ಪದ್ಯದ ಸಾಲುಗಳು. 'ನನ್ನ ಭಾಗದ ಸೂರ್ಯನನ್ನೇ ತಿಂದುಬಿಟ್ಟರು' -ಎಂಬ ಉಕ್ತಿಯಲ್ಲಿ ಬಡವರ- ಗುಡಿಸಲು ವಾಸಿಗಳ ಮೇಲೆ ಶ್ರೀಮಂತರು- ನಗರ ನಿರ್ಮಾಣಕಾರರು ಎಸಗುತ್ತಿರುವ ಅಮಾನವೀಯ ಹಲ್ಲೆಯ ಪರಿಣಾಮವನ್ನು ಅನುಭವಕ್ಕೆ ತಂದುಕೊಳ್ಳಬಹುದು.

ಪ್ರಕೃತಿ- ಮಾನವ ಸಂಬಂಧ ತಾಯಿ ಮಕ್ಕಳ ಸಂಬಂಧದಂಥ ಅನುಭವ. ಅದರ ಅನುಬಂಧದ ತಾಳ-ಕೊಂಡಿ ತಪ್ಪಿದಾಗ ಪ್ರಕೃತಿ ಮಕ್ಕಳಲ್ಲಿ ಅನಾಥಭಾವ ಕಾಡುತ್ತದೆ. ಸೂರ್ಯ ಬೆಳಕನ್ನಷ್ಟೇ ನೀಡುವುದಿಲ್ಲ. ಅವನು ತನ್ನ ಶಾಖ ರಶ್ಮಿಯಿಂದ ಜೀವದ ಮಿಡಿತವನ್ನು ನಿರಂತರವಾಗಿಸುತ್ತಾನೆ. ಸೂರ್ಯನು ಸೃಷ್ಟಿಯ ಶಕ್ತಿಮೂಲಗಳಲ್ಲೊಂದು ಮುಖ್ಯ ಚೇತನ. ಅವನು ಶೀತಲತೆಯನ್ನು ತೊಲಗಿಸಿ ಚಟುವಟಿಕೆಯನ್ನು ಕ್ರಿಯಾಶೀಲಗೊಳಿಸುತ್ತಾನೆ. ನಗರಾರಣ್ಯಗಳು ಸಾಮಾನ್ಯರ ಚೇತನ ಶಕ್ತಿಯಾದ ಸೂರ್ಯನನ್ನೇ ತಮ್ಮ ಗಗನಚುಂಬಿ ಕಟ್ಟಡಗಳಿಂದ ಮರೆ ಮಾಡಿರುತ್ತವೆ.

ಪ್ರಕೃತಿಯನ್ನು ಅರಿತು ಅದರ ಮಕ್ಕಳೊಡನೆ ಸಹಬಾಳ್ವೆ ಮಾಡಿದ ಪಕ್ಷದಲ್ಲಿ ಅದು ತನ್ನೆಲ್ಲ ಮಕ್ಕಳನ್ನು ಸಮಾನವಾಗಿ ಕಾಪಾಡುತ್ತದೆ. ಆದರೆ ಮಾನವ ತನ್ನ ದುರಾಸೆಯಿಂದ ಪ್ರಕೃತಿಯ ಸಮಸ್ತ ಸೃಷ್ಟಿಯೆಲ್ಲವೂ 'ತನಗಾಗಿಯೇ ಇರುವುದು' ಎಂಬ ಸ್ವಾರ್ಥ ಬುದ್ಧಿಯಿಂದ ಪ್ರಕೃತಿಯನ್ನು ಕಬಳಿಸುತ್ತಿದ್ದಾನೆ. ಅವನಿಗೆ 'ನೆಲದ ಬಾಯಾರಿಕೆ' ಇಂಗುತ್ತಲೇ ಇಲ್ಲ! ಅವನಿಗೆ ನೆಲದ ಮೇಲೆ ಮನೆ ಕಟ್ಟಿ, ಮನೆಯ ಮೇಲೆ ಮತ್ತೆ ಮನೆ ಕಟ್ಟಿ- ಹಲವಾರು ಮಹಡಿಗಳ ಗಗನಚುಂಬಿ ಕಟ್ಟಡಗಳನ್ನು ಕಟ್ಟಿದರೂ ತೃಪ್ತಿಯಿಲ್ಲ. ಅವನ ದುರಾಸೆ ಎಷ್ಟರಮಟ್ಟಿಗೆ ಬೆಳೆಯುತ್ತದೆಯೆಂದರೆ- ತನ್ನ ಸೋದರ ಮಾನವರನ್ನೇ ತುಳಿಯಲು ಪ್ರಾರಂಭ ಮಾಡಿ, ಅವರ ನೆಲೆಗಳನ್ನು ಒಕ್ಕಲೆಬ್ಬಿಸಿ ಅವರನ್ನು ನಿರ್ಗತಿಕರನ್ನಾಗಿಸುತ್ತಾನೆ. ಅವರ ಹೊಲ ಗದ್ದೆ ತೋಟಗಳನ್ನು

ವಶಪಡಿಸಿಕೊಂಡು ಅಲ್ಲಿ ತನ್ನ ನಗರ ಸಾಮ್ರಾಜ್ಯವನ್ನು ಸ್ಥಾಪಿಸುತ್ತಾನೆ. ಅದನ್ನೇ ಅವನು 'ನಾಗರಿಕತೆ' ಎಂದು ಕರೆದುಕೊಂಡು ಬೀಗುತ್ತಾನೆ. ಅದು ದುರಾಸೆಯ ಸ್ವಾರ್ಥ ಮೂಲದ ಬೀಗಾಟ! ಇದು ಶಾಶ್ವತವಲ್ಲ. ಬಡವರ ಬಡಬಾಗ್ನಿ ಒಂದಲ್ಲ ಒಂದು ದಿನ ಈ ಸೊಕ್ಕನ್ನೆಲ್ಲ ತಿಂದು ನೊಣೆಯುತ್ತದೆಯೆಂಬ ಸತ್ಯವನ್ನು ಕುವೆಂಪು ಅವರ 'ಕಲ್ಕಿ' ಪದ್ಯ ಅನಾವರಣ ಮಾಡುತ್ತದೆ. ಆದರೆ ದುರಾಸೆಯ ಮದದಲ್ಲಿ ವಿಹರಿಸುವ 'ನಾಗರಿಕ' ಆ ಸತ್ಯವನ್ನು ಅರ್ಥ ಮಾಡಿಕೊಳ್ಳಲು ನಿರಾಕರಿಸುತ್ತಾನೆ. ಇದನ್ನೇ ಮಹಾತ್ಮ ಗಾಂಧೀಜಿ ಅವರು 'ಪ್ರಕೃತಿಯಲ್ಲಿ ಪ್ರತಿಯೊಬ್ಬರ ಅಗತ್ಯ ಪೂರೈಸುವಷ್ಟಿದೆ. ಆದರೆ ಪ್ರತಿಯೊಬ್ಬರ ದುರಾಸೆಯನ್ನು ಪೂರೈಸುವಷ್ಟಿಲ್ಲ' ಎಂದು ಅತ್ಯಂತ ವಿಷಾದದಿಂದ ಗುರುತಿಸಿದ್ದಾರೆ. ಇದಕ್ಕೆಲ್ಲ ಮಾನವನ ಕೂಡಿಡುವ ಬಯಕೆ ಕಾರಣ. ಇತರರಿಗಿಂತ ತಾನು ಉತ್ತಮನೆಂಬ ಅಹಂಕಾರ ಅವನಲ್ಲಿ ಸಹಜವಾಗಿರಬೇಕಾದ ಮಾನವೀಯತೆಯನ್ನು ನಾಶಮಾಡುತ್ತಿದೆ. ಆ ಮಾನವೀಯ ಅಂತಃಕರಣ ಇಲ್ಲದಿರುವುದರಿಂದಲೇ ಅವರು ಅಸಹಾಯಕರ, ಮುಗ್ಧರ ಸೂರ್ಯನನ್ನು ಯಾವ ನಾಚಿಕೆಯಿಲ್ಲದೆ ತಿನ್ನುತ್ತಿದ್ದಾರೆ.

ಈ ನೆಲಭಕ್ಷಕರು ನಗರ ನಿರ್ಮಾಣದ ದಂಧೆಯಲ್ಲಿ ಉಂಟುಮಾಡುತ್ತಿರುವ ಸಾಮಾಜಿಕ ಅನಿಷ್ಟಗಳು ಅಪಾರ. ತಮ್ಮ ನಾಗರಿಕತೆಯ ನಿರ್ಮಾಣದ ದಾಹದಲ್ಲಿ ಹಸಿರುಹನನ ನಿರಂತರವಾಗಿರುವಂತೆ ನೋಡಿಕೊಂಡು ಸಿಮೆಂಟು-ಗಾಜುಗಳ ಶಾಖಭವನಗಳನ್ನು ಅನಾವರಣ ಮಾಡಿ- ಪ್ರಕೃತಿರಮಣೀಯತೆಯ ಪ್ರಶಾಂತತೆಯನ್ನು ತಂಗಾಳಿಯ ಅಮೃತ ಸಿಂಚನವನ್ನು ಆಪೋಶನ ತೆಗೆದುಕೊಂಡಿದ್ದಾರೆ. ಕೃತಕ ಗಾಳಿ, ಕೃತಕ ತಂಪು ವಾತಾವರಣದ ಮೂಲಕ ಪರಿಸರಕ್ಕೆ ಅಪಾರ ಹಾನಿಯನ್ನು ತಂದೊಡ್ಡಿದ್ದಾರೆ. ಅಷ್ಟೇ ಅಲ್ಲ, ಇವರ ನಗರ ನಿರ್ಮಾಣದ ಕೈಂಕರ್ಯದಲ್ಲಿ ದುಡಿದ ಕೂಲಿ ಕಾರ್ಮಿಕರು, ಅನಂತರ ಇವರ ಮನೆ, ಕಛೇರಿಗಳನ್ನು ಸ್ವಚ್ಛಗೊಳಿಸುವ ಸ್ವಚ್ಛತಾಗಾರರು ಎರಡನೆಯ ದರ್ಜೆಯ ಪ್ರಜೆಗಳೆನ್ನಿಸಿಕೊಂಡು ಕೊಳೆಗೇರಿಗಳಲ್ಲಿ ಅತ್ಯಂತ ಹೀನಾಯವಾಗಿ ಕೀಟಗಳಂತೆ- ಗಾಳಿ ನೀರು ಬೆಳಕುಗಳಂಥ ಅನಿವಾರ್ಯ ಅವಶ್ಯಕತೆಗಳಿಲ್ಲದೆ ಜೀವನ ಸಾಗಿಸಬೇಕಾದ ಸ್ಥಿತಿ ಬಂದೊದಗಿದೆ. ಪ್ರಜಾಸತ್ತೆಯ ಆವರಣದಲ್ಲಿ ನವಗುಲಾಮಗಿರಿಯ ಜಗತ್ತು ಮತ್ತು ಚರಿತ್ರೆಯ ಮುಂದುವರಿಂದ ಶೋಷಕಜಗತ್ತು- ಏಕಕಾಲದಲ್ಲಿ ಚಾಲ್ತಿಯಲ್ಲಿರುವಂಥ ಸ್ಥಿತಿಗೆ ನಮ್ಮ ನಗರಗಳು ರೂಪಕವಾಗಿವೆ.

ಈ ಉಳ್ಳವರ ದಬ್ಬಾಳಿಕೆಯನ್ನು ವಿಚಾರವಂತರು, ವಿವೇಕಿಗಳು ಚರಿತ್ರೆಯ ಉದ್ದಕ್ಕೂ ಪ್ರತಿರೋಧಿಸುತ್ತಲೇ ಬಂದಿದ್ದಾರೆ. ಶ್ರೀಮಂತಿಕೆಯು ಒಂದೆಡೆ ಕ್ರೋಡೀಕರಣವಾಗದಂತೆ, ಆರ್ಥಿಕ ಸಮಾನತೆಯ ಆಧಾರದ ಮೇಲೆ ಬದುಕು ನಿರಾಳವಾಗಿ ಹರಡಿಕೊಳ್ಳುವಂತೆ ಆಗಬೇಕು. ಈ ಬಗೆಯ ಕನಸು ನಮ್ಮನಿಮ್ಮೆಲ್ಲರ ಎದೆಯಲ್ಲಿ ಸದಾ ಅನುರಣಿತವಾಗಿದ್ದಾಗ ಮಾತ್ರ ಸಮಾನತೆಯ ಸಮಾಜ ನಿರ್ಮಾಣ ಸಾಧ್ಯ.

೦೯-೧೨-೨೦೧೦

# ವನವಾಸಿಗಳು!

ಗಿರಿಜನರನ್ನು ಕೆಲವರು 'ವನವಾಸಿಗಳು' ಎಂದೂ ಕರೆಯುತ್ತಾರೆ. ಅವರನ್ನು ಸಾಮಾನ್ಯವಾಗಿ ಆದಿವಾಸಿಗಳೆಂದು ಗುರುತಿಸಲಾಗಿದೆ. ಆದಿವಾಸಿಗಳೆಂದು ಕರೆಯುವಲ್ಲಿ ಅರ್ಥವೂ ಇದೆ; ಏಕೆಂದರೆ ಮೂಲತಃ ಮಾನವ ಅರಣ್ಯದಲ್ಲೇ ಹುಟ್ಟಿ ಬೆಳೆದವನೇ! ಅಲ್ಲಿಂದಲೇ ನಗರಗಳನ್ನು ನಿರ್ಮಾಣ ಮಾಡಿ, ಅಧುನಿಕನೆನಿಸಿ 'ನಾಗರಿಕ'ನಾಗಿದ್ದಾನೆ. ಅವನ ನಿಜವಾದ ಪ್ರವೃತ್ತಿಗಳು ಇಂದಿಗೂ ಅರಣ್ಯದ ವಾಸನೆಯನ್ನು ಬಿಟ್ಟುಕೊಡದಿರುವುದು ಇದಕ್ಕೆ ಸಾಕ್ಷಿಯಾಗಿವೆ. ಆಧುನಿಕ ಮಾನವ ತನ್ನನ್ನು ತಾನು ಎಷ್ಟೇ 'ನಾಗರಿಕ'ನೆಂದು ಕರೆದುಕೊಂಡರೂ ಅರಣ್ಯ ಇಂದಿಗೂ ಅವನ ಅತ್ಯಂತ ಆಕರ್ಷಣೀಯ ಸಂಗತಿಯಾಗಿದೆ. ವಾಸಕ್ಕಲ್ಲದಿದ್ದರೂ ಪ್ರವಾಸಕ್ಕಾದರೂ ಅಲ್ಲಿಗೆ ಆಗಾಗ್ಗೆ ಹೋಗಿಬರಲು ಅವನ ಮನಸ್ಸು ಬಯಸುತ್ತಿರುತ್ತದೆ. ಇದರರ್ಥ; ಅರಣ್ಯಕ್ಕೆ ಸಹಜವಾದ ಜೀವನ ಮಧುರಸೆಲೆ ಇದೆ ಎಂದಾಯಿತು. ಅದರಲ್ಲಿನ ಜೀವ ವೈವಿಧ್ಯ ಮತ್ತು ಪ್ರಕೃತಿದತ್ತ ದ್ರವ್ಯಶಕ್ತಿ ಸದಾ ವಿಕಾಸಶೀಲವೂ ಸೃಷ್ಟಿಗಮ್ಯವೂ ಆಗಿರುತ್ತದೆ. ಇಂಥ ಶಕ್ತಿಮೂಲದಿಂದಲೇ ಹುಟ್ಟಿಬಂದ ನಾಗರಿಕ ನಗರಗಳನ್ನು ಕಟ್ಟಿ ನಗರವಾಸಿಯಾದಮೇಲೆ, ಕಾಡಿನ ಬದುಕನ್ನು ನಿಕೃಷ್ಟವಾಗಿ ಕಂಡದ್ದು ಮಾತ್ರ ಚರಿತ್ರೆಯ ವ್ಯಂಗ್ಯವೇ ಸರಿ!

ನಮ್ಮ ವೇದಕಾಲದ ದಾರ್ಶನಿಕರು ಪ್ರಕೃತಿಯ ಆರಾಧಕರಾಗಿದ್ದರು; ಅರಣ್ಯದ ಶಕ್ತಿಶೀಲತೆಯನ್ನು ಗುರುತಿಸಿದ್ದರು. ಅರಣ್ಯಕ್ಕೆ ಸಕಲ ಜೀವರಾಶಿಗಳ ನಡುವೆ ಹೊಂದಾಣಿಕೆಯನ್ನು, ಸಹಬಾಳುವೆಯನ್ನು ರೂಪಿಸುವ ಮತ್ತು ತನ್ನ ಮಧುರ ನಿನಾದ ಜೋಗುಳದ ಮೂಲಕ ಆತ್ಮಕ್ಕೆ ಶಾಂತಿಯನ್ನು ಮೂಡಿಸಿ, ಧೀಶಕ್ತಿಯನ್ನು ಉದ್ದೀಪಿಸುವ ಶಕ್ತಿಯಿದೆಯೆಂದು ಅನುಭವದಿಂದ ಕಂಡುಕೊಂಡಿದ್ದರು. ಆ ಕಾರಣದಿಂದ ಅವರು ನಗರವಾಸಿಗಳಾಗಿದ್ದರೂ ವಾನಪ್ರಸ್ತವೆಂಬ ಆಶ್ರಮ ಧರ್ಮದ ಅನಿವಾರ್ಯತೆಯನ್ನು ಪ್ರತಿಪಾದಿಸಿದ್ದರು. ಲೌಕಿಕದ ಎಲ್ಲ ಮೋಹ ಸಂಬಂಧಗಳನ್ನು ಕಳಚಿಕೊಂಡು ನೆಮ್ಮದಿಯ ಅಂತ್ಯವನ್ನು ಮುಟ್ಟಬೇಕಾದರೆ ಈ ವಾನಪ್ರಸ್ತ ಅನಿವಾರ್ಯ ಸಾಧನವೆಂದು ಮನಗಂಡಿದ್ದರು.

ಜಗತ್ತಿನ ಎಲ್ಲ ಗ್ರಾಮವಾಸಿಗಳನ್ನು ಅರಣ್ಯ ಪ್ರೇಮಿಗಳೆಂದೇ ತಿಳಿಯಬೇಕು. ಸಾಮಾನ್ಯವಾಗಿ ಗ್ರಾಮಗಳು ಅರಣ್ಯಕ್ಕೆ ಅನತಿ ದೂರದಲ್ಲೇ ಇರುತ್ತವೆ. ಅವರ ಬೇಕು ಬೇಡಗಳನ್ನು ಅದು ಪೂರೈಸುತ್ತಿರುತ್ತದೆ. ಕಾಡಿನ ಅವಲಂಬನೆ ಗ್ರಾಮವಾಸಿಗಳಲ್ಲಿ ಅಧಿಕ. ನಗರವಾಸಿಗಳಿಗಿಂತ ಇವರು ಪ್ರಕೃತಿಪ್ರಿಯ ಜನರು. ಆದಿವಾಸಿಗಳು ಕಾಡೊಳಗೇ ಜೀವನ ಕಂಡುಕೊಂಡರೆ, ಇವರು ಕಾಡಿನ ಅಂಚಿನಲ್ಲಿ ಕಂಡುಕೊಳ್ಳಲು ಯತ್ನಿಸುತ್ತಾರೆ. ತಮ್ಮ ದನಕರುಗಳ ಮೇವು, ಬೇಸಾಯ

ಸಾಧನಗಳು, ಎರುವಲು ಮುಂತಾದವುಗಳನ್ನು ಕಾಡಿನಿಂದ ಪಡೆದು ಕೃಷಿ ಜೀವಿಗಳಾದರೆ, ಆದಿವಾಸಿಗಳು ಸಂಪೂರ್ಣವಾಗಿ ಕಾಡನ್ನೇ ಅವಲಂಬಿಸಿ ಬದುಕು ಮಾಡುತ್ತಾರೆ. ಆದಿವಾಸಿಗಳ ಜೀವನ ಶೈಲಿ, ಆಹಾರ ಪದ್ಧತಿ, ವಾಸ ಸ್ಥಳಗಳು ಪ್ರಕೃತಿಯಲ್ಲಿ ಲೀನಗೊಂಡಂತೆ ಇರುತ್ತವೆ. ಅಂದಂದಿನ ಆಹಾರವನ್ನು ಅಂದಂದೇ ಸಂಪಾದಿಸುವ ಅವರಲ್ಲಿ ಕೂಡಿಡುವ ಪ್ರವೃತ್ತಿ ಅಪರೂಪ. ಆದ್ದರಿಂದ ಅವರಲ್ಲಿ ನಿಜವಾದ ಸಮಾನತಾವಾದ, ಅವರಿಗರಿವಿಲ್ಲದಂತೆಯೇ ಕೆಲಸ ಮಾಡುತ್ತಿರುತ್ತದೆ. ಅದು ಅವರ ವೇಷಭೂಷಣ ಮತ್ತು ಆಹಾರ ಪದ್ಧತಿಯಲ್ಲಿ ದಟ್ಟವಾಗಿ ಎದ್ದು ತೋರುತ್ತದೆ; ದೈಹಿಕ ರಚನೆಯಲ್ಲಿ ಪಡಿಮೂಡಿರುತ್ತದೆ.

ಕಾಡಿನಿಂದ ಹೊರಬಂದು ಗ್ರಾಮಗಳನ್ನು ಕಟ್ಟಿ, ಅಲ್ಲಿ ನೆಲೆ ನಿಂತು, ಮತ್ತೆ ನಾಗರಿಕ ತಂತ್ರಜ್ಞಾನಗಳಿಂದ ನಗರಗಳನ್ನು ರಚಿಸಿಕೊಂಡು, ಆಧುನಿಕರೆನ್ನಿಸಿಕೊಂಡು ನಗರವಾಸಿಗಳಾದ ಜನ ತಾವು ನಡೆದುಬಂದ ಹಾದಿಯನ್ನು ಕೀಳೆಂದು ಭಾವಿಸುವುದು ತರವಲ್ಲ. ನಿಕೃಷ್ಟವಾಗಿ ಕಾಣುವ ಶ್ರೇಣೀಕೃತ ಮನೋಧರ್ಮ ಭಾರತೀಯ ಜಾತಿ ಪದ್ಧತಿಯ ಅನಿಷ್ಟತೆಯನ್ನು ನೆನಪಿಸುತ್ತದೆ. ಗ್ರಾಮವಾಸಿಗಳು ಆದಿವಾಸಿಗಳನ್ನು ಕೀಳಾಗಿ ಕಂಡರೆ, ನಗರ ವಾಸಿಗಳು, ಗ್ರಾಮ ವಾಸಿಗಳನ್ನು ಮತ್ತು ಆದಿವಾಸಿಗಳನ್ನು ಏಕಕಾಲದಲ್ಲಿ ಕೀಳಾಗಿ ನೋಡುತ್ತಾರೆ. 'ಕಾಡುಜನ' 'ಅನಾಗರಿಕ', 'ಸಂಸ್ಕೃತಿಯಿಲ್ಲದವ'- ಎಂಬೆಲ್ಲಾ ಮಾತುಗಳಿಂದ ಅವರನ್ನು ಜರಿಯಲಾಗುತ್ತದೆ.

'ವನವಾಸ'ವೆಂಬ ಮಾತೇ ನಮ್ಮಲ್ಲಿ 'ಕಷ್ಟ ಅನುಭವಿಸುವ ಸ್ಥಿತಿ' ಎಂದು ವ್ಯಾಖ್ಯಾನಕ್ಕೊಳಪಡುತ್ತದೆ. ಅತಿಯಾದ ಸಂಕಟ, ಬಡತನ ಅನುಭವಿಸುತ್ತಿದ್ದರೆ ನಾನು 'ವನವಾಸ ಅನುಭವಿಸುತ್ತಿದ್ದೇನೆ' ಎಂಬ ಉಕ್ತಿ ತನಗೆ ತಾನೇ ಹೊರಬೀಳುತ್ತದೆ. ಶಾಪಗ್ರಸ್ತರೂ ವಚನ ಭ್ರಷ್ಟರೂ ಜೀವನದಲ್ಲಿ ಸೋಲುಂಡವರೂ ವನವಾಸ ಮಾಡುವುದು ಅನಿವಾರ್ಯವಾಗುತ್ತದೆ. ಅಂದರೆ ನಾಗರಿಕರಿಗೆ 'ವನವಾಸ' ಒಂದು ಶಿಕ್ಷೆ. ನಮ್ಮ ಪ್ರಾಚೀನ ಕಾಲದ ಮೇಲ್ಜಾತಿಯೊಂದದರಲ್ಲಿ ಮದುವೆಗೆ ಮುನ್ನ ಮೈನೆರೆದು ಕೂತ ಹೆಣ್ಣುಮಗಳನ್ನು ಕಾಡಿಗಟ್ಟುವ ಪದ್ಧತಿಯಿತ್ತು; ಮದುವೆಯಾಗಿ ಗಂಡನ ಸಾವಿನಿಂದ ವಿಧವೆಯಾದ ತರುಣಿ ಅನೈತಿಕ (?) ಲೈಂಗಿಕ ಸಂಬಂಧ ಹೊಂದಿದ್ದಲ್ಲಿ ಘಟಶ್ರಾದ್ಧ ಮಾಡಿ, ಅರಣ್ಯಕ್ಕೆ ದೂಡುವ ಪದ್ಧತಿಯಿತ್ತು. ಇಲ್ಲೆಲ್ಲಾ 'ವನವಾಸ'ವೆಂಬುದು ನಾಗರಿಕ ಪ್ರಪಂಚಕ್ಕೆ ಶಿಕ್ಷಾಕೇಂದ್ರವಾಗಿ ಪರಿಗಣಿತವಾಗಿತ್ತು.

ಅಂದಹಾಗೆ ಇಂದು 'ವನ'ವೆಂಬ ಪದಕ್ಕೆ ಅರಣ್ಯ ಅಥವಾ ಕಾಡು ಎಂಬ ಅರ್ಥ ಉಳಿದಿಲ್ಲ. 'ವನ'ವೆಂದರೆ ಕೃತಕ ಅಥವಾ ಸಂರಕ್ಷಿತ ಮೋಜಿನ ತಾಣ ಎಂಬ ಅರ್ಥಕ್ಕೆ ಇಳಿದಿದೆ. 'ಕಾಡು ಅಥವಾ ಅರಣ್ಯ'ದಲ್ಲಿ ದಟ್ಟತೆ, ಕ್ರೂರತೆ, ವೈವಿಧ್ಯತೆ ಮತ್ತು ಸೌಂದರ್ಯತೆಯ ಅರ್ಥ ತರಂಗಗಳು ಮೂಡುತ್ತವೆ.

೨೩-೧೨-೨೦೧೦

# ಮಾಹಿತಿ ಮತ್ತು ಅರಿವು

ಈ ಕಾಲಘಟ್ಟವನ್ನು 'ಮಾಹಿತಿ ಯುಗ'ವೆಂದು ಗುರುತಿಸುತ್ತಾರೆ. ವರ್ತಮಾನ ಕಾಲದಲ್ಲಿ ವಿದ್ಯುನ್ಮಾನ ಕ್ಷೇತ್ರದಲ್ಲಿ ಆದ ಕ್ರಾಂತಿಯ ಪರಿಣಾಮವಾಗಿ ಜಗತ್ತಿನ ಜ್ಞಾನವೆಲ್ಲವೂ ಮಾಹಿತಿ ರೂಪದಲ್ಲಿ ನಮಗೆ ದೊರಕುತ್ತಿದೆ. ನಮ್ಮ ಪೂರ್ವಿಕರ ಕಲಿಕೆಯ ಶ್ರಮವನ್ನು, ಮಿತಿಯನ್ನು ಗಮನಿಸಿದರೆ ಇಂದು ನಮಗೆ ಮಾಹಿತಿ ಅತ್ಯಂತ ಸುಲಭವಾಗಿರುವುದು ಸತ್ಯ. ನಮ್ಮ ಓದು ಕೊಠಡಿಯ ಕಂಪ್ಯೂಟರ್ ಮುಂದೆ ಕುಳಿತು ಬೆರಳ ತುದಿಯನ್ನು ಕೀಲಿಮಣೆಯ ಮೇಲೆ ಆಡಿಸತೊಡಗಿದರೆ ಜಗತ್ತು ಭೂತ- ವರ್ತಮಾನ- ಭವಿಷ್ಯಗಳ ವ್ಯಾಪ್ತಿ ಮತ್ತು ಸ್ವರೂಪಗಳ ರೂಪದಲ್ಲಿ ಬಿಚ್ಚಿಕೊಳ್ಳತೊಡಗುತ್ತದೆ. ವಿಪುಲವಾದ ಮಾಹಿತಿ ನಿಮ್ಮ ಕಣ್ಮುಂದೆ ಅಕ್ಷರ ರೂಪದಲ್ಲಿ, ದೃಶ್ಯಾವಳಿಗಳ ರೂಪದಲ್ಲಿ ಅನಾವರಣಗೊಳ್ಳುತ್ತದೆ. ಅನೇಕ ಬಾರಿ ನಿಮ್ಮ ಕಣ್ಮುಂದೆ ಮೂಡುವ ವಿಪುಲ ಮಾಹಿತಿ ನಿಮಗೆ ದಿಗ್ಭ್ರಮೆಯನ್ನೂ ಭಯವನ್ನೂ ಮೂಡಿಸುತ್ತದೆ; ಗೊಂದಲಗಳನ್ನು ಸೃಷ್ಟಿಸುತ್ತದೆ.

ಆದರೆ ಹಿಂದೆ ಜ್ಞಾನ ಸಂಪಾದನೆಯ ಮಾರ್ಗ ಸುಲಭವಾಗಿರಲಿಲ್ಲ. ಅದೊಂದು ಸಾಧನೆ; 'ಶಿಕ್ಷಣ' ದೇಹ ಮನಸ್ಸುಗಳನ್ನು ಸಮಚಿತ್ತ ಸ್ಥಿತಿಯಲ್ಲಿ ಕೂಡಿಸಿ ಕಲಿಯುವಿಕೆಯಲ್ಲಿ ತೊಡಗಿಸಬೇಕಾಗಿತ್ತು. ಅದು ಮುಖ್ಯವಾಗಿ ಗುರುವಿನ ಮೂಲಕ ಹರಿದು ಬರುತ್ತಿತ್ತು. ಈ ಜ್ಞಾನ ಪ್ರವಾಹದಲ್ಲಿ ಶಿಷ್ಯನ ಶಕ್ತಿಗನುಗುಣವಾಗಿ ದಕ್ಕಿಸುಕೊಳ್ಳುವಷ್ಟು ದೊರೆಯುತ್ತಿತ್ತು. ಅಂಥ ಪರೀಕ್ಷೆಗಳಲ್ಲಿ ಗೆದ್ದು ಬಂದವನು ನಿಜಕ್ಕೂ ಅರಿವಿನಿಂದ ಕೂಡಿರುತ್ತಿದ್ದ. ಏಕೆಂದರೆ ಅಂದಿನ ಪರೀಕ್ಷೆಗಳು ತಾರತಮ್ಯಭಾವವನ್ನು ತೋರುತ್ತಿರಲಿಲ್ಲ; ಒಳದಾರಿಗಳನ್ನು ಬಿಟ್ಟುಕೊಳ್ಳುತ್ತಿರಲಿಲ್ಲ.

ಅಂದಿನ ಕಲಿಕೆಯು ವಿಸ್ತಾರದ ವ್ಯಾಪ್ತಿಯನ್ನು ಹೊಂದಿರಲಿಲ್ಲವೆಂಬ ಮಾತಿನಲ್ಲಿ ಸತ್ಯವಿದೆ. ಅದು ಜಾಗತಿಕ ವಿದ್ಯಮಾನಗಳ ವ್ಯಾಪ್ತಿಯನ್ನು ಪಡೆದಿರಲಿಲ್ಲ. ಅದಕ್ಕೆ ಭೌಗೋಳಿಕ ಕಾರಣಗಳಿದ್ದವು. ಒಂದು ಕಡೆಯಿಂದ ಮತ್ತೊಂದೆಡೆಗೆ ಜ್ಞಾನಭಿಕ್ಷುವಾಗಿ ಹೋಗಿ ಬರುವುದು ಕಷ್ಟಸಾಧ್ಯವಾಗಿತ್ತು. ಪ್ರಾಚೀನ ಭಾರತದಲ್ಲಿ ಪ್ರಸಿದ್ಧ ಜ್ಞಾನ ಕೇಂದ್ರಗಳಾಗಿದ್ದ ತಕ್ಷಶಿಲಾ, ನಳಂದ, ಕಾಶಿ, ಕಂಚಿ ಮೊದಲಾದವು ದೇಶದ ಬೇರೆ ಬೇರೆ ಮೂಲೆಗಳಲ್ಲಿದ್ದವು. ಎಲ್ಲರೂ ಅವನ್ನು ಹುಡುಕಿ ಹೋಗಿ ಬರುವಂಥ,ಕಲಿತು ಬರುವಂಥ ಅನುಕೂಲಗಳಿರಲಿಲ್ಲ. ಹೀಗಾಗಿ ಸ್ಥಳೀಯವಾಗಿ ದೊರಕುವ ಗುರುಕುಲದ ಜ್ಞಾನಮಿತಿಯ ಪರಿಧಿಯೊಳಗೇ ಕಲಿಕೆ ಸಾಗುತ್ತಿತ್ತು. ಹೀಗಾಗಿ ಈ ಕಲಿಕೆಗೆ ಈಗಿರುವಂತೆ ವಿಶ್ವವ್ಯಾಪಕತೆ ಪ್ರಾಪ್ತವಾಗುತ್ತಿರಲಿಲ್ಲ. ಗುರು ತನಗೆ ತಿಳಿದ ಜ್ಞಾನವನ್ನು ಶಿಷ್ಯರಿಗೆ ಧಾರೆಯೆರೆಯುತ್ತಿದ್ದ. ಆದರೆ ಅದರ ಮಿತಿ ಗುರು-ಶಿಷ್ಯರಿಬ್ಬರಿಗೂ

ತಿಳಿದಿತ್ತು. ಮಿತಿಯನ್ನು ಒಪ್ಪಿಕೊಳ್ಳುವ ವಿನಯವಿತ್ತು. ಆದ್ದರಿಂದಲೇ ಕಲಿಕೆಯನ್ನು ಅವರು ಅನಂತವೆಂದು ಕರೆದರು. ಅದು ವಿಸ್ತಾರವಾಗಿ ಹರಡಿಕೊಳ್ಳುವುದರ ಬದಲು ವ್ಯಕ್ತಿತ್ವದ ಆಳಕ್ಕೆ ಇಳಿಯತೊಡಗಿತು. ಹೀಗಾಗಿ ಕಲಿಕಾರ್ಥಿ ವಿದ್ಯೆಯೆಂದರೆ ಅಂತಃಸಾಕ್ಷಿಯನ್ನು ಜಾಗೃತಗೊಳಿಸಿಕೊಳ್ಳುವುದು; ಬದುಕಿನ ಮತ್ತು ಬದುಕಿನಾಚೆಯ ಬದುಕಿನ ಬಗ್ಗೆ ತಿಳಿಯುವುದು; ಸಮುದಾಯ ಜೀವಿಯಾಗಿ ಅರಳುವುದು; ನೈತಿಕ ಪಥದಲ್ಲಿ ಸಾಗುವುದು ಎಂದು ತಿಳಿದು ಗುರುಕುಲದಿಂದ ಹೊರ ಬರುತ್ತಿದ್ದ ಆ ತಿಳಿವನ್ನು ಬದುಕಲು ಪ್ರಯತ್ನಿಸುತ್ತಿದ್ದ.

ವರ್ತಮಾನದ ಕಾಲ ಹಿಂದಿನಂತಿಲ್ಲ. ಜಗತ್ತು ವಿಜ್ಞಾನ-ತಂತ್ರಜ್ಞಾನದ ಕಾರಣದಿಂದಾಗಿ ಕಿರಿದಾಗಿದೆ. ಭೂಮಿಯಾಚೆಗಿನ ನಕ್ಷತ್ರ ತಾರೆ ಗ್ರಹಗಳ ಅರಿವು ವಿಸ್ತಾರಗೊಂಡಿದೆ. ಆ ಜ್ಞಾನ ಮಾಹಿತಿಗಳೆಲ್ಲವೂ ನಮ್ಮ ಬೆರಳ ತುದಿಯಲ್ಲೇ ಕುಣಿಯುತ್ತಿರುವಂತೆ ಸತ್ಯರೂಪ ತಾಳಿದೆ. ಆಧುನಿಕ ಶಿಕ್ಷಿತ ವಿಪುಲವಾದ ಮಾಹಿತಿ ಜ್ಞಾನದಿಂದ ತುಂಬಿ ತುಳುಕಿದವನಂತೆ ಕಾಣುತ್ತಾರೆ. ಆದರೆ ಅವನು ತಿಳಿದ ವಿಪುಲ ಮಾಹಿತಿಗಳೆಲ್ಲವೂ ಅವನನ್ನು ಜ್ಞಾನಿಯನ್ನಾಗಿ ಮಾಡಲು ವಿಫಲವಾಗಿವೆಯೆಂಬುದು ನಮ್ಮ ಅನುಭವಕ್ಕೆ ಈಗ ಗೋಚರವಾಗುತ್ತಿದೆ. ಈ ವಿಪುಲ ಮಾಹಿತಿಗಳು ಅವನನ್ನು ಭೋಗಶೀಲನನ್ನಾಗಿ ರೂಪಿಸುತ್ತಿವೆ; ಅದನ್ನು ಅವನು 'ಅಭಿವೃದ್ಧಿ' ಎಂಬ ಹೆಸರಲ್ಲಿ ಗುರುತಿಸುತ್ತಾನೆ. ಆ 'ಅಭಿವೃದ್ಧಿ'ಗಾಗಿ ತಾನು ಕಲಿತ ಮಾಹಿತಿಯನ್ನು ಬಳಸುತ್ತಾನೆ. ಅದರಿಂದ ಅನೇಕ ಲೌಕಿಕ ಸೌಲಭ್ಯ ಸುಖಗಳನ್ನು ಪಡೆಯುತ್ತಾನೆ. ಆ ಸೌಲಭ್ಯ ಸುಖ ಪ್ರಾಪ್ತಿಯೇ ಬದುಕಿನ ಪರಮ ಗುರಿಯೆಂದು ತಿಳಿಯುತ್ತಾನೆ. ಅವನು ಹೆಚ್ಚೆಚ್ಚು ವ್ಯಕ್ತಿ ಕೇಂದ್ರಿತನಾಗುತ್ತಾನೆ. ತನಗೂ ತನ್ನ ಕುಟುಂಬಕ್ಕೂ, ತನಗೂ ತನ್ನ ಸಮಾಜಕ್ಕೂ ಇರುವ ಸಂಬಂಧ ಅರ್ಥವಂತಿಕೆಯನ್ನು ಅರಿಯಲು ವಿಫಲನಾಗುತ್ತಾನೆ.

ಇದಕ್ಕೆ ಬಹುಪಾಲು ಕಾರಣ ಆಧುನಿಕ ವಿದ್ಯೆಯಲ್ಲಿ ದೊರಕುತ್ತಿರುವ ವಿಪುಲ ಮಾಹಿತಿ ಅವನಲ್ಲಿ ಜೀರ್ಣವಾಗಿ ರಕ್ತಮಾಂಸವಾಗಿ, ಜ್ಞಾನವಾಗಿ ಅರಳದೆ ಇರುವುದು. ಅದು ಜ್ಞಾನ ಮೂಲವಾಗಿ ಅರಿವಾಗಿ ವ್ಯಕ್ತಿಯಲ್ಲಿ ಅರಳಿದಾಗ ಮಾತ್ರ ಅದು ನಿಜವಾದ ವಿದ್ಯೆ ಎನ್ನಿಸಿಕೊಳ್ಳುತ್ತದೆ. ಆಗ ನಮಗೆ ಸಮಾಜ ಜೀವಿಯೂ, ಜನಪರ ಜೀವಿಯೂ ಆದ ಮಾನವೀಯ ಸೆಲೆಯ ವ್ಯಕ್ತಿ ಸಿಗುತ್ತಾನೆ. ವಿದ್ಯೆ ಕೇವಲ ಮಾಹಿತಿ ಸಂಗ್ರಹಣೆಯಲ್ಲ; ಭೌತಿಕ ಸುಖದ ಪೂರೈಕೆ ಅದರ ಗುರಿಯಲ್ಲ. ಅದಕ್ಕೆ ಸಾಮಾಜಿಕ ಸುಖದ ಗುರಿ ಇರುತ್ತದೆ. ವಿದ್ಯೆಯೆಂದರೆ ಸಾಮಾಜಿಕ ಸುಖದಲ್ಲಿ ತನ್ನ ಸುಖವನ್ನು ಕಾಣುವ ಸ್ಥಿತಿ. ಆ ಸ್ಥಿತಿಗೆ ವ್ಯಕ್ತಿ ತಲುಪಬೇಕಾದರೆ ಅವನು ಕಲಿತ ಕಲಿಕೆಯೆಲ್ಲವೂ ಅವನಲ್ಲಿ ಅರಿವಾಗಿ ಅರಳಿ ಜೀವನ ಮಾರ್ಗದರ್ಶಿಯಾಗಬೇಕು. ಆಗ ಮಾತ್ರ ಅದಕ್ಕೊಂದು ಅರ್ಥ, ಸಾರ್ಥಕ್ಯ ಪ್ರಾಪ್ತಿ.

೦೬-೦೧-೨೦೧೧

# ಮೌಢ್ಯವೆಂಬ ಇಲ್ಲಣ!

ಡಿಸೆಂಬರ್ 29-ಕುವೆಂಪು ಜನ್ಮದಿನ.

ಕುವೆಂಪು ಅವರು ಆಧುನಿಕ ಕನ್ನಡ ಸಂಸ್ಕೃತಿಯ ಅತ್ಯಮೂಲ್ಯ ಕೊಡುಗೆ. ಆತ ಕನ್ನಡದ ಮಹಾಕವಿ, ಕಾದಂಬರಿಕಾರ, ನಾಟಕಕಾರ, ಪ್ರಬಂಧಕಾರ, ವಿಮರ್ಶಕ, ಚಿಂತಕ- ಹೀಗೆ ಅವರ ಸಾಧನೆಗಳನ್ನು ಗುರುತಿಸುತ್ತಾ ಹೋಗಬಹುದು. ಕನ್ನಡ ಸಾಹಿತ್ಯಕ್ಕೆ ಹೊಸ ಕಸುವನ್ನೂ ಅನುಭವವನ್ನೂ ತಂದುಕೊಟ್ಟು ಅದಕ್ಕೊದು ವಿಶಿಷ್ಟತೆಯ ಮೆರಗನ್ನೂ ತನ್ಮೂಲಕ ಚರಿತ್ರೆಯಲ್ಲಿ ಕೇಳರಿಯದ ಬೆರಗನ್ನೂ ಮೂಡಿಸಿದ ಅದ್ಭುತ ಸೃಜನಶೀಲ ವ್ಯಕ್ತಿತ್ವ ಅವರದು. ಅದುವರೆಗಿನ ಚರಿತ್ರೆಯಲ್ಲಿ ಕೇಳಿರದ ಪ್ರಶ್ನೆಗಳನ್ನು ವ್ಯವಸ್ಥೆಗೆ ಹಾಕುತ್ತಾ, ಹೊಸ ಹೊಳಹುಗಳನ್ನು ಹೊಸ ಅನುಭವ ಪ್ರಪಂಚದ ಅನಾವರಣವನ್ನು ಮಾಡಿದ ಕವಿ. ದುಡಿಮೆಗೆ ಸ್ವಾಭಿಮಾನವನ್ನೂ ಸಾಮಾಜಿಕ ನ್ಯಾಯವನ್ನೂ ಹಕ್ಕೊತ್ತಾಯವೆಂಬಂತೆ ಮಂಡಿಸಿದ ಕವಿ. ಸಂಪತ್ತು, ವಿದ್ಯೆ ಮತ್ತು ಸಾಮಾಜಿಕ ಸ್ಥಾನಮಾನಗಳು ಶ್ರೇಣೀಕೃತ ವ್ಯವಸ್ಥೆಯ ಸಾಮಾಜಿಕ ಸಂರಚನೆಯಲ್ಲಿ ಕೆಲವರ ಸ್ವತ್ತಾಗಿದ್ದ ಸಂದರ್ಭದಲ್ಲಿ 'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಎಂಬ ಸಮತಾ ಸಂದೇಶವನ್ನು ಸಾರಿದ ಕವಿ. ಅದಕ್ಕಿಂತ ಮುಖ್ಯವಾಗಿ ಹೆಸರಿರದ, ಹೆಸರು ಹೇಳಲಾಗದ ಸಾಮಾನ್ಯಾತಿ ಸಾಮಾನ್ಯನನ್ನು 'ಶ್ರೀ' ಎಂಬ ವಿಶೇಷಣ ಕೊಟ್ಟು 'ಶ್ರೀಸಾಮಾನ್ಯ'ನೆಂದು ಗೌರವಿಸಿ ಕರೆದದ್ದು ಕುವೆಂಪು ಸಾಧನೆ!

ಅತಿ ಸಾಮಾನ್ಯರಾದ ಇವರ ಜಲಗಾರ, ಏಕಲವ್ಯ, ಶಂಭೂಕ, ಮಂಥರೆ, ಚೆನ್ನ ಹಾಗೂ ಹೆಸರಿಲ್ಲದ ಅಸಂಖ್ಯಾತ ಪಾತ್ರಗಳಾಗಲಿ; ಗುತ್ತಿ, ತಿಮ್ಮ, ಐತ, ಪೀಂಚಲು ಮುಂತಾದ ಮಣ್ಣಿನಿಂದ ಎದ್ದು ಬಂದವರಾಗಲೀ, ನಾವು ಈ ಹಿಂದೆ ಕೇಳರಿಯದ ನೂರಾರು ಮರಗಿಡ ಬಳ್ಳಿ ಹುಲ್ಲುಗಳು, ಹೂವುಗಳು, ಪ್ರಾಣಿ ಪಕ್ಷಿಗಳು ಜೀವಂತವಾಗಿ ಸದಾ ಕನ್ನಡ ಓದುಗರ ಮನದಲ್ಲಿ ನೆಲೆಸಿದ್ದಾರೆ. ಒಂದು ಸಂಸ್ಕೃತಿಯನ್ನು ಪುನಾರಚಿಸುವ ಕೆಲಸವನ್ನು ಇವರಷ್ಟು ಅಚ್ಚುಕಟ್ಟಾಗಿ ಮಾಡಿದವರು ಕಡಿಮೆ ಎಂದರೂ ತಪ್ಪಲ್ಲ. ಇವರಿಂದ ಸ್ಫೂರ್ತಿ ಪಡೆದ ಸಾವಿರಾರು ಶೂದ್ರ-ದಲಿತ ವರ್ಗದ ತರುಣರು ಕನ್ನಡ ಬದುಕನ್ನು ಹೊಸದಾಗಿ ನಿರ್ಮಿಸಹೊರಟಿದ್ದು ಈಗ ಇತಿಹಾಸವಾಗಿದೆ. ಕುವೆಂಪು ಅವರಿಂದ ಸ್ಫೂರ್ತಿ ಪಡೆದು, ಅವರ ಪದ್ಯ ಗದ್ಯಗಳನ್ನು ನೆರವಿಗೆ ಪಡೆದು ಕನ್ನಡ ನೆಲದಲ್ಲಿ ಹತ್ತಾರು ಜನಪರ ಚಳವಳಿಗಳು ಪ್ರಾರಂಭಗೊಂಡವು. ಸಾಹಿತಿಯ ಸ್ಥಾನಮಾನವನ್ನು ಮೀರಿ ಕುವೆಂಪು ಒಬ್ಬ ಸಾಂಸ್ಕೃತಿಕ ನಾಯಕನಂತೆ ಕಾರ್ಯ ನಿರ್ವಹಿಸಿದರು. ಈ ಕಾರಣದಿಂದಲೇ ಕನ್ನಡ ಶಿಷ್ಟ ಸಾಹಿತ್ಯ ಪರಂಪರೆಯಲ್ಲಿ ಇನ್ನಿತರ ಲೇಖಕರಿಗಿಂತ ಇವರು ವಿಭಿನ್ನರಾಗುವುದು.

ಶಿಕ್ಷಣದ ಮೂಲಕ ಅರಿವನ್ನೂ ವೈಜ್ಞಾನಿಕ ಹಾಗೂ ವೈಚಾರಿಕ ಮನೋಧರ್ಮವನ್ನು ಮೂಡಿಸಬೇಕೆಂದು ಸಾಮಾಜಿಕ ಚಿಂತಕನಂತೆ ತತ್ವಜ್ಞಾನಿಯಂತೆ ಕೆಲಸ ಮಾಡಿದರು. ಈ ನಿಟ್ಟಿನಲ್ಲಿ ಅವರು ತಮ್ಮ ಜೀವಿತದ ಇಳಿಗಾಲದಲ್ಲಿ ಶುದ್ಧ ಸಾಹಿತ್ಯ ರಚನೆಯ ಕೆಲಸವನ್ನು ಕೈಬಿಟ್ಟು ಸಂಪೂರ್ಣವಾಗಿ ಜನತೆಯಲ್ಲಿ ವೈಚಾರಿಕ ಜಾಗೃತಿಯನ್ನು ಮೂಡಿಸುವ ಬರೆಹದಲ್ಲಿ ತಲ್ಲೀನರಾದರು. ತಮ್ಮ ವಿಶ್ವಮಾನವ ಸಂದೇಶವನ್ನು ಪ್ರಚಾರ ಮಾಡಿದರು; ತಮ್ಮ ಬಳಿ ಬಂದವರನ್ನು ಪ್ರಚಾರ ಮಾಡಲು ತಿಳಿಹೇಳುತ್ತಿದ್ದರು.

ಕುವೆಂಪು ಅವರು ತಮ್ಮ ಜೀವಿತದ ಕಾಲದಲ್ಲಿ ಎಂದೂ ದೇವಸ್ಥಾನಗಳಿಗೆ ಹೋದವರಲ್ಲ. ಪೂಜೆ ಪುನಸ್ಕಾರ ಯಜ್ಞ ಯಾಗ ಹೋಮಗಳನ್ನು ಆಚರಿಸಿದವರಲ್ಲ. ಮತ ಮೌಢ್ಯ ಕಂದಾಚಾರಗಳನ್ನು ಅವರಷ್ಟು ಉಗ್ರವಾಗಿ ಖಂಡಿಸಿದವರು, ವಿರೋಧಿಸಿದವರು ಕನ್ನಡ ಸಂಸ್ಕೃತಿ ಸಂದರ್ಭದಲ್ಲಿ ಬಲು ಅಪರೂಪ. ಕೇವಲ ಹಿಂದೂ ಧರ್ಮದ ಪುರೋಹಿತಶಾಹಿಯನ್ನು ತಿರಸ್ಕರಿಸಿದರೆ ಸಾಲದು, ಎಲ್ಲ ಮತಧರ್ಮಗಳಲ್ಲಿರುವ ಪುರೋಹಿತಶಾಹಿಯನ್ನು ಸಮಾನವಾಗಿ ಪ್ರತಿರೋಧಿಸಬೇಕೆಂದು ಅವರು ಹೇಳಿದ್ದರು. ಅಷ್ಟೇ ಅಲ್ಲದೆ, ನವ ಪುರೋಹಿತಶಾಹಿ ಅಕ್ಷರಸ್ಥ ಶೂದ್ರ ಜಾತಿಗಳಲ್ಲಿ ಉದ್ಭವಿಸುತ್ತಿರುವುದನ್ನು ಗುರುತಿಸಿ, ಅದು ಅತ್ಯಂತ ಖಂಡನಾರ್ಹವೆಂದು ಗದಾ ಪ್ರಹಾರ ನಡೆಸಿದರು. ವಿದ್ಯೆ ಕಲಿತ ಶೂದ್ರ-ನಿಮ್ನ ಜಾತಿ ಜನಾಂಗಗಳು ಅನುಕರಣೆಯ ಜಾಡ್ಯಕ್ಕೆ ಬಿದ್ದು ಮತ ಮೌಢ್ಯ ಕಂದಾಚಾರಗಳಿಗೆ ಬಲಿಯಾಗುತ್ತಿರುವುದನ್ನು ಬೌದ್ಧಿಕ ವಿವೇಚನೆಯಿಲ್ಲದ ನಡೆಯೆಂದು ಜರಿದರು.

ಅಕ್ಷರ ಜ್ಞಾನ ಮತ್ತು ವೈಜ್ಞಾನಿಕ ಕೊಡುಗೆಗಳು ತಂದುಕೊಟ್ಟಿರುವ ನಾಗರಿಕ ಸವಲತ್ತು ಇಂದು ಅಧಿಕವಾಗಿದೆ. ಆದರೆ ಅಷ್ಟೇ ಪ್ರಮಾಣದಲ್ಲಿ ಮತ ಮೌಢ್ಯಗಳು, ಜೋತಿಷ್ಯ ವಾಮಾಚಾರಗಳು ದಟ್ಟವಾಗಿ ಜನಸಮುದಾಯವನ್ನು ಆವರಿಸಿಕೊಳ್ಳುತ್ತಿವೆ. ಮೊದಲಿಗಿಂತಲು ಇಂದು ಪುರೋಹಿತಶಾಹಿ ಶಕ್ತಗೊಂಡಿದೆ. ಅದಕ್ಕೆ ರಾಜಕೀಯ ಶಕ್ತಿಗಳ ಬೆಂಬಲವೂ ಇದೆ. ಆದುದರಿಂದ ಕುವೆಂಪು ಮತ್ತೆ ಮತ್ತೆ ಪ್ರಸ್ತುತವಾಗುತ್ತಾರೆ. ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯ ವರ್ತಮಾನದ ತಲ್ಲಣಗಳಿಗೆ ಬೆಳಕು ತೋರುವ ಶಕ್ತಿ ಮತ್ತು ಹೊಳಹುಗಳನ್ನು ಹೊಂದಿದೆ.

೨೦-೦೧-೨೦೧೧

# ಬಕುತಿ ಎಂಬುದು ತೋರುಂಬ ಲಾಭ!

ಭಕ್ತಿಯೆಂಬುದನ್ನು ಬಹಿರಂಗವಾಗಿ ಮಾಡಲಾಗದೆಂದು ಬಸವಣ್ಣನವರು ಅಭಿಪ್ರಾಯಪಡುತ್ತಾರೆ. ಅದು ತೋರಿಕೆಯ ಪ್ರದರ್ಶನದ ವಿಷಯವಲ್ಲ. ಸಂಗಾತಿಯ ರತಿ ಸುಖದಂತೆ ಏಕಾಂತದಲ್ಲಿ ಅನುಭವಿಸಿ ಪಡೆವ ಆತ್ಮಾನಂದ! ಸತಿಪತಿಗಳಿಗೆ ಮಾತ್ರ ಸೇರಿದ ಅತ್ಯಂತ ಸ್ವಂತದ ಸಂಗತಿ. ಭಕ್ತಿಯೂ ಹಾಗೆಯೇ ತೀರ ವೈಯಕ್ತಿಕ ನೆಲೆಯಲ್ಲಿ ಅನುಭವಿಸಬೇಕಾದ ಭಕ್ತ ಭಗವಂತರ ಆತ್ಮಸಂಗಾತದ ಅನುಭವ ಸಾಂಗತ್ಯ! ಆದುದರಿಂದಲೇ ಅದು ಗುಪ್ತವಾಗಿ ಆಚರಿಸಬೇಕಾದ ಅಂತರಂಗದ ಕ್ರಿಯೆ. ಅದು ದೈಹಿಕ ಶುದ್ಧಿ ಅಥವಾ ಮಂತ್ರ ಪಠಣಗಳನ್ನು ನಿರೀಕ್ಷೆ ಮಾಡದು. ನಿಜವಾದ ಭಕ್ತನೊಬ್ಬನಿಗೆ ಆ ಬಗೆಗಿನ ಚಿಹ್ನೆಗಳೇ ಇರುವುದಿಲ್ಲ. ಅವನೊಬ್ಬ ಸಾಮಾನ್ಯನಂತೆ ಅಲ್ಪನಂತೆ ಅನಾಮಿಕನಾಗಿರುತ್ತಾನೆ. ಧಾರ್ಮಿಕ-ಸಿದ್ಧಾಂತ ರೂಪಗಳ ದಿರುಸು-ನಾಮ ಮುದ್ರೆ- ಸಂಕೇತಗಳನ್ನು ಮೆರೆಸುವುದು ಭಕ್ತನು ಭಗವಂತನಿಗೆ ಮಾಡುವ ಅವಮಾನವೆಂದು ಭಾವಿಸುತ್ತಾನೆ. ಅದನ್ನೇ ನಿಜವಾದ ಚಿಂತಕರು ಡಾಂಬಿಕತೆಯೆಂದು ಕರೆದಿರುವುದು. ಇಂಥ ಕಪಟ ಕರ್ಮಠರನ್ನು ನಮ್ಮ ವಚನಕಾರರು- ದಾಸರು ನೇರವಾಗಿ ವಿಡಂಬಿಸಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಬದುಕಿನ- ಬದುಕಿನಾಚೆಯ ಅಂತಿಮ ಸತ್ಯವನ್ನು ತಿಳಿಯುವುದೇ ಅಧ್ಯಾತ್ಮದ ಮುಖ್ಯ ಶೋಧವೆಂದು ತಿಳಿಯುವುದಾದರೆ, ಅದಕ್ಕೆ ಮಂತ್ರ ಮೂರ್ತಿಪೂಜೆ, ಜಾಗಟೆ ಗಂಟೆ ಮುಂತಾದ ಅಬ್ಬರಗಳ ಆವಶ್ಯಕತೆಯಿರುವುದಿಲ್ಲ. ಅದೊಂದು ಬಗೆಯ ಗುಪ್ತ - ಮೌನ ನೆಲೆಯಲ್ಲಿ ಸಾಗುವ ಸಾಧನೆ. ಯಾವುದೇ ಬಗೆಯ ಲೌಕಿಕ ಬಯಕೆಯಿಂದ ಮೂಡಿರುವಂಥದ್ದಲ್ಲ. ಅದು ಕೇವಲ ಆತ್ಮಶುದ್ಧಿ, ಆತ್ಮಸಿದ್ಧಿ ಮತ್ತು ಜ್ಞಾನ ತೃಪ್ತಿಗಾಗಿ ಪರಿತಪಿಸುವ ಪ್ರಯತ್ನವಷ್ಟೇ ಆಗಿರುತ್ತದೆ. ಆಗಿರಬೇಕು. ಅದು ಬಿಟ್ಟು ಆ ಪ್ರಯತ್ನದಲ್ಲಿ ಲೌಕಿಕ ಬಯಕೆಯ ಛಾಯೆ ಇಣುಕಿದ ಕೂಡಲೇ ಅದು ಸ್ವಾರ್ಥವಾಗಿಬಿಡುತ್ತದೆ.

ಪೂಜೆ, ಗುಡಿಗೋಪುರ ನಿರ್ಮಾಣ, ಹಬ್ಬಹರಿದಿನ, ಉತ್ಸವ- ಮೆರವಣಿಗೆ ಮುಂತಾದ ಆಚರಣೆ ಮತ್ತು ಮೂರ್ತ ಸ್ವರೂಪದ ಲಕ್ಷಣಗಳನ್ನು ಭಕ್ತಿಯ ಸೂಚಕಗಳೆಂದು ಕರೆಯಲಾಗಿದೆ. ಈ ತೆರನ ಸೂಚಕಗಳಲ್ಲಿ ಬೌದ್ಧಿಕತೆಯ ಚಿಂತನೆ- ತತ್ವದರ್ಶನಗಳಿಗಿಂತ ಭಾವುಕತೆಯ ಅಂಶವೇ ಪ್ರಧಾನವಾಗಿ ಕೆಲಸ ಮಾಡುತ್ತದೆ. ಹಾಗೆ ನೋಡಿದರೆ ಭಕ್ತಿಯೆಂಬುದು ಭಾವಪ್ರಧಾನವಾದುದೇ ಹೊರತು ಬೌದ್ಧಿಕ ನೆಲೆಯಲ್ಲಿ ನಿಂತಿರುವಂಥದ್ದಲ್ಲ. ಆದ್ದರಿಂದ ಭಕ್ತಿಯಲ್ಲಿ ವಿಚಾರಪರತೆಗಿಂತ ಮಿಗಿಲಾಗಿ ಆವೇಶ ಅತಿರೇಕಗಳು ಸದಾ ಸಂಚಾರಿಗಳಾಗಿರುತ್ತವೆ. ಅಲ್ಲಿ ನಂಬಿಕೆಯೇ ಆಳ್ವಿಕೆ

ನಡೆಸುತ್ತದೆ. ನಂಬಿಕೆಗೆ ಕಾರಣ ಮತ್ತು ವಿಚಾರಗಳ ಬುನಾದಿ ಬೇಕಿರುವುದಿಲ್ಲ. ಈ ಭಾವನಾತ್ಮಕ ನಂಬಿಕೆಯೇ ಒಮ್ಮೊಮ್ಮೆ ಅರೆಹುಚ್ಚು ಸ್ಥಿತಿಗೆ ಕೊಂಡೊಯ್ಯಬಹುದು; ಉನ್ಮಾದತೆಗೆ ತಲುಪಬಹುದು. ಹೊರಗೆ ನಿಂತು ನೋಡುವವರಿಗೆ ಅತಿಮಾನುಷ ಶಕ್ತಿ ಮೈವೆತ್ತಿರುವಂತೆ ಭಾಸವಾಗಬಹುದು. ದೇವರೋ ದೆವ್ವವೋ ಆವಾಹನೆಯಾದಂತೆ ತೋರಬಹುದು. ಮುಂದೆ ಇಂಥ ನಡವಳಿಕೆಗಳು ಭಯ ಮೂಡುವುದಕ್ಕೂ ಕಾರಣವಾಗಬಹುದು. ಈ ಭಯ ಮೂಡಿಸುವ ಸ್ಥಿತಿ ಮುಂದೆ ಕಾಲ ಕಳೆದಂತೆಲ್ಲಾ ಕುವ್ಯಕ್ತಿಗಳ ಕೈಯಲ್ಲಿ ದಾಳವಾಗಿ ಪ್ರಯೋಗವಾಗಿ ಶೋಷಣೆಯ ಅಸ್ತ್ರವಾಗಬಹುದು. ಚರಿತ್ರೆಯಲ್ಲಿ ಭಕ್ತಿಯ ವೃತ್ತದ ಸುತ್ತ ನಡೆದಿರುವ ಬೆಳವಣಿಗೆ ಇದೇ ಆಗಿರುವ ಸಾಧ್ಯತೆಯಿದೆ. ಆತ್ಮಗಳ ಸಾಂಗತ್ಯದ ಮಧುರ ಅನುಬಂಧವಾಗುವುದರ ಬದಲು ಮೌಢ್ಯದ ಸರಕಾಗಿ ನಿಂತದ್ದು ಮಾತ್ರ ವಿಷಾದಕ್ಕೆ ಕಾರಣವಾಗಿದೆ.

ಇಂದು ಭಕ್ತಿ ಎಂಬುದು, ಪೂಜೆ ಎಂಬುದು ತೋರಿಕೆಯ ಸರಕಾಗಿರುವುದು ನೋವಿನ ಸಂಗತಿಯಾಗಿದೆ. ಅದು ಸಾಂಸ್ಥಿಕ ಸ್ವರೂಪವನ್ನು ತ್ವರಿತಗತಿಯಲ್ಲಿ ಪಡೆಯುತ್ತಿರುವುದಂತೂ ಹೆದರಿಕೆಯನ್ನುಂಟು ಮಾಡುತ್ತಿದೆ. ಅದು ಆಧುನಿಕ ಅರ್ಥ ಸಂಸ್ಕೃತಿಯ ಮನಸ್ಥಿತಿಗನುಗುಣವಾಗಿ ವ್ಯಾಪಾರೀಕರಣದ ಸಾಧನವಾಗಿ ಬಳಕೆಯಾಗುತ್ತಿದೆ. ರಸ್ತೆ ರಸ್ತೆಗಳಲ್ಲಿ ದೇವರು- ದೇವಸ್ಥಾನಗಳು ಹರಿದಾಡುತ್ತಿವೆ ಅಥವಾ ಸ್ಥಾವರ ಸ್ವರೂಪ ಪಡೆಯುತ್ತಿವೆ. ಆಧುನಿಕ ಸ್ವಾಮೀಜಿಗಳು ಸೃಷ್ಟಿಗೊಂಡು ದೇಶವಿದೇಶಗಳಲ್ಲಿ ತಮ್ಮ ಸಾಂಸ್ಥಿಕ ಸ್ವರೂಪಗಳ ಶಾಖೆ ಉಪಶಾಖೆಗಳನ್ನು ತೆರೆದು ಶ್ರೀಮಂತರೆನ್ನಿಸಿಕೊಳ್ಳುತ್ತಿದ್ದಾರೆ. ಈ ದಿಸೆಯಲ್ಲಿ ಸ್ವಾಮೀಜಿಗಳಲ್ಲಿ ಸ್ಪರ್ಧೆ ಏರ್ಪಟ್ಟಿದೆ. ಭಕ್ತಿಯು ಅಂತರಂಗದ ಮಿಡಿತವಾಗದೆ- ಭಗವಂತನನ್ನು ಕರೆವ ಕೂಗಾಗದೆ ಆರ್ಭಟದ ಅಬ್ಬರದ ಗಲಾಟೆಯಾಗುತ್ತಿದೆ. ದೇವರು-ಭಕ್ತಿ- ಮೌನ-ಶ್ರದ್ಧೆ-ನಂಬಿಕೆಗಳು ಧಾರ್ಮಿಕ ಕ್ಷೇತ್ರಗಳನ್ನು ತೊರೆದು ಎಂದೋ ಮರೆಯಾಗಿವೆ. ದೇವರನ್ನು ಪೂಜಿಸುವುದು, ಆರಾಧಿಸುವುದು ಸ್ವಾರ್ಥ ಪೂರೈಕೆಯ ಅಂಶವಾಗಿದೆ. ಶ್ರದ್ಧೆ ಮತ್ತು ನಂಬಿಕೆಗಳು ಆತ್ಮವನ್ನು ತೊರೆದು ಹೋಗಿರುವುದರಿಂದ- ಆತ್ಮ ಭೋಗಲಾಲಸೆಯ ಗೂಡಾಗಿ ಮಾರ್ಪಟ್ಟಿದೆ. ಆದ್ದರಿಂದ ಅದು ಪರಮಾತ್ಮನನ್ನು (ಇದ್ದಲ್ಲಿ) ಗುರುತಿಸುವದಲ್ಲಿ ವಿಫಲವಾಗುತ್ತಿದೆ. ಅಂದಮೇಲೆ ಸತ್ಯಶೋಧವನ್ನು ಮಾಡುವುದೆಂತು?

ಆಧುನಿಕ ಆಸ್ತಿಕ ಮನಸ್ಸುಗಳು ಇಂದು ಮತಧರ್ಮ ದೇವರುಗಳನ್ನು ಅವರವರ ನಂಬಿಕೆಯನ್ನು ಬಳಸಿಕೊಂಡು ಜಾಗತಿಕ ಐಕ್ಯತೆಯನ್ನು ಒಡೆಯುವ ಕೆಲಸವನ್ನು ಮಾಡುತ್ತಿವೆ. ಪರಸ್ಪರ ಪ್ರೀತಿಯಿಂದ ಮಾನವತೆಯನ್ನು ಬೆಳೆಸುವ ಕೆಲಸವಾಗಬೇಕಾಗಿದ್ದ ಜಾಗದಲ್ಲಿ ಇಂದು ದ್ವೇಷ ಅಸೂಯೆ ಅಹಂಕಾರ ಮೇಲರಿಮೆಗಳನ್ನು ಮೂಡಿಸಲಾಗುತ್ತಿದೆ. ಈ ಅಂಶ ಮಾನವನು ಬೆಳೆದಿರುವುದನ್ನು ಸೂಚಿಸುತ್ತಿದೆಯೇ? ಈ ಸತ್ಯವನ್ನು ಅರಿತೇ ಅಲ್ಲಮಪ್ರಭು 'ಬಕುತಿ ಎಂಬುದು ತೋರುಂಬ ಲಾಭ' ಎಂದು ಹೇಳಿದ್ದಾನೆಯೇ?

೦೩-೦೨-೨೦೧೧

# ಬದಕಲು ಬಿಡಿ, ನೀವೂ ಬದುಕಿ

ಪ್ರಕೃತಿ ಮಾತೆ ತುಂಬ ವಿಶಾಲ ಹೃದಯದವಳು. ತನ್ನ ಮಕ್ಕಳನ್ನು ತಾರತಮ್ಯ ಪ್ರಭಾವದಿಂದ ಎಂದೂ ಕಾಣಲಾರಳು. ಎಲ್ಲರಿಗೂ ಬದುಕಲು ಅವಕಾಶ ಕಲ್ಪಿಸಿದ್ದಾಳೆ. ಅವಳ ಮಕ್ಕಳು ತಂತಮ್ಮ ಬದುಕಿನ ಕಾಲಾವಧಿಯಲ್ಲಿ ತಮ್ಮ ಆವಶ್ಯಕತೆಗೆಷ್ಟು ಬೇಕೋ ಅಷ್ಟನ್ನು ಮಾತ್ರ ಬಳಸಿಕೊಂಡು ಜೀವಿಸಿದರೆ ಅವರಲ್ಲಿ ಪರಸ್ಪರ ವೈಷಮ್ಯವಾಗಲೀ ದ್ವೇಷವಾಗಲೀ ಉಂಟಾಗುವುದಿಲ್ಲ. ಪ್ರಕೃತಿಯಲ್ಲಿ ಎಲ್ಲ ಜೀವಿಗಳಿಗೂ ಸಾಕಾಗುವಷ್ಟು ಸಂಪನ್ಮೂಲಗಳು ಇರುತ್ತವೆ. ಬಹುಪಾಲು ಜೀವಿಗಳು ತಮ್ಮ ಜೀವಿತಕ್ಕೆಷ್ಟು ಬೇಕೋ ಅಷ್ಟನ್ನು ಮಾತ್ರ ಬಳಸಿಕೊಂಡು ಬದುಕುತ್ತವೆ. ದುಷ್ಟ ಮೃಗಗಳೆಂದು ಮಾನವ ಕರೆದು ಗುರುತಿಸುವ ಯಾವ ಪ್ರಾಣಿಯೂ ಹೊಟ್ಟೆ ತುಂಬಿದ ನಂತರ ತನ್ನ ಅಕ್ಕಪಕ್ಕದಲ್ಲಿಯೇ ಸುಳಿದಾಡುವ ತನ್ನ ಜೀವಂತ ಆಹಾರದ ಕಡೆ ಗಮನವನ್ನು ನೀಡುವುದಿಲ್ಲ. ಸಸ್ಯಗಳೂ ಅಷ್ಟೆ. ಸಹಬಾಳ್ವೆ ಅವುಗಳ ಪ್ರಮುಖ ಲಕ್ಷಣ. ಅದನ್ನು ಗಮನಿಸಬೇಕಾದರೆ- ನಾವು ನಮ್ಮ ಸ್ವಾಭಾವಿಕ ಅರಣ್ಯಗಳನ್ನು ನೋಡಬೇಕು. ಒಂದೇ ಜಾತಿಯ ಗಿಡಮರ ಬಳ್ಳಿಗಳ ವಾಸ್ತವ್ಯದಲ್ಲಿ ಒಂದು ಬಗೆಯ ಸಮಾನವಾದ ಹಂಚಿಕೆಯ ವ್ಯವಸ್ಥೆಯಿರುತ್ತದೆ. ತನ್ನ ಅಕ್ಕಪಕ್ಕ ಅನ್ಯಜಾತಿಯ ಸಸ್ಯವರ್ಗವನ್ನು ಬೆಳೆಯಬಿಟ್ಟು, ಪರಸ್ಪರ ಸ್ಪರ್ಶಸುಖವನ್ನು ಅನುಭವಿಸುತ್ತಾ ಬಾಳ್ವೆ ಮಾಡುವುದನ್ನು ಕಲಿತಿರುತ್ತವೆ. ಒಂದೇ ಮಣ್ಣಿನಲ್ಲಿರುವ ಶಕ್ತಿಯನ್ನು ತಮಗೇನು ಬೇಕೋ ಅದನ್ನು ಮಾತ್ರ ಬಳಸಿಕೊಂಡು- ಅನ್ಯದರ ಆಹಾರಕ್ಕೆ ಆಸೆಪಡದೆ ಜೀವಿಸುತ್ತವೆ. ತಾನು ದಪ್ಪ ಗಾತ್ರ ಉದ್ದನೆಯ ಮರವೆಂದು ದೊಡ್ಡದು ಬೀಗದು; ತಾನು ನೆಲವನ್ನೇ ಅಪ್ಪಿ ಬದುಕುತ್ತಿರುವ ಅಲ್ಪನೆಂದು ಸಣ್ಣದು ಕೀಳರಿಮೆಯಿಂದ ಕೊರಗದು. ಅವುಗಳಿಗೆ ಅವುಗಳದೇ ಆದ ಅಸ್ತಿತ್ವ ಜವಾಬ್ದಾರಿ ಮತ್ತು ಗೌರವಗಳು ಇರುತ್ತವೆ. ಇತರೆ ಸಸ್ಯ ವರ್ಗಗಳು ಅದನ್ನು ಮಾನ್ಯ ಮಾಡುತ್ತವೆ.

ಇಡೀ ಪ್ರಕೃತಿಯ ಮಕ್ಕಳಲ್ಲಿ ಮಾನವನೊಬ್ಬನೇ ಅತ್ಯಂತ ದುರಾಸೆಯ ಕಣಜವಿರಬೇಕು. ಅದು ಆಹಾರಕ್ಕಷ್ಟೇ ಸೀಮಿತವಲ್ಲ. ಆಹಾರಕ್ಕೆಂದು ಆಕ್ರಮಣಶೀಲ ಪ್ರವೃತ್ತಿಯನ್ನು ತೋರುತ್ತಿದ್ದಾನೆಂದರೆ, ಅದು ಬದುಕುವ-ಅಸ್ತಿತ್ವದ ಲಕ್ಷಣವೆಂದು ಭಾವಿಸಬಹುದು. ಈ ಲಕ್ಷಣ ಇತರ ಜೀವಿಗಳಲ್ಲೂ ಕಂಡುಬರುತ್ತದೆ. ಆದಿ ಮಾನವನಲ್ಲೂ ಕೂಡ ಈ ಗುಣವಿತ್ತು. ಅದು ನಾಳೆಗೆಂದು ವಿಸ್ತರಿಸುತ್ತಿರಲಿಲ್ಲ. ಇಂದಿನ ಆವಶ್ಯಕತೆಯನ್ನು ತೀರಿಸಿಕೊಳ್ಳುವ ಪ್ರವೃತ್ತಿಯ ಮಟ್ಟದ್ದಾಗಿತ್ತು. ಅದರಾಚೆಗಿಲ್ಲ! ಆದರೆ ಆದಿಮ ಸ್ಥಿತಿಯನ್ನು ದಾಟಿ ನಾಗರಿಕನಾಗುತ್ತಾ ಆಗುತ್ತಾ ಅವನ ಆಸೆಯ ಪರಿಕಲ್ಪನೆಗಳು ವಿಸ್ತರಿಸತೊಡಗಿದವು. ತಾನು ತನ್ನವರು ತನ್ನ ಊರು ರಾಜ್ಯ

ಜಾತಿ-ಧರ್ಮಗಳೆಂಬ ಕವಲುಗಳಲ್ಲಿ ಗರಿಗೆದರಿಕೊಂಡು ಪ್ರಕೃತಿ ಮಾತೆಯ ಇತರ ಮಕ್ಕಳ ಮೇಲೆ ಅತಿಕ್ರಮಿಸುವುದರ ಜೊತೆಗೆ, ತನ್ನದೇ ಸಂಕುಲದ ಇತರೆ ಗುಂಪುಗಳ ಮೇಲೆ ಆಧಿಪತ್ಯ ಸ್ಥಾಪಿಸಹೊರಟಿದ್ದು ಮಾತ್ರ ಸಮಾನತೆಗೆ ಬಿದ್ದ ದೊಡ್ಡ ಪೆಟ್ಟೆಂದು ಅರಿಯಬೇಕು. 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬ ಆದರ್ಶ ಸಹಜ ನ್ಯಾಯವನ್ನು ನುಂಗಿಹಾಕುವ ಪರಿ ಇದು. ರಾಜ್ಯ ಸ್ಥಾಪನೆಯ ಹೆಸರಲ್ಲಿ, ಅದರ ವಿಸ್ತರಣೆಯ ಹೆಸರಲ್ಲಿ ಮತ್ತು ಮತ ಧರ್ಮಗಳ ಪ್ರಚಾರ ಹಾಗೂ ವಿಸ್ತರಣೆಯ ಹೆಸರಲ್ಲಿ ನಡೆಸಿರುವ ಆಕ್ರಮಣಗಳು ಕ್ರೌರ್ಯದ ಎಲ್ಲೆಯನ್ನು ಮೀರಿವೆ. ಮಾನವ ಮಾನವನನ್ನು ಮೇಲು ಕೀಳು- ಕರಿಯ ಬಿಳಿಯ- ಜಾತಿ ವಿಜಾತಿ- ಧರ್ಮೀಯ ಅನ್ಯಧರ್ಮೀಯ- ಸ್ಪಶ್ಯ ಅಸ್ಪೃಶ್ಯ- ಎಂಬೆಲ್ಲಾ ಮಾನದಂಡಗಳಿಂದ ತೊತ್ತಳ ತುಳಿದಿರುವುದನ್ನು ಕಾಣಬಹುದು. ಈ ಕ್ರೌರ್ಯವನ್ನು ನಮ್ಮ ಚರಿತ್ರೆ ಸ್ವಾಭಿಮಾನದಿಂದ ವೈಭವೀಕರಣ ಮಾಡಿರುವುದನ್ನು ಭಿನ್ನ ನೆಲೆಯಿಂದ ವಿಮರ್ಶಿಸಬೇಕು. ಈ ಕೃತ್ಯಗಳನ್ನು 'ದಿಗ್ವಿಜಯ'ವೆಂತಲೂ ಸಾಮ್ರಾಜ್ಯ ಸ್ಥಾಪನೆಯೆಂತಲೂ ಧಾರ್ಮಿಕ ದಿಗ್ವಿಜಯವೆಂತಲೂ ಅಭಿಮಾನದಿಂದ ಹೇಳಿಕೊಳ್ಳುವುದನ್ನು ಮತ್ತು ಬರೆದುಕೊಳ್ಳುವುದನ್ನು ಮತ್ತೊಮ್ಮೆ ಮಾನವೀಯ ನೆಲೆಯಿಂದ ನೋಡುವುದನ್ನು ಕಲಿಯಬೇಕು.

ಇಂದು ಹಂಚಿಕೊಂಡು ಬದುಕುವುದು ಆದರ್ಶವಾಗಬೇಕು. ಹಂಚಿಕೆಯೆಂದರೆ ಉಳ್ಳವರು ಇಲ್ಲದವರಿಗೆ ನೀಡುವ ಭಿಕ್ಷೆಯೂ ಅಲ್ಲ, ದಾನವೂ ಅಲ್ಲ, ಅದು ಶ್ರಮದ ಉದ್ಯೋಗದ ಹಂಚಿಕೆ. ಸಮಾನ ವೇತನದ ಹಂಚಿಕೆ. ವಸತಿ ವಸ್ತ್ರಗಳ ಹಂಚಿಕೆ. ಪ್ರೀತಿ ತುಂಬಿದ ಮಾತು-ನೋಟ ಮತ್ತು ಸ್ಪರ್ಶದ ಹಂಚಿಕೆ. ಜಗತ್ತಿನ ಬೆರಳೆಣಿಕೆಯಷ್ಟು ಶ್ರೀಮಂತರು ಸಮಾನವಾಗಿ ಹಂಚಿಕೆಯಾಗುತ್ತಿದ್ದ ಸಂಪತ್ತನ್ನು ತಮ್ಮಲ್ಲಿ ದುರಾಸೆಯಿಂದ ಕ್ರೋಢೀಕರಿಸಿ ಇಟ್ಟುಕೊಂಡಿದ್ದಾರೆಂದು ನಾವು ಅರಿಯುವ ಮನಸ್ಥಿತಿಯನ್ನು ಬೆಳೆಸಿಕೊಳ್ಳಬೇಕು. ನಾವು ಮಾತ್ರ ಎತ್ತರದವರೆಂದೂ ಇತರರು ಗುಲಾಮರೆಂದೂ ಬೀಗುವ ಮನಸ್ಥಿತಿ ಮಾನವ ಸಮುದಾಯದಲ್ಲಿ ಪ್ರೀತಿ ಸಾಮರಸ್ಯವನ್ನುಂಟು ಮಾಡುವುದಿಲ್ಲ. ಅದರ ಬದಲು ಪರಸ್ಪರ ಅಪನಂಬಿಕೆ ದ್ವೇಷ ಪರಿಗ್ರಹ ಭಾವಗಳನ್ನು ಉದ್ದೀಪಿಸುತ್ತದೆ. ಶ್ರೀಮಂತರಲ್ಲಿ ಭೋಗಲಾಲಸೆಯನ್ನೂ ಅನಾರೋಗ್ಯ ಸ್ಪರ್ಧೆಯನ್ನೂ ಉಂಟುಮಾಡಿ ತಾಮಸ ಪ್ರವೃತ್ತಿಯನ್ನುಂಟು ಮಾಡುತ್ತದೆ.

ತಾನೂ ಬದುಕಬೇಕು ಇತರರೂ ಬದುಕಬೇಕು; ತನ್ನ ಬದುಕಿನಂತೆಯೇ ತನ್ನ ಸುತ್ತಮುತ್ತಲಿನವರ ಬದುಕು ಕೂಡ ಸ್ವಾಭಿಮಾನದಿಂದ ಕೂಡಿರಬೇಕು. ಆ ಸ್ವಾಭಿಮಾನ ಮರ್ಯಾದಾ ಬದುಕನ್ನು ಕಬಳಿಸುವ ಕೆಲಸವನ್ನು ಮಾಡುವುದು ಪ್ರಕೃತಿ ಧರ್ಮಕ್ಕೆ ವಿರುದ್ಧವಾದ ನಡೆಯೆಂಬುದನ್ನು ಅರ್ಥ ಮಾಡಿಕೊಳ್ಳಬೇಕು.

೧೭-೦೨-೨೦೧೧

# ಕೊನೆಯ ಮಾತು!

ಅರಿವು ಸದಾ ವಿಕಾಸಶೀಲವಾದುದು. ಅದಕ್ಕೆ ನಿಲುಗಡೆಯೆಂಬುದಿಲ್ಲ. ಪ್ರಕೃತಿಯ ಅಮುಖ್ಯ ಗುಣ ಎಲ್ಲಿಯವರೆಗೆ ಚಲನಶೀಲವಾಗಿರುತ್ತದೋ ಅಲ್ಲಿಯವರೆಗೆ ಪರಿವರ್ತನೆಗಳು, ರೂಪಾಂತರಗಳು ಸಂಭವಿಸುತ್ತಿರುತ್ತವೆ. ಒಂದು ಕಾಲಘಟ್ಟದ ವಿದ್ಯಮಾನಗಳು ಮತ್ತೊಂದು ಕಾಲಘಟ್ಟದ ನಿರೀಕ್ಷೆಗಳನ್ನು ತೃಪ್ತಿಪಡಿಸಲು ವಿಫಲವಾಗಬಹುದು. ಆಗ ಪ್ರತಿಯೊಂದು ಕಾಲಘಟ್ಟವೂ ತನ್ನ ಆವಶ್ಯಕತೆಗೆ ತಕ್ಕುದಾದ ಬದುಕನ್ನು ಕಟ್ಟಿಕೊಳ್ಳಲು ಕ್ರಿಯಾಶೀಲವಾಗುತ್ತದೆ. ಈ ಕ್ರಿಯಾಶೀಲತೆ ಬೌದ್ಧಿಕ ಮಟ್ಟದಲ್ಲೂ ಆಗುತ್ತದೆ ಮತ್ತು ಭೌತಿಕ ಮಟ್ಟದಲ್ಲೂ ಆಗುತ್ತದೆ. ಈ ನೂತನ ಪರಿಕರಗಳು ತನ್ನ ಭೂತಕಾಲಕ್ಕೆ ಅಪರಿಚಿತ ನಾಗರಿಕ ಬೆಳವಣಿಗೆಗಳಾಗಿಬಿಡುತ್ತವೆ. ಇಂದು ನಾವು ಬಳಸುತ್ತಿರುವ ವಿದ್ಯುನ್ಮಾನ ಪರಿಕರಗಳು ನಮ್ಮ ಹಿಂದಿನವರಿಗೆ ಊಹಿಸಲಸಾಧ್ಯವಾದ ಸಾಧನಗಳು. ಅವರು ಕಲ್ಪನೆಗಳಲ್ಲಿ ಸೃಷ್ಟಿ ಮಾಡುತ್ತಿದ್ದ ಅನೇಕ ಅಂಶಗಳು ಇಂದು ಸಾಕಾರವಾಗಿರಬಹುದು. ಅದೂ ಒಂದು ರೀತಿಯ ವಿಕಾಸವೇ. ಕಲ್ಪನೆ ವಾಸ್ತವಕ್ಕಿಳಿದ ಸತ್ಯ! ಮಾನವನ ಬೌದ್ಧಿಕ ಸೃಜನಶೀಲತೆ ಸಾಕಾರಗೊಂಡು ಮೂರ್ತರೂಪ ತಾಳಿದ ಸಾಹಸ ಗಾಥೆ! ಜಾರ್ಜ್ ಲುಕಾಸನ ಎಪ್ಪತ್ತರ ದಶಕದ ನಭೋಮಂಡಲ ಕಾಲ್ಪನಿಕ ಸಾಹಸಗಾಥೆಗಳು ಇಂದು ಖಗೋಳ ವಿಜ್ಞಾನದ ಪ್ರಾಯೋಗಿಕ ಸತ್ಯಗಳಾಗಿ ವಾಸ್ತವವಾಗಿಬಿಟ್ಟಿವೆ. ಫ್ಯಾಂಟಸಿ ನಿಜವಾಗುವ ವಿಕಾಸಗಾಥೆಯಿದು. ಇವುಗಳಿಗೊಂದು ಕರುಳಬಳ್ಳಿಯ ಸಂಬಂಧವಿರುವುದನ್ನು ಗುರುತಿಸಬಹುದು. ಭೂತಕ್ಕೆ ಅಪರಿಚಿತವಾದದ್ದು ವರ್ತಮಾನದಲ್ಲಿ ಸಾಕಾರ ಸತ್ಯವಾಗಿದೆ. ಇಂದಿನ ವಾಸ್ತವ ಸತ್ಯವೂ ಅಂತಿಮವಲ್ಲವೆಂಬ, ಅದು ಮುಂದಿನ ಬೆಳವಣಿಗೆಯ ಒಂದು ಮೆಟ್ಟಿಲು ಮಾತ್ರವೆಂಬ, ಅರಿವಿನ ವಿಕಾಸಶೀಲತೆಯ ನಿರಂತರ ಸರಪಳಿಯಲ್ಲಿ ಒಂದು ಕೊಂಡಿಯೆಂಬ ಸತ್ಯ ಇದರಿಂದ ಗೋಚರವಾಗುತ್ತದೆ.

ಚರಿತ್ರೆಯ ಮಹಾನ್ ಚಿಂತಕನಾದ ಪ್ಲೇಟೋನ ಅನೇಕ ಮಾತುಗಳನ್ನು ಅವನ ನೇರ ಶಿಷ್ಯನಾದ ಅರಿಸ್ಟಾಟಲನೇ ಪ್ರಶ್ನಿಸುತ್ತಾನೆ ಮತ್ತು ಅದಕ್ಕೆ ಸಮಾನಾಂತರವಾದ ತತ್ವಗಳನ್ನು ಮಂಡಿಸುತ್ತಲೇ, ಕಲೆ-ರಾಜನೀತಿಗಳಿಗೆ ಸಂಬಂಧಿಸಿದ ಮಾತುಗಳು ಇಂದಿನವರೆಗೂ ಬೆಳೆಯುತ್ತಲೇ ಇವೆ. ಮಹಾನ್ ಕಲಾ ಚಿಂತಕನಾದ ಲಿಯೋ ಟಾಲ್‌ಸ್ಟಾಯ್‌ನ ನಾಡಿನಲ್ಲಿ ಅತ್ಯಂತ ಭಿನ್ನವಾದ ರಾಜಕೀಯ-ಆರ್ಥಿಕ ಚಿಂತನೆಗಳು ಚಿಗುರೊಡೆದು ಪ್ರಭುತ್ವ ಸ್ಥಾಪಿತವಾಯಿತು. ಅಂತಿಮವಾಗಿ ಅದೂ ನಾಶವಾಗಿ ಅಲ್ಲಿ ಮತ್ತೊಂದು ಬಗೆಯ ರಾಜಕೀಯ ಆಲೋಚನೆಗಳ ಕಾಲ ಈಗ ಪ್ರಾರಂಭವಾಗಿದೆ. ಕಬ್ಬಿಣದ ಗೋಡೆಗಳನ್ನು ಕಟ್ಟಿಕೊಂಡು ತನ್ನ ಜನರ ಬದುಕು ಮತ್ತು

ಚಿಂತನೆಗಳನ್ನು ಬಂಧಿಸಿಟ್ಟಿದ್ದ ಚೀನಾದಲ್ಲಿ ಹೊಸ ಉದಾರವಾದದ ಗಾಳಿ ಬೀಸುತ್ತಿದೆ.

ನಮ್ಮ ಭರತ ಭೂಮಿಯಲ್ಲಿ ಧರ್ಮಶಾಸ್ತ್ರಗಳುಂಟುಮಾಡಿದ್ದ ಜಾತಿ ವ್ಯವಸ್ಥೆ ಸಡಿಲವಾಗುತ್ತಿದೆ. ಅವುಗಳನ್ನು ಪ್ರಶ್ನೆ ಮಾಡಿ ವ್ಯಾಖ್ಯಾನ- ಮರು ವ್ಯಾಖ್ಯಾನ ಮಾಡಲಾಗುತ್ತಿದೆ. ಈ ಧರ್ಮಶಾಸ್ತ್ರಗಳುಂಟುಮಾಡಿದ್ದ ಸಾಮಾಜಿಕ ರೋಗಗಳಾದ ಅಸ್ಪೃಶ್ಯತೆ, ಲಿಂಗ ತಾರತಮ್ಯ ಮುಂತಾದವುಗಳು ಈಗ ಮಂಕಾಗುತ್ತಿವೆ. ಅಂದು ಅಸ್ಪೃಶ್ಯರೆಂದು ಊರಾಚೆಗೆ ತಳ್ಳಲ್ಪಟ್ಟಿದ್ದ ದಲಿತರು ಇಂದು ಆಳುವ ವಿವಿಧ ಅಂಗ ಸಂಸ್ಥೆಗಳಲ್ಲಿ ಮುಖ್ಯಸ್ಥಾನಗಳಲ್ಲಿದ್ದಾರೆ. ಸದಾ ಹೊಸ್ತಿಲ ಒಳಗೆ ಇರಬೇಕಾಗಿದ್ದ ಮಹಿಳೆ ಇಂದು ಸಾಮಾಜಿಕ ಸೆರೆಯಿಂದ ಬಿಡುಗಡೆಗೊಂಡು ಅಧಿಕಾರ ನಡೆಸುವ ಹಂತಕ್ಕೆ ಬೆಳೆದಿದ್ದಾಳೆ. ಈ ಎಲ್ಲಾ ಬೆಳವಣಿಗೆಗಳು ಸಾಧ್ಯವಾದದ್ದು ಅರಿವಿನ ವಿಕಾಸದಿಂದಲೇ, ಅರಿವು ತಂದುಕೊಟ್ಟ ಮಾನವತೆಯ ಅರಳುವಿಕೆಯಿಂದಲೇ. ಅಂದರೆ ತಿಳಿವಿಗೆ ನಿಲುಗಡೆಯಿಲ್ಲ- ಅದು ನಿರಂತರ ಚಿಗುರುತ್ತಿರುವ, ಮಾನವತೆಯನ್ನು ಸಾಮರಸ್ಯಗೊಳಿಸುವ ಕಾಯಕಗಮ್ಯ ಜ್ಞಾನ.

ತಾವು ತಿಳಿದಿದ್ದೇ ಅಂತಿಮ ಸತ್ಯ. ಅದೇ ಪರಮ, ಅದನ್ನು ಎಲ್ಲರೂ ಮಾನ್ಯ ಮಾಡಬೇಕೆಂಬ ಅಹಂಕಾರ ಯಾವ ಸಿದ್ಧಾಂತಕ್ಕೂ ಇರಬಾರದು. ಇದ್ದದ್ದೇ ಆದರೆ ಅದು ಸತ್ತುಹೋಗುತ್ತದೆ. ಹೀಗೆ ಸತ್ತಂತಹ ಸಿದ್ಧಾಂತಗಳನ್ನು ಜೀವಂತವಿವೆಯೆಂದು ತಲೆಯ ಮೇಲೆ ಹೊತ್ತು ಮೆರೆಸುವ ಭ್ರಮಾಧೀನ ಅನುಯಾಯಿಗಳಿಗೆ ಕೊರತೆಯಿಲ್ಲ. ಅದನ್ನು ವರ್ತಮಾನದಲ್ಲಿ ಪುನರ್‌ಸ್ಥಾಪಿಸಹೊರಡುವ ಹುಚ್ಚುತನಕ್ಕೆ ಇಳಿಯುವವರು ಅನೇಕ. ಅಂಥವರಿಂದಲೇ ಇಂದು ಜಗತ್ತಿನಲ್ಲಿ ಮೂಲಭೂತ ವಾದದ ಆಧಾರದ ಮೇಲೆ ಭಯೋತ್ಪಾದನೆಗಳು ನಡೆಯುತ್ತಿರುವುದು. ವರ್ತಮಾನ ಕಾಲದ ಜನರು ಹಳೆಯದನ್ನು ನಿರಾಕರಿಸಿ ಅದರಲ್ಲಿ ಒಳ್ಳೆಯದಿದ್ದಲ್ಲಿ ಅದನ್ನು ಪರಿಷ್ಕರಿಸಿ, ರೂಪಾಂತರಿಸಿ, ಬೇರೆ ಬೇರೆ ಆಕಾರ ರೂಪ ವಿನ್ಯಾಸಗಳಲ್ಲಿ ಪಡಿಮೂಡಿಸಿ ಪ್ರಸ್ತುತಗೊಳಿಸಿಕೊಂಡು ಅನುಕರಿಸುತ್ತಿರುತ್ತಾರೆ. ಅದರಲ್ಲಿ ವರ್ತಮಾನದ ಬದುಕಿನ ಆವಶ್ಯಕತೆ ಮತ್ತು ಸರ್ವಮಾನ್ಯ ಸಮಾನತೆಯ ಅಂಶ ಪ್ರಧಾನವಾಗಿ ಕೆಲಸ ಮಾಡುತ್ತಿರುತ್ತದೆ. ಆದರೆ ಮೂಲಭೂತವಾದಿಗಳು ಯಾವುದೋ ಕಾಲದ ಅಗತ್ಯತೆಗಳಿಗೆ ತಕ್ಕಂತೆ ರೂಪಿತಗೊಂಡಿದ್ದ, ಇಂದು ಅಪ್ರಸ್ತುತವೂ ಅವೈಜ್ಞಾನಿಕವೂ, ಅಮಾನವೀಯವೂ ಆದ ತತ್ವ ಸಿದ್ಧಾಂತಗಳನ್ನು ಇಂದಿನ ಜನಾಂಗದ ಮೇಲೆ ಭಯದ ಮೂಲಕ ಒಪ್ಪಿಸುವ ಕೆಲಸಕ್ಕಿಳಿಯುವುದು ಕಾರ್ಯಸಾಧುವಾದ ಕೆಲಸವಲ್ಲ. ಏಕೆಂದರೆ- ಯಾವುದೇ ಸಿದ್ಧಾಂತವನ್ನು ಯಾರ ತಲೆಯ ಮೇಲೂ ಭ್ರಮೆ ಮೂಡಿಸಿ ಹೇರಲು ಸಾಧ್ಯವಿಲ್ಲವೆಂಬ ಸತ್ಯವನ್ನು ಚರಿತ್ರೆಯೇ ನಮಗೆ ತಿಳಿಸಿಕೊಟ್ಟಿದೆ. ಅತ್ಯಂತ ಕ್ರಾಂತಿಕಾರಿಯಂತೆ ಕಂಡುಬಂದ ಮಾರ್ಕ್ಸ್‌ನೇ ಇಂದು ಅಪ್ರಸ್ತುತವೆಂಬಂತೆ ತೋರುತ್ತಿರುವ ಕಾಲದಲ್ಲಿ ಧಾರ್ಮಿಕ ಮೂಲಭೂತವಾದ ವಿಜೃಂಭಿಸಲು ಸಾಧ್ಯವೆ? ಏಕೆಂದರೆ- ತಿಳಿವಿಗೆ ಪ್ರಾರಂಭ ಮಾತ್ರ ಉಂಟು. ಅದಕ್ಕೆ ನಡೆಯಿದೆ. ನಿಲುಗಡೆಯಿಲ್ಲ.

೦೩-೦೩-೨೦೧೧

# ನೀತಿಯಿಲ್ಲದ ಧರ್ಮ

ವ್ಯಕ್ತಿ ಮೂಲತಃ ನೀತಿವಂತನೇ. ಅವನು ತನ್ನ ಬೆಳವಣಿಗೆಯ ಹಂತದಲ್ಲಿ, ತನ್ನ ಸುತ್ತಮುತ್ತಲ ಪರಿಸರದ ಪ್ರಭಾವದಿಂದ ಅನೈತಿಕ ಹೆಜ್ಜೆಗಳನ್ನಿಡಲು ಆರಂಭಿಸುತ್ತಾನೆ. ಕುವೆಂಪು ಅವರು ತಿಳಿಸುವಂತೆ ಹುಟ್ಟುತ್ತಾ ಪ್ರತಿಯೊಂದು ಶಿಶುವೂ ವಿಶ್ವಮಾನವನೇ ಆಗಿರುತ್ತದೆ. ಬೆಳವಣಿಗೆಯ ಹಂತದಲ್ಲಿ ಈ ಸಮಾಜ ಅವನನ್ನು ಅಲ್ಪಮಾನವನನ್ನಾಗಿ ಜಾತೀಮತೀಯ ಮಾನವನನ್ನಾಗಿ ಪರಿವರ್ತಿಸಿಬಿಡುತ್ತದೆ. ನೈತಿಕ ನಡೆಯ ವಿಷಯದಲ್ಲೂ ಹಾಗೆಯೇ. ಯಾವ ವ್ಯಕ್ತಿಗೂ ತಪ್ಪು ದಾರಿಯಲ್ಲಿ ನಡೆಯಬೇಕು, ಇತರರಿಗೆ ನೋವು ಕೊಡಬೇಕು, ಅನ್ಯಾಯ ಮಾಡಿ ಬದುಕಬೇಕು- ಅಂತ ಮೂಲತಃ ಅನ್ನಿಸುವುದಿಲ್ಲ. ಅವನಲ್ಲಿ ಸ್ವಾರ್ಥ ಮತ್ತು ಮೇಲರಿಮೆಯ ರೋಗಗಳು ಪ್ರವೇಶ ಮಾಡಿದ ಕೂಡಲೇ ಅವನ ನೀತಿಯುತ ಹೆಜ್ಜೆಗಳು ತಪ್ಪಲಾರಂಭಿಸುತ್ತವೆ. ಅಂದರೆ ಸದಾ ನೀತಿಬೋಧನೆ ಮಾಡುವ ಸಮಾಜವೇ ವಾಸ್ತವದಲ್ಲಿ ಅವನನ್ನು ಅನೈತಿಕ ನಡೆಯಲ್ಲಿ ಸಾಗಲು ಉತ್ತೇಜಿಸುತ್ತದೆ ಎಂದಾಯಿತು. ತಾನು, ತನ್ನದು ಎಂಬುದು ಮುಖ್ಯವಾದಾಗ; ತನಗೆ, ತನ್ನವರಿಗಾಗಿ ಕೂಡಿಡುವ ಪ್ರವೃತ್ತಿ ಅಧಿಕವಾದಾಗ ವ್ಯಕ್ತಿ ಅಡ್ಡದಾರಿ ಹಿಡಿಯುತ್ತಾನೆ. ಹೀಗೆ ಅಡ್ಡದಾರಿಯನ್ನು ಹಿಡಿಯುವ ವ್ಯಕ್ತಿಗಳನ್ನು ಮನೆಯ/ಊರಿನ ಹಿರಿಯರು ತಿದ್ದಬೇಕು; ಸರಿದಾರಿ ಯಾವುದೆಂದು ಅವರಿಗೆ ತಿಳಿಹೇಳಬೇಕು. ಮುಖ್ಯವಾಗಿ ಅವರು ನಂಬಿ ಆಚರಿಸುವ ಧರ್ಮಗಳು ಅವರನ್ನು ನೀತಿ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಬೇಕು. ಧರ್ಮವೆಂದರೆ, ಅದು ಕೇವಲ ವ್ರತ ನಿಯಮಾದಿ ಆಚರಣೆಗಳನ್ನು ಆಚರಿಸುವ ಜೀವನ ಪದ್ಧತಿಯಲ್ಲ, ನಿಜಾರ್ಥದಲ್ಲಿ ಧರ್ಮವೆಂದರೆ- ಒಂದು ಸಮುದಾಯದ ನೀತಿಯುತ ಜೀವನ ಕ್ರಮ. ಅಲ್ಲಿ ನಂಬಿಕೆ, ಶ್ರದ್ಧೆ, ಭಯ- ಭಕ್ತಿಗಳಿಗಿಂತ ಶುದ್ಧ ನಡೆಗೆ ಮತ್ತು ಚಾರಿತ್ರ್ಯಯುತ ಜೀವನಕ್ರಮಕ್ಕೆ ಆದ್ಯ ಬೆಲೆ ಇರಬೇಕು. ವ್ಯಕ್ತಿಯನ್ನು ನೀತಿಮಾರ್ಗದಲ್ಲಿ ನಡೆಸಲು ಅಸಮರ್ಥವಾದ ಮತಧರ್ಮಗಳು ಕೇವಲ ಜಿಡ್ಡುತನದ, ಡಾಂಬಿಕತನದ ಬದುಕನ್ನು ಮಾತ್ರ ಕಲಿಸುತ್ತವೆ. ಇಂಥ ಮತಧರ್ಮಗಳ ಬಗ್ಗೆ ಗಾಂಧೀಜಿಯವರಿಗೆ ಕಿಂಚಿತ್ತೂ ಗೌರವವಿರಲಿಲ್ಲ. ಆದುದರಿಂದಲೇ ಅವರು ನೀತಿಯಿಲ್ಲದ ಧರ್ಮವನ್ನು ಧರ್ಮವೆಂದು ಮಾನ್ಯ ಮಾಡಲು ನಿರಾಕರಿಸಿದರು.

ನುಡಿಗಿಂತ ನಡೆ ಶ್ರೇಷ್ಠವೆಂದು ಗಾಂಧೀಜಿ ನಡೆದು ತೋರಿದರು. ಅವರ ದೃಷ್ಟಿಯಲ್ಲಿ ನೀತಿಯೆಂಬುದು ಧರ್ಮಗಮ್ಯವಾದುದೂ ಅಲ್ಲ, ಧರ್ಮದಿಂದ ಉದಯವಾದುದೂ ಅಲ್ಲ. ನೀತಿಯುತ ನಡೆಯೊಂದೇ ವ್ಯಕ್ತಿಯ ಮೋಕ್ಷಕಾರಕವೆಂದು ಅವರು ನಂಬಿದ್ದರು. ನೀತಿಯೆಂಬುದು ಒಳಗಿನ ಚೈತನ್ಯದ ಕಣ್ತೆರೆಯುವಿಕೆಯಿಂದ ಉದ್ಭವಗೊಂಡು ವ್ಯಕ್ತಿಯನ್ನು ನಡೆಸುತ್ತದೆ ಎಂದು

ತಿಳಿದಿದ್ದರು. ಈ ದೃಷ್ಟಿಯಿಂದಲೇ 'ನಡೆ ಮತ್ತು ಗುರಿ' ಸಿದ್ಧಾಂತವನ್ನು ಅರ್ಥಮಾಡಿಕೊಳ್ಳಬೇಕು. ನಿರ್ದಿಷ್ಟವಾದ ಗುರಿಯನ್ನು ಮುಟ್ಟಬೇಕಾದರೆ ಯಾವ ಯಾವುದೋ ದಾರಿಯಲ್ಲಿ ಸಾಗುವುದು ಮುಖ್ಯವಲ್ಲ. ಅಂಥ ಮಾರ್ಗಗಳಿಂದ ಸಾಧಿತವಾಗುವ ಗುರಿಗಳಿಂದ ವ್ಯಕ್ತಿ ಲೋಭಿಯೂ ಜನವಿಮುಖನೂ ಆಗುತ್ತಾನೆ.

ವ್ಯಕ್ತಿ ಮೂಲತಃ ನೀತಿವಂತನೇ ಆಗಿರುತ್ತಾನೆಂದು ಈ ಲಹರಿಯ ಆರಂಭದಲ್ಲಿ ಹೇಳಿದೆ. ಟೊರೆಂಟೋ ವಿ.ವಿ. ಈ ಬಗ್ಗೆ ನಡೆಸಿರುವ ಸಂಶೋಧನೆಗಳು ಕೆಲ ವಾಸ್ತವಗಳನ್ನು ಹೊರಚೆಲ್ಲಿವೆ. ಬಹಳ ಜನರು ಕಷ್ಟದಲ್ಲಿರುವವರಿಗೆ ಸಹಾಯ ಮಾಡಲು ಸಿದ್ಧರಿರುತ್ತಾರೆ. ತಾವು ಸಲ್ಲಿಸುವ ಅರ್ಜಿಗಳಲ್ಲಿ ಸುಳ್ಳು ಮಾಹಿತಿ ನೀಡುವುದಿಲ್ಲ; ತಮಗಾಗಿ ನಡೆಸಲಾಗುವ ಪರೀಕ್ಷೆಗಳಲ್ಲಿ ಪ್ರಾಮಾಣಿಕವಾಗಿಯೇ ಉತ್ತರಿಸುತ್ತಾರೆ. ಇದೊಂದು ಸರ್ವೇ ಸಾಮಾನ್ಯ ಸತ್ಯ. ಎಂಥವನೂ ಕೆಟ್ಟವನಾಗಲು ಮತ್ತು ಕೆಟ್ಟದಾರಿಯಲ್ಲಿ ಹೆಜ್ಜೆಯಿಡಲು ಇಷ್ಟಪಡುವುದಿಲ್ಲ. ಈ ನಡೆ ಎಲ್ಲಿಯವರೆಗೆ? ಅವನಲ್ಲಿ ಸ್ವಾರ್ಥ ಇಣುಕುವವರೆಗೆ! ವೈಯಕ್ತಿಕ ಅನುಕೂಲಕ್ಕೆ ತೊಂದರೆಯಾಗುತ್ತದೆ ಎಂದು ತಿಳಿಯುತ್ತಿದ್ದಂತೆಯೇ ಸಹಜವಾಗಿಯೆಂಬಂತೆ ಸುಳ್ಳು ಹೇಳಲು ಆರಂಭಿಸುತ್ತಾನೆ; ಅಡ್ಡದಾರಿಯಲ್ಲಿ ಸಾಗಲು ಯತ್ನಿಸುತ್ತಾನೆಂಬುದು ಸಂಶೋಧನೆಗಳಿಂದ ಸಾಬೀತಾಗಿದೆ. ಅನೈತಿಕ ನಡೆಗೆ ಮತ್ತೊಂದು ಮುಖ್ಯ ಕಾರಣ- ಮೈಗಳ್ಳತನ ಎಂಬುವುದೂ ಬೆಳಕಿಗೆ ಬಂದಿದೆ. ತನ್ನ ಜೀವನದಲ್ಲಿ ಹೆಚ್ಚು ದುಡಿಮೆಯನ್ನು ತಪ್ಪಿಸಿಕೊಳ್ಳಲು ವ್ಯಕ್ತಿ ಅನೈತಿಕ ನಡೆಯನ್ನು ಆಯ್ದುಕೊಳ್ಳಲು ಹಿಂದೆ ಮುಂದೆ ನೋಡುವುದಿಲ್ಲ.

ಈ ಅಧ್ಯಯನಗಳು ನಮಗೆ ನೈತಿಕ ನಡೆಗಳು ವ್ಯಕ್ತಿಯ ಅಂತಃಸಾಕ್ಷಿಯನ್ನು ಅವಲಂಬಿಸಿರುತ್ತವೆಯೆಂಬ ಸತ್ಯವನ್ನು ಮನದಟ್ಟು ಮಾಡಿಕೊಡುತ್ತವೆ. ಇದೊಂದು ಬಗೆಯ ಅನುಕೂಲಸಿಂಧು ಪ್ರಜ್ಞೆ. ಯಾರಿಗೆ ವಿವೇಕ, ವಿವೇಚನೆ ಮತ್ತು ಸೂಕ್ಷ್ಮ ಸಂವೇದನಾಶೀಲ ಮನಸ್ಥಿತಿಗಳು ಅಂತಃಸಾಕ್ಷಿಯ ಮೇರೆಗೆ ನಡೆಯುತ್ತಿರುತ್ತವೆಯೋ ಅಂಥವರು ಎಂದೂ ಹಾದಿ ತಪ್ಪುವುದಿಲ್ಲ. ಅವರು ಧೀಮಂತರಾಗಿರುತ್ತಾರೆ; ವೈಯಕ್ತಿಕ ಲಾಲಸೆಗಳನ್ನು ಗೆದ್ದ ಮಹಾತ್ಮರಾಗುತ್ತಾರೆ. ಅವರಿಗೆ 'ವೈಯಕ್ತಿಕ'ವೆಂಬುದು ಇರುವುದಿಲ್ಲ. ಸ್ವಾರ್ಥದ ವಾಸನೆ ಅಂಟಿರುವುದಿಲ್ಲ. ಅವರು 'ಕುಟುಂಬ'ವನ್ನು ಮೀರಿದ ವಿಶ್ವ ಕುಟುಂಬಿಗಳಾಗುತ್ತಾರೆ. ಅವರ ಜೀವನದ ನಡೆಗಳನ್ನು ಅವಲೋಕಿಸಿದರೆ ಅಲ್ಲಿ ಬಂಧುಬಾಂಧವರೆಂಬ ಸ್ವಾರ್ಥದ ಸೋಂಕೇ ಇಲ್ಲ! ಇಡೀ ಸಮುದಾಯದ ಹಿತವನ್ನು ಕಾಪಾಡುವ ಆಶಯವನ್ನು ತಮ್ಮ ಜೀವಿತದ ಗುರಿಯನ್ನಾಗಿಸಿಕೊಂಡರು.

ಅಂದರೆ ಧರ್ಮ ವ್ಯಕ್ತಿಯ ನಡೆಯನ್ನು ತಿದ್ದುವ ಕೆಲಸವನ್ನು ಮಾಡಿರುವುದು ಅಪರೂಪವೆಂದು ತಿಳಿಯಬಹುದು. ಅಪ್ಪಿತಪ್ಪಿ ಧಾರ್ಮಿಕ ಕ್ಷೇತ್ರದಲ್ಲಿ ಅಂಥ ಶುದ್ಧ ನೀತಿಯುತ ನಡೆಯ ಮಹಾತ್ಮರಿದ್ದುದೇ ಆದಲ್ಲಿ, ಅದು ಅವರ ವೈಯಕ್ತಿಕ ಮನೋನೆಲೆಯ ಸತ್ವದ ಮೂಲಕ ಸಾಧಿಸಿದ ಸಾಧನೆಯೆಂದೇ ಭಾವಿಸಬೇಕು.

೧೭-೦೩-೨೦೧೧

# 'ನಾನು' ಅಂದರೆ ಏನು? ಯಾರು?

'ನಾನು' ಅಂದರೆ ಯಾರು? 'ನಾನು' ಅಂದರೆ ಏನರ್ಥ? ಇದು ಅತಿ ಪುರಾತನ ಪ್ರಶ್ನೆ! ಇದರ ಬಗ್ಗೆ ಎಲ್ಲ ದೇಶಕಾಲಗಳ ಚಿಂತಕರು ಜಿಜ್ಞಾಸೆ ನಡೆಸಿದ್ದಾರೆ. ಆ ಜಿಜ್ಞಾಸೆ ಆ ಕಾಲಘಟ್ಟ ಸಂದರ್ಭಕ್ಕನುಗುಣವಾಗಿ ಪಾರ್ಶ್ವಸತ್ಯ ಅಥವಾ ಆ ಕಾಲಘಟ್ಟಕ್ಕೆ ಸೀಮಿತವಾದ ಅನುಭವ ಸತ್ಯವಾಗಿರುತ್ತದೆ. ಮುಂದೆ ಬಂದ ಚಿಂತಕರು ಈ ಸತ್ಯವನ್ನು ನಿರಾಕರಿಸುತ್ತಲೋ ಬೆಳೆಸುತ್ತಲೋ ಅಥವಾ ಸ್ಥಿರ ಸಾರ್ವಕಾಲಿಕ ಸತ್ಯವೆಂದು ಸಮರ್ಥಿಸುತ್ತಲೋ ಬಂದಿರುವುದನ್ನು ನಾವು ಗಮನಿಸಬಹುದು.

ನಮ್ಮಲ್ಲಿ 'ನಾನು' ಎಂದರೆ ಪರಮಾತ್ಮನೆಂದೂ, ಪರಮಾತ್ಮನ ಅಂಶವೆಂದೂ ಅರ್ಥ ಬಿಡಿಸಿದವರು ಇದ್ದಾರೆ. ಹಾಗೆಯೇ 'ನಾನು' ಎಂಬುದು ಪರಮಾತ್ಮನಾಗಲು ಎಂದಿಗೂ ಸಾಧ್ಯವಿಲ್ಲ; ಪರಮಾತ್ಮನೆಂಬುದು ಅತ್ಯುನ್ನತ ಶಕ್ತಿ. ಅದನ್ನು 'ಭಗವಂತ'ನೆಂದು ಕರೆಯಬೇಕು. 'ನಾನು' ಎಂಬುದು ಹುಟ್ಟುಸಾವಿನಿಂದ ತೊಳಲಾಡುವ ಜೀವ. ಇದು ಎಂದಿಗೂ ಭಗವಂತನನ್ನು ತಾನೆಂದು ಭಾವಿಸಲಾಗದು. ಅದು ತನ್ನ ಪಾಪಗಳನ್ನು ಕಳೆದುಕೊಂಡು, ಪುಣ್ಯ ಸಂಪಾದನೆ ಮಾಡಿ ಭಗವಂತನ ಸಾನ್ನಿಧ್ಯವನ್ನು ಪಡೆಯಬಹುದು. ಅಂದರೆ ಹುಟ್ಟು ಸಾವುಗಳ ಸರಪಳಿಯಿಂದ ತಪ್ಪಿಸಿಕೊಂಡು ಮೋಕ್ಷ ಪಡೆಯಬಹುದು. ಅದನ್ನು ಸ್ವರ್ಗಪ್ರಾಪ್ತಿ ಎಂತಲೋ, ಮುಕ್ತಿ ಎಂತಲೋ ಪರಿಭಾವಿಸಬಹುದು. ಈ ಬಗೆಯ ಸಿದ್ಧಾಂತವೂ ನಮ್ಮಲ್ಲಿದೆ. ಹಾಗೆಂದು ಬಗೆದರೆ, 'ನಾನು' ಎಂದರೆ ನಿಜವಾಗಲೂ ಏನು? ಕೇವಲ ಇಹಲೋಕದ ಅನುಭವಗ್ರಾಹ್ಯ ಗ್ರಹಿಕೆಗೆ ಮೀರಿದ, ಪರಲೋಕದ- ಪರಶಕ್ತಿಗಳ ಬಗೆಗೆ ಇರಬಹುದಾದ ಕಲ್ಪನೆಗಳಿಂದ 'ನಾನು' ಎಂಬುದನ್ನು ಅರ್ಥ ಮಾಡಹೊರಡುವುದು ಕೂಡ ವಾಸ್ತವ ಸತ್ಯದಿಂದ ಬಿಡಿಸಿಕೊಂಡ ನೆಲೆಯಾಗುವುದಿಲ್ಲವೆ? ಅದನ್ನು ಪರಲೋಕದಿಂದ ಬಂದ ಅಂಶವೆಂದು ಗುರುತಿಸಿ ಮತ್ತೆ ಅಲ್ಲಿಗೆ ಹೊರಡುವ ಅಂಶವೆಂದು ತಿಳಿದು ಅಷ್ಟು ಸುಲಭವಾಗಿ ಕೈತೊಳೆದುಕೊಳ್ಳಲಾಗುವುದಿಲ್ಲ. ಏಕೆಂದರೆ- ಸತ್ಯಸ್ಯ ಸತ್ಯವಾದ ಇಲ್ಲಿಯ ಬದುಕಿನಲ್ಲಿ ಅದರ ಅಸ್ತಿತ್ವದ ಮೀಮಾಂಸೆ ಮಾಡುವುದು ಮತ್ತು ಇಲ್ಲಿ ಅದರ ಇರುವಿಕೆಯ ಅರ್ಥ ಶೋಧಿಸುವುದು ಮುಖ್ಯವಾಗುತ್ತದೆ.

ಲೌಕಿಕಾರ್ಥದಲ್ಲಿ 'ನಾನು' ಎಂಬುದನ್ನು ವ್ಯಕ್ತಿಯ ಅಂತರ್ಗತದಲ್ಲಿರುವ ಅಹಂಕಾರವೆಂದು ಗುರುತಿಸುವವರೂ ಇದ್ದಾರೆ. ಕನಕದಾಸರ 'ನಾನು' ಹೋದರೆ ಹೋದೇನು' ಎಂಬ ದಂತಕತೆಯಲ್ಲಿ ಈ ಸಿದ್ಧಾಂತ ಪ್ರತಿಪಾದಿತವಾಗಿದೆ. 'ನಾನು' ಎಂಬುದನ್ನು 'ಅಹಂಕಾರ'ವೆಂದು ಪರಿಭಾವಿಸಿ, ಆ ಅಹಂಕಾರ ಮಾತ್ರದಿಂದ ಸಮಾಜಹಿತ ಮತ್ತು ಕುಟುಂಬ ಹಿತಕ್ಕೆ ಮಾರಕವಾಗಿ ವ್ಯಕ್ತಿ ನಡೆದು

ಕೊಂಡಾಗ ಅದು ಅಪರಾಧವೆಂದೂ ಜನವಿರೋಧಿ- ಅಮಾನವೀಯ ನಿಲುವೆಂದೂ ಕರೆಯಬಹುದು. ಈ ಬಗೆಯ ಅಹಂಕಾರ ಸ್ವಾರ್ಥಮೂಲದಿಂದ ಬರುವಂಥದ್ದು. ಇದನ್ನು ಯಾವುದೇ ಕಾರಣದಿಂದ ಗೌರವಿಸಲಾಗದು. ಕುಟುಂಬ ಮತ್ತು ಸಮಾಜ ಕಂಟಕವಾಗಿ ಎಲ್ಲವೂ ತನ್ನದು, ತನಗಾಗಿ ಎಂದು ಮೆರೆಯುವ ಮನಸ್ಥಿತಿಯನ್ನು ಅಹಂಕಾರವೆಂದು ಕರೆದು, ಅದು ಬಹುಬೇಗ ಕುಟುಂಬ ಮತ್ತು ಸಮಾಜದ ವಿರೋಧವನ್ನು ಕಟ್ಟಿಕೊಂಡು ನಾಶವಾಗುವ ಸ್ಥಿತಿಯೆಂದು ತಿಳಿಯಬೇಕು.

'ನಾನು' ಎಂಬುದನ್ನು ಅಷ್ಟು ಸರಳವಾಗಿ 'ಅಹಂಕಾರ'ದೊಡನೆ ಸಮೀಕರಿಸಿ ಅರ್ಥೈಸುವುದು ಕಷ್ಟವಾಗುತ್ತದೆ. ಈ 'ನಾನು' ಅಹಂಕಾರಕ್ಕಿಂತ ಭಿನ್ನವಾದ, ಸದಾ ವ್ಯಕ್ತಿಯ ಅಂತರ್ಗತದಲ್ಲೇ ಇರುವ ಮತ್ತ್ಯಾವುದೋ ಪ್ರತ್ಯಯವೆಂದು ತಿಳಿದು ಹುಡುಕಹೊರಡಬೇಕು.

ವ್ಯಕ್ತಿಯು ಬದುಕಿನಲ್ಲಿ ಸದಾ ಬಹು ಎಚ್ಚರದಿಂದ ಕಾಯ್ದುಕೊಳ್ಳಬೇಕಾದ ಒಂದು ವೈಯಕ್ತಿಕ ಮೌಲ್ಯವಿದೆ. ಅದನ್ನು ಸ್ವಾಭಿಮಾನವೆಂತಲೂ ಆತ್ಮಪ್ರತ್ಯಯವೆಂತಲೂ ಕರೆಯಬಹುದು. ಇದು ಅಹಂಕಾರವಲ್ಲ. ಈ ಸ್ವಾಭಿಮಾನವು ತನ್ನನ್ನು ಸದಾ ಇತರರ ಮಧ್ಯೆ ಇರುವಂತೆಯೂ, ಪರೋಪಕಾರ ಮನೋಧರ್ಮವನ್ನು ರೂಢಿಸಿಕೊಳ್ಳುವಂತೆಯೂ ಪ್ರೇರೇಪಿಸುತ್ತದೆ. ಹೀಗೆ ಇತರರ ನಡುವೆ ಇದ್ದೂ ತನ್ನತನವನ್ನು ಜೋಪಾನವಾಗಿ ಕಾಯ್ದುಕೊಳ್ಳುವ ಮತ್ತು ತನ್ನ ಗುರುತನ್ನು ಉಳಿಸಿಕೊಳ್ಳುವ ಎಚ್ಚರದ ಪ್ರಜ್ಞೆಯನ್ನು 'ನಾನು' ಎಂದು ಗುರುತಿಸಬೇಕು. ಈ ಬಗೆಯ ನಾನು ತುಂಬ ಎತ್ತರದ ಮನುಷ್ಯರಲ್ಲಿ ಕಾಣಬಹುದು. ಈ ಬಗೆಯ ಮನಸ್ಥಿತಿಯಿರುವವರು ಎಂಥ ಕಠಿಣ ಪರಿಸ್ಥಿತಿಯಲ್ಲೂ ತಾವು ನಂಬಿದ ಸಿದ್ಧಾಂತವನ್ನು ಬಿಟ್ಟುಕೊಡುವವರಲ್ಲ. ಇದು ಆತ್ಮ ಪ್ರತ್ಯಯವನ್ನು ಉಳಿಸಿಕೊಂಡು ಸತ್ಯಕ್ಕಾಗಿ ಹೋರಾಡುವ ಸಮಾಜಪರ ನಿಲುವು. ಸಾಕ್ರೆಟೀಸ್ ತನ್ನ ನಂಬಿದ ಸತ್ಯಕ್ಕಾಗಿ ಸ್ವಾಭಿಮಾನವನ್ನು ಕಳೆದುಕೊಳ್ಳದೆ ವಿಷ ಕುಡಿದು ಪ್ರಾಣತ್ಯಾಗ ಮಾಡುತ್ತಾನೆ. ಗೆಲಿಲಿಯೋ ಅದೇ ಕಾರಣಕ್ಕಾಗಿ ಗೃಹ ಬಂಧನದಲ್ಲೇ ತನ್ನ ಜೀವಿತಕಾಲವನ್ನು ಕಳೆಯುತ್ತಾನೆ. ಬುದ್ಧ ವೈಯಕ್ತಿಕ ಭೋಗವನ್ನು ತ್ಯಾಗ ಮಾಡಿ ಲೋಕಹಿತವನ್ನು ಶೋಧ ಮಾಡಿಹೊರಡುವುದು; ಅಶೋಕ ಯುದ್ಧತ್ಯಾಗ ಮಾಡಿ ಅಹಿಂಸೆಯ ಪ್ರಚಾರ ಮಾಡಹೊರಡುವುದು- ಇದೇ ನೆಲೆಯಿಂದ ನಮ್ಮ ಆಧುನಿಕ ಯುಗದ ಗಾಂಧೀಜಿಯವರು ದೇಶಕ್ಕಾಗಿ ನಡೆಸಿದ ಸತ್ಯಪರ ಹೋರಾಟದಲ್ಲಿ ಈ ಆತ್ಮಪ್ರತ್ಯಯವೇ ತುಂಬಿಕೊಂಡಿದೆ. ಅವರ ಈ ಆತ್ಮಪ್ರತ್ಯಯವು ದೇಶಪ್ರೇಮ, ಬಿಡುಗಡೆಗಳೆಂಬ ಮೌಲ್ಯಗಳು ವಿಜೃಂಭಿಸದೇ ಹೋಗಿದ್ದಲ್ಲಿ ಅವರು ಬ್ರಿಟಿಷರ ಜೊತೆ ಅಧಿಕಾರಕ್ಕಾಗಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿತ್ತು. ಅವರ ಆತ್ಮಪ್ರತ್ಯಯದಲ್ಲಿ ಸ್ವಾರ್ಥ ಇಣುಕಿ ಅದು ಅಹಂಕಾರದ ರೂಪ ಪಡೆದಿದ್ದರೆ- ಸ್ವಾತಂತ್ರ್ಯ ಬರುವ ಸಂದರ್ಭದಲ್ಲಿ ತಾವೇ ಅಧಿಕಾರದ ಗದ್ದುಗೆ ಏರುವ ಆಸೆ ತೋರಬಹುದಿತ್ತು. ಆದರೆ ಅವರು ಆ ಎಲ್ಲಾ ಉಪಾಧಿಗಳನ್ನು ಮೀರಿ ನಿಂತಿದ್ದರು. ಅವರಲ್ಲಿದ್ದ 'ನಾನು' ಪ್ರತಿಯೊಬ್ಬ ಸಾಮಾನ್ಯ ಭಾರತೀಯನ ದಾಸ್ಯ ಬಿಡುಗಡೆಯ ಪ್ರತೀಕವಾಗಿ ರೂಪಾಂತರಗೊಂಡು ಬೆಳೆದಿತ್ತು.

ಈ ಬಗೆಯ 'ನಾನು' ಎಲ್ಲರಲ್ಲಿ ಅರಳಿ ಸ್ಥಾಪಿತವಾದಾಗ ಒಂದು ಸಮೃದ್ಧ ಸಮಾನ ಸಮಾಜ ನಿರ್ಮಾಣಗೊಳ್ಳುತ್ತದೆ.

೩೧-೦೩-೨೦೧೧

# ಸಲಿಗೆ ಮತ್ತು ಸ್ಪರ್ಶ

ಕನ್ನಡದಲ್ಲಿ 'ಸಲಿಗೆ ಅತಿಯಾಯಿತು' ಎಂಬ ಮಾತನ್ನು ಮನುಷ್ಯಸಂಬಂಧಗಳ ವ್ಯಾಪ್ತಿ ಮತ್ತು ಮಿತಿಯನ್ನು ಕುರಿತು ಮಾತನಾಡುವಾಗ ಬಳಸುತ್ತಾರೆ. ಹತ್ತಿರದವರಲ್ಲಿ ಸಲಿಗೆ ಬೇಕು, ಆದರೆ ಅದು ಮರ್ಯಾದೆಯ ಗೆರೆಯನ್ನು ಮೀರಿ ಹೋಗಬಾರದು ಎಂಬ ಅರ್ಥವನ್ನು ಈ ವಾಕ್ಯ ಸ್ಫುರಿಸುತ್ತದೆ. ಸಲಿಗೆ ಎನ್ನುವುದು ಪರಿಚಿತರೆಲ್ಲರಲ್ಲೂ ಮೂಡುವುದಿಲ್ಲ. ಅಂದಹಾಗೆ ಒಡಹುಟ್ಟಿದ ಸೋದರ ಸಂಬಂಧಗಳಲ್ಲೇ ಈ ಸಲಿಗೆಯೆಂಬ ಅಂಶ ಅನೇಕಬಾರಿ ಇರುವುದಿಲ್ಲ. ಅಣ್ಣನಿಗೆ ತಮ್ಮನ ಮೇಲೆ ಅಥವಾ ತಮ್ಮನಿಗೆ ಅಣ್ಣನ ಮೇಲೆ ಪ್ರೀತಿಯಿದ್ದರೂ ಸಲಿಗೆ ಇರುವುದು ಅಪರೂಪ. ಸ್ನೇಹಿತರಂತೆ ಸಲಿಗೆಯಿಂದಿರುವ ಸೋದರರು ಅಪವಾದವೆಂಬಂತೆ ಅಲ್ಲಿ ಇಲ್ಲಿ ತೋರುತ್ತಾರೆ. ಅಣ್ಣನ ಬಗ್ಗೆ ಪಿತೃಸಮಾನ ಗೌರವ ಭಾವವೂ, ತಮ್ಮನ ಬಗ್ಗೆ ಮಗನ ಸಮಾನ ವಾತ್ಸಲ್ಯಭಾವವೂ ಕೆಲಸ ಮಾಡುತ್ತಿರುತ್ತದೆ. ಅಕ್ಕತಂಗಿಯರಲ್ಲೂ ಇದೇ ಭಾವಗಳಿರಬಹುದು ಅಥವಾ ತುಸು ನಿಕಟತೆ ಪ್ರಾಪ್ತವಾಗಬಹುದು ಅಥವಾ ಸ್ತ್ರೀಸಹಜವಾದ ಕೋಮಲ ಭಾವಗಳು ಅಧಿಕವಾಗಿ ಸಂಚರಿಸಬಹುದು. ರಕ್ತಸಂಬಂಧದಲ್ಲಿ ಉಂಟಾಗಬಹುದಾದ ಸಲಿಗೆ ಅಪರೂಪವೆಂದೇ ತಿಳಿಯಬೇಕು. ಆ ಕಾರಣಕ್ಕಾಗಿಯೇ ನಿಜವಾದ ಸ್ನೇಹಬಂಧವನ್ನು ನಿಸ್ವಾರ್ಥ ನಿಷ್ಕಲ್ಮಶ ಸಂಬಂಧವೆಂದು ಪರಿಭಾವಿಸಿರುವುದು.

ಸಲಿಗೆಯಿದ್ದಲ್ಲಿ ಸ್ಪರ್ಶವಿರಬಹುದು. ಈ ಸ್ಪರ್ಶ ಕೂಡ ಅತ್ಯಂತ ನಿರ್ಮಲ ಭಾವದಿಂದ ಕೂಡಿರಬೇಕೆಂದು ಹೇಳುವವರು ಇದ್ದಾರೆ. ಸಲಿಗೆ ಅತಿಯಾದಾಗ ಸ್ಪರ್ಶ ಕೂಡ ಪದೇ ಪದೇ ಸಂಪರ್ಕ ಪಡೆಯುತ್ತದೆ. ಕೈಮುಟ್ಟುವುದು, ತೋಳು ಸವರುವುದು, ಕೆನ್ನೆ ನೇವರಿಸುವುದರಲ್ಲಿ ಪರಿಸಮಾಪ್ತಿಯಾಗಬೇಕಾದ ಸಂಬಂಧ- ಸಲಿಗೆ ಮಿತಿ ಮೀರಿ ದೇಹದ ಬೇರೆ ಬೇರೆ ಅಂಗಾಂಗಗಳ ಸ್ಪರ್ಶಕ್ಕೆ ಹಾತೊರೆದರೆ, ಅಲ್ಲಿ ನಿರ್ಮಲ ಭಾವದ ಹೊರತಾಗಿ ಮತ್ತಿನ್ನೇನೋ ಬಯಕೆಯು ಕಾಡುತ್ತಿದೆಯೆಂದು ತಿಳಿಯಬೇಕು. ಈ ವಿಚಾರವನ್ನು ಕುರಿತಂತೆ ಕರ್ನಾಟಕದ ಚಿಂತಕರೊಬ್ಬರು ಇತ್ತೀಚೆಗೆ ತಮ್ಮ ಅನುಭವದ ಹಿನ್ನೆಲೆಯಲ್ಲಿ ಈ ರೀತಿ ಮಾತನ್ನಾಡಿದ್ದಾರೆ: 'ನಮ್ಮ ಶೈಕ್ಷಣಿಕ ಮತ್ತು ಔದ್ಯೋಗಿಕ ರಂಗದಲ್ಲಿ ಸಲಿಗೆ ದುರುಪಯೋಗವಾಗುತ್ತಿದೆ. ಸಲಿಗೆ ತನ್ನ ಮಿತಿಯನ್ನು ಮೀರಿ ಸ್ಪರ್ಶದ ನೆಲೆಗೆ ಬಂದಾಗ ವಿರುದ್ಧ ಲಿಂಗಿಗಳಲ್ಲಿ ಯಾರಾದರೊಬ್ಬರು ತಪ್ಪು ತಿಳಿದು ಸಂಯಮ ಮೀರುವ ಸಾಧ್ಯತೆಯಿರುತ್ತದೆ. ಇದರಿಂದಾಗಿಯೇ ಈ ರಂಗಗಳಲ್ಲಿ ಲೈಂಗಿಕ ದುರಾಚಾರಗಳು ಸಂಭವಿಸುತ್ತಿವೆ. ವಿವೇಕ-ವಿವೇಚನೆಗಳು ಹಾದಿತಪ್ಪಿ ಸಲಿಗೆಯ ಸಂಬಂಧವನ್ನು ಹಲ್ಲೆಯ ಹಂತಕ್ಕೆ ತಂದು ನಿಲ್ಲಿಸುವಂಥ ಅವಿವೇಕಗಳುಂಟಾಗುತ್ತಿವೆ.' ಈ ಮಾತುಗಳಲ್ಲಿ

ಸತ್ಯವಿರುವುದನ್ನು ಅಲ್ಲಗಳೆಯಲಾಗದು. ಅದರಲ್ಲೂ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಆಧುನಿಕತೆ ತಂದುಕೊಟ್ಟಿರುವ ವಿದ್ಯೆ, ಆರ್ಥಿಕ ಸಬಲತೆಯ ಕಾರಣದಿಂದಾಗಿ ಸ್ತ್ರೀ ಹೊರ ಪ್ರಪಂಚದಲ್ಲಿ ಉದಾರವಾದಿಯಂತೆ ತೋರುತ್ತಾಳೆ. ಈ ಕಾರಣದಿಂದಾಗಿ ದೊರೆತ ಸ್ವಾತಂತ್ರ್ಯದಿಂದಾಗಿ ಪುರುಷ ಸಂಗಡಿಗರ ಜೊತೆ ತುಸು ಸಲಿಗೆಯಿಂದಿರಲು ಯತ್ನಿಸುತ್ತಾಳೆ. ಇದನ್ನು ಅಪಾರ್ಥ ಮಾಡಿಕೊಂಡು ಪುರುಷರು ಅವರನ್ನು ಲೈಂಗಿಕವಾಗಿ ದುರುಪಯೋಗಪಡಿಸಿಕೊಳ್ಳಲು ನೋಡುತ್ತಾರೆ.

ಇದು ಭಾರತೀಯ ಸಾಮಾಜಿಕ ವ್ಯವಸ್ಥೆ! ಶೀಲವನ್ನು ಅತ್ಯಂತ ದೊಡ್ಡ ಮೌಲ್ಯವೆಂದು ನಂಬಿಕೊಂಡು ಬಂದಿರುವ ಸಮಾಜ ನಮ್ಮದು! ಪುರುಷನ ಶೀಲವನ್ನು (ಲೈಂಗಿಕ ನೆಲೆಯಲ್ಲಿ) ಅಷ್ಟು ಜೋಪಾನ ಮಾಡಬೇಕಾದ ಮೌಲ್ಯವೆಂದು ಪರಿಗಣಿಸದ ಸಮಾಜ ಇದು. ಸ್ತ್ರೀಯಂತೆಯೇ ಪುರುಷನಿಗೂ ಶೀಲವಿರುತ್ತದೆ; ಅದಕ್ಕೆ ಅವನು ಬದ್ಧನಾಗಿರಬೇಕು. ಅದರಿಂದ ಅವನ ವ್ಯಕ್ತಿತ್ವ ನಿರ್ಮಾಣವಾಗುತ್ತದೆ ಎಂದು ತಿಳಿಯುವ ಮನಸ್ಥಿತಿ ಅನೇಕರಿಗಿಲ್ಲ. ಸಲಿಗೆಯನ್ನು ಸ್ತ್ರೀ ನೀಡುವ ಆಹ್ವಾನವೆಂದು ಭಾವಿಸಿ ಮುಂದುವರಿಯುವ ಅನೇಕ ಪುರುಷರಿದ್ದಾರೆ. ಆದುದರಿಂದಲೇ ಭಾರತೀಯ ಸಂದರ್ಭದಲ್ಲಿ ಸಲಿಗೆಗೆ ಮಿತಿಯಿರಬೇಕು- ಸಲಿಗೆಯ ದಾರಿಯಲ್ಲಿ ಎಚ್ಚರ- ವಿವೇಕ ಇರಬೇಕು ಎಂದು ಹೇಳುವುದು ಅನಿವಾರ್ಯವಾಗುತ್ತದೆ.

ಸಲಿಗೆಯಿಂದುಂಟಾಗುವ ಸ್ಪರ್ಶಸಂಬಂಧ ಅನೇಕ ಸಂದರ್ಭಗಳಲ್ಲಿ ಪ್ರವೃತ್ತಿಯ ಮಟ್ಟದಲ್ಲಿ ವ್ಯವಹರಿಸಿಬಿಡಬಹುದು. ಅದರಲ್ಲೂ ಹದಿಹರೆಯದ ಮಕ್ಕಳಲ್ಲಿ ಈ ತಪ್ಪುಗಳು ಹೆಚ್ಚು ಸಂಭವಿಸುವ ಸಾಧ್ಯತೆ ಇರುತ್ತದೆ. ಪ್ರವೃತ್ತಿ ಸಹಜ ಬಯಕೆಯನ್ನು ನಿಯಂತ್ರಿಸುವ ಪ್ರಬುದ್ಧತೆ ಆ ವಯಸ್ಸಿನಲ್ಲಿ ಇನ್ನೂ ಮೂಡಿರುವುದಿಲ್ಲ. ವಯೋಸಹಜ ಕುತೂಹಲ ಆ ನಿಟ್ಟಿನಲ್ಲಿ ಮುಂದುವರಿಯುವಂತೆ ಪ್ರೇರೇಪಿಸುತ್ತದೆ. ಪ್ರಬುದ್ಧರಾಗಿ ಮೈಮನಗಳ ಕೂಡುವಿಕೆಯಲ್ಲಿ ರಸಾನುಭವ ಪಡೆಯಬೇಕಾದ ಮಕ್ಕಳು ಹಸಿಬಿಸಿಯಾಗಿ ಭ್ರಮಾಸುಖದ ಪಾತಳಿಯಲ್ಲಿ ಸಿಲುಕಿ ನಲುಗಿ ಹೋಗುತ್ತಾರೆ. ಆದುದರಿಂದಲೇ ಭಾರತೀಯ ಅವಿಭಕ್ತ ಕುಟುಂಬ ವ್ಯವಸ್ಥೆ ಮಕ್ಕಳನ್ನು ನೈತಿಕ ನೆಲೆಗಟ್ಟಿನ ಮೇಲೆ ಬೆಳೆಸಲು ಪರಿತಪಿಸುತ್ತಿತ್ತು. ರಕ್ತಸಂಬಂಧ ಮತ್ತು ಸಮುದಾಯ ಸಂಬಂಧಗಳಿಗೆ ಪಾವಿತ್ರ್ಯತೆಯ ಬಣ್ಣ ಮೂಡಿಸಲು ಯತ್ನಿಸುತ್ತಿತ್ತು.

ಇಂದು ಸ್ಪರ್ಶಮಾತ್ರದಿಂದಲೇ ಸಕಲ ವ್ಯಾಧಿಗಳನ್ನು ಗುಣಪಡಿಸುತ್ತೇವೆಂಬ ನುಡಿ ಮುತ್ತು ಉದರಿಸುವ ನವ ಗುರುಗಳು ಹುಟ್ಟಿಕೊಂಡಿದ್ದಾರೆ. ಅದನ್ನು ನಂಬಿ ಅಪಾರ ಹಣ ವ್ಯಯಿಸುವ ಮನೋರೋಗಿಗಳಿದ್ದಾರೆ. ಆದರೆ ಇದರ ಯಾವುದರ ಪರಿವೆಯೂ ಇಲ್ಲದೆ ಅತ್ಯಂತ ಚಾರಿತ್ರ್ಯ ಜೀವನ ನಡೆಸುತ್ತಿರುವ ಕೋಟ್ಯಂತರ ಭಾರತೀಯರು ಸಂಸ್ಕೃತಿಯ ಆತ್ಮದಂತಿದ್ದಾರೆ.

೧೪-೦೪-೨೦೧೧

# ಅಂಬೇಡ್ಕರ್ : ದಲಿತರ ಬೆಳಕು!

ಅಂಬೇಡ್ಕರ್ ಹೆಸರನ್ನು ಕೇಳಿದರೆ ದಲಿತರ ಕಣ್ಣುಗಳಲ್ಲಿ ಸ್ವಾಭಿಮಾನದ ಬೆಳಕು ಮೂಡುವುದನ್ನು ಕಾಣಬಹುದು. ಅಂಬೇಡ್ಕರ್‌ರವರಿಗಿಂತ ಪೂರ್ವದಲ್ಲಿ 'ಈ ಪುರಾತನ ಸನಾತನ ಪುಣ್ಯ ಭೂಮಿ'ಯಲ್ಲಿ ದಲಿತರ ಬಗ್ಗೆ ಕಳಕಳಿಯಿಂದ ಮಾತನಾಡಿದವರು, ಧ್ವನಿ ಎತ್ತಿ ಸಾಮಾಜಿಕ ನ್ಯಾಯದ ಬಗ್ಗೆ ಹೋರಾಡಿದವರು ಇಲ್ಲವೆಂದು ಹೇಳಲಾಗದು. ಬುದ್ಧ, ಬಸವ, ಗಾಂಧಿ, ನಾರಾಯಣಗುರು, ಪುಳೆ-ಮುಂತಾದವರು ನಡೆಸಿರುವ ಅಂತ್ಯಜ ಪರವಾದ ಹೋರಾಟದ ಪ್ರಭಾವವನ್ನು ನಿರಾಕರಿಸುವುದು ತಪ್ಪು. ಆದರೆ ಅಂಬೇಡ್ಕರ್‌ರವರ ಹೋರಾಟವು ದಲಿತರ ಪರವಾದ ಸ್ವಾಭಿಮಾನದ ಹೋರಾಟವಾಗಿತ್ತು. ಅದು ದಲಿತರನ್ನು ಕೇವಲ ಭ್ರಾತೃತ್ವದ ಮಟ್ಟದಲ್ಲಿ ಇತರೆ ಸುವರ್ಣೀಯರ ಜೊತೆ ಬೆಸೆಯುವುದು ಮಾತ್ರವಾಗಿರಲಿಲ್ಲ. ಉದಾರವಾದದ ನೆಲೆಯಿಂದ ಭಾವನಾತ್ಮಕ ಸಂಬಂಧ ಕಲ್ಪಿಸುವುದರಲ್ಲಿ ಯಾವುದೇ ಪರಿವರ್ತನೆ ಸಾಧ್ಯವಿಲ್ಲವೆಂದು ಅವರು ಅರಿತಿದ್ದರು. ಭಾವನಾತ್ಮಕ ಸೋದರ ನೆಲೆಯಲ್ಲಿ ಒಂದುಗೂಡಿಸುವ ಮಾತು ಕೇವಲ ತಾತ್ಕಾಲಿಕವಾದ ತೇಪೆ ಕೆಲಸವೆಂದು ಚರಿತ್ರೆಯ ಅಧ್ಯಯನದಿಂದ ಅರಿತಿದ್ದರು. ತೇಪೆಗಾರಿಕೆ ಮತ್ತೆ ಮತ್ತೆ ಪಸೆದು ಹೋಗುವ ಕ್ರಿಯೆ. ಅಲ್ಲಿ ಬದಲಾವಣೆ ಸಾಧ್ಯವಿಲ್ಲ. ಆಮೂಲಾಗ್ರವಾದ ಬದಲಾವಣೆಯೆಂಬುದು ಅಧಿಕಾರ ಮತ್ತು ಅಕ್ಷರ ಗಳಿಕೆಯಿಂದ ಮಾತ್ರ ಸಾಧ್ಯವೆಂದು ಅಂಬೇಡ್ಕರ್ ಮನಗಂಡಿದ್ದರು. ಅದನ್ನು ಮನಃಪರಿವರ್ತನೆಯೆಂಬ ಜಾದುವಿನಿಂದ ತರಲು ಸಾಧ್ಯವಿಲ್ಲ. ಏಕೆಂದರೆ, ಈ ದೇಶದಲ್ಲಿ ಜಾತಿ ಮೂಲ ಎಷ್ಟು ಆಳವಾಗಿದೆಯೆಂದರೆ- ಅದು ಇಲ್ಲಿ ಜನಿಸಿದ ವ್ಯಕ್ತಿಯ ಜೀವಕಣ ಕಣಗಳಲ್ಲಿ, ವಂಶವಾಹಿಗಳಲ್ಲಿ ತಲತಲಾಂತರದಿಂದ ಹರಿದುಬಂದಿರುತ್ತದೆ. ಅದು ಮತ್ತೊಂದು ಪ್ರವೃತ್ತಿಯೆಂಬಂತೆ ಭಾರತೀಯನನ್ನು ಆಡಿಸುತ್ತಿರುತ್ತದೆ. ಜಾತಿ ಎನ್ನುವುದು ಅಂತಸ್ತಿನ, ಗೌರವದ ಸಂಕೇತವಾಗಿ ಕೆಲವರಿಗೆ ಪರಿಗಣಿತವಾದರೆ; ಅವಮಾನದ, ನಿಕೃಷ್ಟದ ಪ್ರತೀಕವಾಗಿ ಕೆಲವರಿಗೆ ನಿರ್ದೇಶಿತವಾಗುತ್ತದೆ.

ಅಂದರೆ ಉದಾರವಾದೀ ನೆಲೆಯ ಮನಃಪರಿವರ್ತನೆ ಎಂಬುದು ಅನೇಕ ವೇಳೆ ಡಂಬಾಚಾರದ ಮಾತಾಗುತ್ತದೆ. ಈ ಸತ್ಯವನ್ನು ಡಾ. ಅಂಬೇಡ್ಕರ್ ಚೆನ್ನಾಗಿ ಅರಿತಿದ್ದರು. ನಮ್ಮೊಳಗೆ- ನಮ್ಮ ಸಾಮಾಜಿಕ ಸಂರಚನೆಯಲ್ಲಿರುವ ಈ ಅಸಮಾನತೆ- ಅಸಹ್ಯಕರ ಅಸ್ಪೃಶ್ಯತೆಯನ್ನು ಬುಡಸಹಿತ ಕಿತ್ತುಹಾಕಲು ದಲಿತರಿಗೆ ಪ್ರಜ್ಞೆ ಬಂದರೆ ಮಾತ್ರ ಸಾಧ್ಯ ಎಂದು ಮನಗಂಡರು. ದಲಿತರಿಗೆ ತಮ್ಮ ಇರುವಿಕೆಯ ವಸ್ತುಸ್ಥಿತಿಗೆ ಇರುವ ಚಾರಿತ್ರಿಕ ಕಾರಣಗಳೇನು? ಅದಕ್ಕೆ ಯಾರು ಎಷ್ಟು ಹೊಣೆಗಾರರು? ಚರಿತ್ರೆಯ ಲೆಕ್ಕ ಚುಕ್ತವಾಗಬೇಕಾದರೆ ಕೇವಲ ಬೇಡುವುದರಿಂದ

ಸಾಧ್ಯವಾಗುವುದಿಲ್ಲ. ಬೇಡುವ ನೆಲೆಯ ಚಲನೆ- ಸ್ಥಿತ್ಯಂತರವಾಗದೆ, ಇತಿಹಾಸ ಚಕ್ರದ ಆರೆಕಾಲು ಪಲ್ಲಟವಾಗದೆ ಸಮಾನತೆ ಬರಲಾಗದು. ಅದಕ್ಕೆ ದಲಿತರು ಅಕ್ಷರಸ್ಥರಾಗಬೇಕು, ಸಂಘಟಿತರಾಗಿ ಹೋರಾಟ ಮಾಡಬೇಕು. ಈ ಹೋರಾಟದ ಮೂಲಕ ಆಳಿಸಿಕೊಳ್ಳುವ ನೆಲೆಯಿಂದ ಆಳುವ ನೆಲೆಗೆ ಜಿಗಿಯಬೇಕು. ಆಳುವ ಹಂತಕ್ಕೆ ಬಂದಾಗ ಮಾತ್ರ ಮೇಲ್ಪದರದ ಶೋಷಣೆಯ ನಿಲುಗಡೆಯಾಗುತ್ತದೆ. ಅಧಿಕಾರ ಮಾತ್ರ ಮರ್ಯಾದೆ ತಂದುಕೊಡುತ್ತದೆ, ಸ್ವಾಭಿಮಾನದ ರಕ್ಷೆ ಮಾಡುತ್ತದೆ; ಅದು ಮಾತ್ರ ಆರ್ಥಿಕ ಸಬಲತೆಯನ್ನು ರೂಪಿಸುತ್ತದೆ ಎಂಬ ಸ್ಪಷ್ಟವಾದ ತಿಳಿವನ್ನು ಹೊಂದಿದ್ದರು. ಅವರಿಗೆ ಈ ತಿಳಿವು ಭಾರತೀಯ ದರ್ಶನ ವೇದಾಂತ ಪುರಾಣಗಳ ಆಳವಾದ ಅಧ್ಯಯನದಿಂದ ಮತ್ತು ಜಾಗತಿಕ ಸಮಾನತಾ ಆಂದೋಲನಗಳ ಗ್ರಹಿಕೆಯಿಂದ ಮೂಡಿತ್ತು. ಆದುದರಿಂದಲೇ ಸೋದರತ್ವದ ಆಧಾರದ, ಮನಃಪರಿವರ್ತನಾ ಮೂಲದ ಮಾತುಗಳನ್ನಾಡುತ್ತಿದ್ದ ಗಾಂಧೀಜಿಯವರೊಡನೆ ಅವರಿಗೆ ಕಠಿಣವಾದ ಭಿನ್ನಾಭಿಪ್ರಾಯವಿತ್ತು. ಗಾಂಧೀಜಿಯವರಿಗೆ ದೇಶವನ್ನು ಬ್ರಿಟಿಷರಿಂದ ಬಿಡುಗಡೆಗೊಳಿಸುವ ಹೋರಾಟ ಮುಖ್ಯವಾಗಿ ತೋರಿದರೆ, ಅಂಬೇಡ್ಕರ್‌ರವರಿಗೆ ಬ್ರಿಟಿಷರಿಗಿಂತ ಭಯಾನಕವಾದ ದೇಶೀಯ ಅವಮಾನ ಮತ್ತು ಅಸ್ಪೃಶ್ಯತೆಯಿಂದ ದಲಿತರನ್ನು ಬಿಡುಗಡೆಗೊಳಿಸಬೇಕಿತ್ತು. ಬ್ರಿಟಿಷರು ದೇಶ ತೊರೆಯುವುದರಿಂದ ದೇಶಕ್ಕೆ ಸ್ವಾತಂತ್ರ್ಯ ಬಂದರೂ, ಸವರ್ಣೀಯರಿಂದ ದಲಿತರಿಗೆ ಬಿಡುಗಡೆಯಾಗದೆಂದು ಅವರು ತಿಳಿದಿದ್ದರು. ಅವರ ಈ ತಿಳಿವು ಕಟುವೆನ್ನಿಸಿದರೂ ವಾಸ್ತವ ಸತ್ಯವಾಗಿತ್ತು.

ದಲಿತರಿಗೆ ನಿಜವಾದ ಬೆಳಕು ಬರುವುದು ರಾಜಕೀಯ ಹಕ್ಕುಗಳು ಬಂದಾಗ ಮಾತ್ರ. ಆ ಹಕ್ಕು ಸಂವಿಧಾನದತ್ತವಾಗಿ ಬರಬೇಕು. ಸಹಜವೆಂಬಂತೆ ದೊರಕಬೇಕು. ಚರಿತ್ರೆಯಲ್ಲಿ ಆಗಿರುವ ಸಾಮಾಜಿಕ- ಆರ್ಥಿಕ ಅನ್ಯಾಯ ಅಸಮಾನತೆಗಳನ್ನೂ ತಿದ್ದುವ ಸರಿಪಡಿಸುವ ಕೆಲಸವನ್ನು ಅಂಬೇಡ್ಕರ್ ಸ್ವತಂತ್ರ ಭಾರತದಲ್ಲಿ ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ಸಮರ್ಪಕವಾಗಿ ನಿರ್ವಹಿಸಿದರು. ಸಹಸ್ರಾರು ವರ್ಷಗಳ ಕಗ್ಗತ್ತಲೆಯಲ್ಲಿ, ಅಸಹ್ಯಕರ ಅಸ್ಪೃಶ್ಯತೆಯ ಅವಮಾನದಲ್ಲಿ ನರಳಿದ್ದ ದಲಿತರಿಗೆ ಧ್ವನಿ ಬಂದಿತು. ಅಧಿಕಾರ ಬಂದಿತು, ಆರ್ಥಿಕ-ಸಾಮಾಜಿಕ ಬಲ ಸಮ್ಮಾನಗಳು ಬಂದವು. ದಲಿತರ ಬದುಕು ಅರಳತೊಡಗಿತು. ಅವರ ಸೃಜನಶೀಲತೆ- ಕ್ರಿಯಾಶೀಲತೆಗಳು ಬೆಳಗತೊಡಗಿದವು. ಕೇವಲ ಅರ್ಧ ಮುಕ್ಕಾಲು ಶತಮಾನದಲ್ಲೇ ದಲಿತರು ಬುದ್ಧಿಮತ್ತೆಯಲ್ಲಾಗಲೀ, ಭಾವ ಕಲ್ಪನೆ ಕಲಾಭಿವ್ಯಕ್ತಿ ಮುಂತಾದ ಪ್ರತಿಭಾಜನ್ಯ ಕ್ರಿಯೆಗಳಲ್ಲಾಗಲೀ ತಾವು ಯಾರಿಗೂ ಎರಡನೆಯವರಲ್ಲ ಎಂದು ತೋರಿಸಿಕೊಟ್ಟಿದ್ದಾರೆ.

ಆದುದರಿಂದಲೇ, ಅಂಬೇಡ್ಕರ್ ಹೆಸರು ಕೇಳಿದರೆ ದಲಿತರ ಕಣ್ಣುಗಳು ಮಿನುಗುತ್ತವೆ.

೨೮-೦೪-೨೦೧೧

# ಹಸಿವು

ಬಹುಶಃ ಮಾನವನ ಪ್ರವೃತ್ತಿಗಳಲ್ಲೆಲ್ಲಾ ಹಸಿವು ಅತ್ಯಂತ ಪ್ರಬಲವಾದುದು. ಅವನ ಇನ್ನಿತರ ಪ್ರವೃತ್ತಿಗಳಾದ ಕಾಮ, ನಿದ್ರೆ, ಮಲ, ಮೂತ್ರ ವಿಸರ್ಜನೆ ಮುಂತಾದವು ಹಸಿವಿನ ಮುಂದೆ ದುರ್ಬಲವಾದಂಥವು ಅಥವಾ ಅನ್ನ ಆಹಾರ ಸೇವನೆಯಿಂದಾಗಿಯೇ ಅವುಗಳಿಗೆ ಶಕ್ತಿಚಾಲನೆಯಾಗುತ್ತದೆ. ಇಲ್ಲದಿದ್ದಲ್ಲಿ ಇಲ್ಲ. ಅಷ್ಟರಮಟ್ಟಿಗೆ ಅವು ಅನ್ನ ಆಹಾರಗಳ ಸೇವನೆಯ ಮೇಲೆ ಅವಲಂಬಿತವಾಗಿರುತ್ತವೆ. ಆದುದರಿಂದ ಹಸಿವಿನ ತೃಪ್ತಿಗಾಗಿಯೇ ಮಾನವನ ಆದಿಮ ಕ್ರಿಯೆಗಳೆಲ್ಲವೂ ನಡೆದಿರುವುದನ್ನು ಗಮನಿಸಬೇಕು. ಈ 'ಗೇಣು ಹೊಟ್ಟೆ'ಯ ತೃಪ್ತಿಗಾಗಿ ಮಾನವ ಚರಿತ್ರೆಯ ಸಾಹಸ ಮೆರೆದಿದೆ. ಅದು ತೃಪ್ತಿಯಾದ ನಂತರ ನಾಗರಿಕತೆ, ಸಂಸ್ಕೃತಿ ನಿರ್ಮಾಣಗಳ ಮತ್ತು ಬೌದ್ಧಿಕ ವಿಕಾಸದ ಕ್ರಿಯೆಗಳ ಕಡೆ ಮಾನವ ಗಮನ ಹರಿಸಿದ್ದಾನೆ.

'ಹಸಿವು' ಒಂದು ಜೈವಿಕ ಕ್ರಿಯೆ, ದೇಹ ಬದುಕಲು ಹಸಿವು ನೀಗಬೇಕು. ಅವನ ಮೈಮನಗಳು- ಬುದ್ಧಿ ಚಿಂತನೆಗಳು ಸುಗಮವಾಗಿ ಅರಳಲು ದೇಹದ ಜೀವಕಣಗಳಿಗೆ ಆಹಾರ ನಿಯಮಿತವಾಗಿ ಸರಬರಾಜಾಗಬೇಕು. ಆಗ ಎಲ್ಲವೂ ಸ್ತಿಮಿತವಾಗಿರುತ್ತವೆ. ಆದರೆ ಇಂಥ ಅತ್ಯಗತ್ಯ ಆಹಾರವೇ ಸಿಗದೆ ಹೋದಾಗ ದೈಹಿಕ ಸ್ಥಿರ ಅತಂತ್ರಗೊಳ್ಳುತ್ತದೆ- ಸಮತೋಲನ ತಪ್ಪುತ್ತದೆ. ದೇಹದ ಆಹಾರದ ಬೇಡಿಕೆ ಅಷ್ಟು ಪ್ರಬಲವಾಗಿರುತ್ತದೆ. ಅನೇಕ ಸಂದರ್ಭಗಳಲ್ಲಿ ಸಾಂಸಾರಿಕ-ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ ಅದನ್ನು ಪಡೆಯಲು ವ್ಯಕ್ತಿ ಹೋರಾಟಕ್ಕೆ ಇಳಿಯುತ್ತಾನೆ. ಮನುಷ್ಯಸಂಬಂಧಗಳ ಎಲ್ಲೆಯನ್ನು ಚೂರು ಮಾಡಲು ಅವನು ಹೇಸುವುದಿಲ್ಲ. ಕಳ್ಳತನ ಮುಂತಾದ ನೀಚ ಕೆಲಸಗಳಿಗೂ ಇಳಿದುಬಿಡುತ್ತಾನೆ. ಹಸಿವಿಗೆ ಅಂಥ ಶಕ್ತಿ ಇರುತ್ತದೆ. ಏಕೆಂದರೆ, ಜೀವಿಗೆ ಬದುಕುವುದು ಆದ್ಯಕ್ರಿಯೆ. ಬದುಕಿದ್ದರೆ ಮಾತ್ರ ಮಿಥುನ, ಸಂತಾನ ಮುಂತಾದ ಕಟ್ಟುವ ಕ್ರಿಯೆ. ಹಾಗಂತ ಕೇವಲ ಬದುಕುವುದಕ್ಕೋಸ್ಕರ ದುಡಿಯದೆ, ಸಂಪಾದಿಸುವ ಕ್ರಿಯೆಗೆ ತೊಡಗಬೇಕೆಂಬುದು ಆದರ್ಶದ ನಡೆಯಲ್ಲ.

ಈ ಜೈವಿಕ ಹಸಿವು ಹಿಂಗಿದ ನಂತರ ಇತರೆ ಪ್ರವೃತ್ತಿಗಳು ತಲೆ ಎತ್ತುತ್ತವೆ. ನಿದ್ರೆಯು ಸೆಳೆಯುತ್ತದೆ. ಪಚನಕ್ರಿಯೆ ನಡೆದ ನಂತರ ಮಲಮೂತ್ರಗಳು ಹೊರಹೋಗಲು ಹವಣಿಸುತ್ತವೆ. ಈ ಎಲ್ಲ ಪ್ರವೃತ್ತಿಗಳು ಸಾಂಗವಾಗಿ- ನಿಯಮಿತವಾಗಿ ನಡೆಯುತ್ತಿದ್ದಾಗ ಕಾಮದ ಹಸಿವು ಜಾಗೃತವಾಗುತ್ತದೆ. ಈ ಪ್ರವೃತ್ತಿ ಮೂಲದ ಹಸಿವುಗಳು ಸಹಜವಾದವುಗಳು. ಅವುಗಳನ್ನು (ಕಾಮವನ್ನು ಹೊರತುಪಡಿಸಿ) ನಿಯಂತ್ರಿಸಲಾಗುವುದಿಲ್ಲ; ಕಟ್ಟಿಹಾಕಿ ನಿಭಾಯಿಸಲಾಗುವುದಿಲ್ಲ. ಆಹಾರದ ಹಸಿವು ಸಹಜವಾಗಿ ನೀಗುತ್ತಿದ್ದರೆ, ಉಳಿದ ಪ್ರವೃತ್ತಿಗಳು ಅವುಗಳ ಪಾಡಿಗೆ ಅವು

ಕೆಲಸ ನಿರ್ವಹಿಸುತ್ತಿರುತ್ತವೆ. ಅವುಗಳನ್ನು ನಿಯಂತ್ರಿಸಲು ಪ್ರಯತ್ನಪಟ್ಟರೆ ಮೈಮನಸ್ಸುಗಳ ಆರೋಗ್ಯ ಕೆಡುತ್ತದೆ, ಬುದ್ಧಿ ಭಾವಗಳು ಆಯ ತಪ್ಪುತ್ತವೆ.

ಇನ್ನು ಕಾಮದ ಹಸಿವಿನ ವಿಚಾರ. ಇದಕ್ಕೆ ಪ್ರವೃತ್ತಿಗಳಲ್ಲಿ ವಿಶೇಷ ಸ್ಥಾನವಿದೆ. ಇದಕ್ಕೆ ಸೌಂದರ್ಯ-ಮೋಹಗಳ ಥಳಕು ಬಳಕು ಮೋಹಗಳಿವೆ. ಈ ಆಕರ್ಷಣೆ ಜೀವಿಯ ಅಂತರಂಗ ಬಹಿರಂಗಗಳಲ್ಲಿ ಒಡಮೂಡುತ್ತವೆ. ಇದೂ ಕೂಡ ದೇಹದ ರಕ್ತ, ಮಾಂಸ, ಮೂಳೆಗಳ ರೀತಿ ಅತ್ಯಂತ ಸಹಜವಾದ, ಸತ್ಯವಾದ ಕ್ರಿಯೆ. ಇದಕ್ಕಿರುವ ಮೋಹಕತೆ ಹೊರಗಿನಿಂದ ಅವಗಾಹನೆಗೊಂಡುದ್ದಲ್ಲವೆಂಬುದೇ ಇಲ್ಲಿ ಮುಖ್ಯ. ಇದಕ್ಕೊಂದು ಮಹತ್ವದ ಉದ್ದೇಶ-ಆಶಯವಿದೆ. ಅದೇ ಸಂಕುಲ ವೃದ್ಧಿ! ಸಂತಾನವನ್ನು ಮುಂದುವರಿಸಿಕೊಂಡು ಹೋಗುವ ಗುರಿಯಿಂದ ಭಿನ್ನಲಿಂಗಿಗಳನ್ನು ತನ್ನತ್ತ ಸೆಳೆಯಲು ಸಕಲ ನೂರೆಂಟು ಜೀವಿಗಳು ಜೈವಿಕ ಸಹಜ ಕ್ರಿಯೆಗಳಿಂದ ವರ್ತಿಸುತ್ತವೆ. ಈ ಹಸಿವು ಕೆಟ್ಟದ್ದಲ್ಲ. ಅದು ಗೌರವದಿಂದ ಕಾಣಬೇಕಾದ, ಎಲ್ಲರೂ ಅದರ ಆಸೆಯನ್ನು ತಣಿಸುವ ಸಾಮಾಜಿಕ ಬದ್ಧ ಮಾರ್ಗವನ್ನು ತುಳಿಯಬೇಕಾದ ಜರೂರಿರುತ್ತದೆ. ಅದನ್ನು ನಿಯಂತ್ರಿಸುವುದರ ಮೂಲಕ ಬದುಕನ್ನು ಗೆದ್ದೆನೆಂಬುದು ಅಹಂಕಾರದ ಮಾತು; ಅನೇಕ ಸಂದರ್ಭಗಳಲ್ಲಿ ಪಲಾಯನದ ಮಾತೂ ಆಗುತ್ತದೆ. ಜಿತೇಂದ್ರಿಯತ್ವವೆಂಬುದು ಬದುಕನ್ನು ಅದು ಇರುವ ಹಾಗೆಯೇ ಪ್ರೀತಿಸುವ, ಒಪ್ಪಿಕೊಳ್ಳುವ ಮನಸ್ಥಿತಿಯಲ್ಲ. ಅದರ ಬದಲು ಬದುಕಿನ ಸಹಜತ್ವದ ವಿರುದ್ಧವಾಗಿ ವರ್ತಿಸುವ ಅಸಹಜ ಪ್ರವೃತ್ತಿ. ನಮ್ಮ ಋಷಿ ಮುನಿಗಳೆಲ್ಲರೂ ಕಾಮವನ್ನು ಒಪ್ಪಿಕೊಂಡು ಬದುಕನ್ನು ಅಪ್ಪಿಕೊಂಡವರೆಂಬ ಸತ್ಯವನ್ನು ಗಮನಿಸಬೇಕು.

ಬಡತನದ ಮೂಲಕ ಬರುವ ಅನ್ನದ ಹಸಿವು ಮಾನವತೆಗೆ ಅಂಟಿದ ಮಹಾಶಾಪ. ಹಗಲಿರಳು ದುಡಿದರೂ ತುಂಬದ ಹೊಟ್ಟೆಯ ಪಾಡು ಚರಿತ್ರೆಯುದ್ದಕ್ಕೂ ಬಡವರನ್ನು ಕಾಡಿದೆ. ಬಡತನವನ್ನೇ ಮೂಲವಾಗಿಟ್ಟುಕೊಂಡು ಅವರನ್ನು ಗುಲಾಮರನ್ನಾಗಿ ದುಡಿಸಿಕೊಂಡ ಕಳಂಕ ಚರಿತ್ರೆಗಿದೆ. ನಾಗರಿಕತೆ, ಸಂಸ್ಕೃತಿ, ಜ್ಞಾನ, ವಿಜ್ಞಾನ, ತಂತ್ರಜ್ಞಾನಗಳು ಇಷ್ಟು ಎತ್ತರಕ್ಕೆ ಬೆಳೆದಿದ್ದರೂ 'ಅನ್ನ ದೇವರು' ಸರ್ವರಿಗೂ ಪ್ರತ್ಯಕ್ಷವಾಗದಿರುವುದು ಮಾತ್ರ ಮಾನವತೆಯ ವ್ಯಂಗ್ಯ!

೧೨-೦೫-೨೦೧೧

# ಪ್ರಾರ್ಥನೆ

'ತಾಸುಗಟ್ಟಳೆ ಕೂತು ಪ್ರಾರ್ಥನೆ ಮಾಡುವುದಕ್ಕಿಂತ ಅರಿಯದವರ ನಡುವೆ ಕೂತು ಅರಿವು ಮೂಡಿಸುವ ಕೆಲಸ ಹೆಚ್ಚು ಸಾರ್ಥಕವಾದುದು' ಎನ್ನುತ್ತದೆ ಕುರಾನ್. ಕುರಾನಿನ ಈ ಮಾತು ವ್ಯಕ್ತಿಯ ನಿಜವಾದ ಕರ್ತವ್ಯಮುಖತೆಯನ್ನು ನಿರ್ದೇಶಿಸುತ್ತದೆ ಹಾಗೂ ವ್ಯಕ್ತಿವಿಕಾಸಕ್ಕಿಂತ ಸಮುದಾಯವಿಕಾಸ ದೊಡ್ಡದೆಂದು ತಿಳಿಸುತ್ತದೆ. ಏಕೆಂದರೆ ವ್ಯಕ್ತಿಯು ಸಮುದಾಯದ ಒಂದು ಘಟಕ ಮಾತ್ರ. ಅವನ ವಿಕಾಸ ಮಾತ್ರದಿಂದ ಸಮುದಾಯದ ವಿಕಾಸ ಸಾಧ್ಯವಾಗದು. ಒಂದು ವೇಳೆ ವ್ಯಕ್ತಿವಿಕಾಸವೇ ಅತಿಮುಖ್ಯವೆಂದು ಭಾವಿಸಿ, ಆ ದಿಕ್ಕಿನಲ್ಲಿ ಸಾಧನೆ ಮಾಡಹೊರಟರೆ ಸಮಾಜದಿಂದ ವ್ಯಕ್ತಿ ಹೊರಗೆ ನಿಂತು ಬೆಳೆಯಬೇಕಾಗುತ್ತದೆ. ಆಗ ಸಮಾಜದಲ್ಲಿ ಬೌದ್ಧಿಕ ಬೆಳವಣಿಗೆ ಅಸಮವಾಗುತ್ತದೆ. ಆಗ ತಿಳಿದವನು ಅತಿ ಗಣ್ಯನೆಂತಲೂ, ತಿಳಿಯದವರು ಸಾಮಾನ್ಯರೆಂತಲೂ ಪರಿಗಣಿತವಾಗಿ ಸಾಮಾಜಿಕ ಅಸಮಾನತೆ ಸೃಷ್ಟಿಯಾಗುತ್ತದೆ. ಇದೇ ಕಾರಣದಿಂದ ಜ್ಞಾನ ಮತ್ತು ಬುದ್ಧಿಯ ಆಸ್ತಿ ನಿರ್ಮಾಣವಾಗಿ ಕೇವಲ ಕೆಲವು ಮಂದಿ ಸಮಾಜವನ್ನು ತಮ್ಮ ಬೌದ್ಧಿಕ ಬಲದಿಂದ ನಿಯಂತ್ರಿಸಲಾರಂಭಿಸುತ್ತಾರೆ. ಈ ರೀತಿಯ ಸ್ಥಿತಿ ನಿರ್ಮಾಣವಾಗಬಾರದು; ಸಮಾಜ ಅರಿವಿನ ನೆಲೆಯಲ್ಲಿ ಸಮಾನವಾಗಿ ಚಲಿಸುವ ಸ್ಥಿತಿಯಲ್ಲಿದ್ದರೆ ಬೌದ್ಧಿಕ ಶೋಷಣೆ ನಡೆಯಲಾರದು ಎಂಬುದು ಕುರಾನಿನ ಮಾತಿನ ಆಶಯ.

ಇಸ್ಲಾಮಿನಲ್ಲಿ ಪ್ರಾರ್ಥನೆಗೆ ಸ್ಥಾನವಿಲ್ಲವೆಂಬುದು ಈ ಮಾತಿನ ಅರ್ಥವಲ್ಲ. ಆದರೆ ಅದು ಇರಬೇಕಾದ ಸ್ಥಾನವನ್ನು ತಿಳಿಸುವ ಸೂಚನೆಯಿದು. ಇಸ್ಲಾಂ ಧರ್ಮದಲ್ಲಿ ಶಬ್ದಕ್ಕಿಂತ ಮೌನಕ್ಕೆ ಹೆಚ್ಚು ಆದ್ಯತೆಯಿದೆ; ಆಕಾರಕ್ಕಿಂತ ನಿರಾಕಾರಕ್ಕೆ ಹೆಚ್ಚು ತೂಕವಿದೆ. ನಮ್ಮ ವಚನಕಾರರು, ಮುಖ್ಯವಾಗಿ ಅಲ್ಲಮಪ್ರಭುವಿನಂಥವರು ಈ ನಿಲುವಿಗೆ ಹತ್ತಿರದವರಾಗುತ್ತಾರೆ. ತಮ್ಮ ಉದ್ಧಾರದ ಜೊತೆಜೊತೆಗೆ ಇಡೀ ಸಮುದಾಯದ ಉದ್ಧಾರವನ್ನು ಬಯಸುವ ಕಾಯಕ ಗಮ್ಯ ಕ್ರಮ ಇವರದು. ಬಹುಶಃ ನಿಜವಾದ ಅಧ್ಯಾತ್ಮದ ನಿರೀಕ್ಷಿತ ಗುರಿ ಇದೇ ಆಗಿರಬೇಕು.

ಭಾರತೀಯರು ಮಧ್ಯಕಾಲೀನ ಯುಗದಿಂದ ಭಕ್ತಿಪಂಥದ ಪ್ರಭಾವಕ್ಕೆ ಹೆಚ್ಚು ಒಳಗಾದವರು. ಚಿಂತನ ಪ್ರಧಾನ ನೆಲೆಯಿಂದ ನಂಬಿಕೆಯ ನೆಲೆಯ ಭಕ್ತಿ ಮಾರ್ಗದಲ್ಲಿ ಹೆಜ್ಜೆಯಿಡಲಾರಂಭಿಸಿದರು. 'ನಂಬಿ ಕರೆದರೆ ಓ ಎನ್ನನೇ?' ಎಂಬ ನಂಬಿಕೆಯ ಆಧಾರದ ಪೂಜೆ-ಪ್ರಾರ್ಥನೆಗಳು ಆರಾಧನಾ ವಿಧಿಯಲ್ಲಿ ಪ್ರಾಮುಖ್ಯತೆ ಪಡೆದವು. ಪ್ರಾರ್ಥನೆಯನ್ನು ಮನಃಪೂರ್ವಕವಾಗಿ, ಭಕ್ತಿಪೂರ್ವಕವಾಗಿ, ತನ್ಮಯವಾಗಿ ಮಾಡಬೇಕು; ದೈವನಿಷ್ಠೆ ಇರಬೇಕು. ಈ ಶ್ರದ್ಧೆಯ ಪ್ರಾರ್ಥನೆಯಿಂದ ಇಷ್ಟಾರ್ಥಗಳು ಸಿದ್ಧಿಸುತ್ತದೆ ಎಂಬ ನಂಬಿಕೆಯಿದೆ.

ಅಂದರೆ ಪ್ರಾರ್ಥನೆಯ ಉದ್ದೇಶವೇನು?- ಎಂಬ ಪ್ರಶ್ನೆ ಏಳುತ್ತದೆ. ಭಕ್ತಿಯೆಂಬುದು ವಿರಾಗಕ್ಕೆ ಪ್ರೇರಕವಾಗಬೇಕು. ಲೌಕಿಕ ರಾಗಗಳನ್ನು- ಭೌತಿಕ ಆಸೆಗಳನ್ನು ಸಿದ್ಧಿಸಿ ಕೊಡುವ ಸಾಧನವಾಗಬಾರದು. ಅತಿ ಎತ್ತರದ ಚಿಂತನಶೀಲ ನೆಲೆಯ ಆಧ್ಯಾತ್ಮಿಕ ನೆಲೆಗೇರುವ ವ್ಯಕ್ತಿಗೆ ಲೌಕಿಕ ಬಯಕೆಗಳೇ ಇರುವುದಿಲ್ಲ. ಅವನ ಬಯಕೆ-ಪ್ರಾರ್ಥನೆ ಏನಿದ್ದರೂ ಲೋಕ ಕಲ್ಯಾಣವೇ ಆಗಿರುತ್ತದೆ. ಏಸು, ಬುದ್ಧ ಅಂಥವರು. ಆದರೆ ನಾವು ಭಾರತೀಯರು- ಸದಾ ನಮ್ಮ ಸ್ವಾರ್ಥ ಈಡೇರಿಕೆಗೆ ಪ್ರಾರ್ಥನೆಯ ಮೊರೆ ಹೋಗುವುದು ಅಧಿಕ. ನಮಗೇ ಒಳ್ಳೆಯದಾಗಲಿ, ಪರೀಕ್ಷೆಯಲ್ಲಿ ಪಾಸಾಗಲಿ, ಅಪಘಾತವಾಗದಿರಲಿ, ಒಳ್ಳೆಯ ಗಂಡ-ಹೆಂಡತಿ-ಸೊಸೆ/ಅಳಿಯ ಸಿಗಲಿ, ಶತ್ರು ನಾಶವಾಗಲಿ, ಲಾಟರಿ ಹೊಡೆಯಲಿ... ಹೀಗೆ ಸಾಗುತ್ತದೆ ನಮ್ಮ ಬಹುಪಾಲು ಪ್ರಾರ್ಥನೆಗಳ ಅಂತರಾತ್ಮ!

ಲೋಕ ಕಲ್ಯಾಣಕ್ಕಾಗಿ ಪ್ರಾರ್ಥನೆಗಳು ನಡೆಯುವುದಿಲ್ಲ ಎಂದು ನಾನು ಹೇಳಲಾರೆ. ಮಳೆಯಾಗಲಿ, ಬೆಳೆಯಾಗಲಿ, ಭೂಕಂಪ-ಅಗ್ನಿಪರ್ವತ-ಜ್ವಾಲಾಮುಖಿಗಳಾಗದಿರಲಿ... ಹೀಗೆ ಒಳ್ಳೆಯದಾಗಲೆಂದು ಮಾಡುವ ಅರ್ಚನೆಗಳು ಪ್ರಾರ್ಥನೆಗಳು ಆಧುನಿಕ ವಿಜ್ಞಾನಯುಗದಲ್ಲಿ ಅಧಿಕವಾಗಿವೆ... ಆದರೆ ಇವು ಕೂಡ ಸಮುದಾಯ ಭಯ ಮೂಲದಿಂದಲೇ ಉದ್ಭವಿಸಿದ ಪ್ರಾರ್ಥನೆಗಳು ಎಂಬುದನ್ನು ಮರೆಯಲಾಗದು. ಕೆಟ್ಟದ್ದಾಗಬಾರದು ಎಂದು ಆಶಿಸುವುದು- ಅದನ್ನು ಅಮೂರ್ತ ಶಕ್ತಿಗೆ ಪ್ರಾರ್ಥನೆ ಮೂಲಕ ಕೋರಿಕೊಳ್ಳುವುದು ತಪ್ಪಲ್ಲ. ಅದು ಮಾನವನಲ್ಲಿರುವ ಸ್ಪಂದನೆ ಮತ್ತು ಮಾನವತೆಯನ್ನು ತೋರುವ ಅಭಿವ್ಯಕ್ತಿಯಾಗುತ್ತದೆ. ಆದರೆ ಪ್ರಕೃತಿ ವಿಕೋಪಗಳು ಪ್ರಾರ್ಥನೆಯಿಂದ ಶಮನವಾಗಲಾರವು ಎಂಬ ವಿವೇಚನೆ ನಮ್ಮಲ್ಲಿರಬೇಕು. ಈ ವಿಕೋಪಗಳಿಗೆ ನಮ್ಮ ಸ್ವಾರ್ಥ ಸಾಧನಗಳು ಎಷ್ಟು ಕಾರಣವೆಂಬುದನ್ನು ಕೂಡ ನಾವು ವಿಮರ್ಶಿಸಬೇಕು.

ಪ್ರಾರ್ಥನೆ ಧ್ಯಾನವಾಗಿ ಪರಿವರ್ತಿತವಾಗಬೇಕು; ಸದ್ದು ಮೌನವಾಗಬೇಕು; ಸ್ವಾರ್ಥ ನಾಶವಾಗಿ ಸಮುದಾಯದ ಪ್ರತೀಕವಾಗಿ ಆತ್ಮ ನಿಲ್ಲಬೇಕು. ಅದನ್ನು ಸುಸ್ಥಿರಗೊಳಿಸಲು ಬೇಕಿರುವುದು ಭಾವೋತ್ಕರ್ಷವಲ್ಲ- ಅದರ ಬದಲು ಭಾವನಿಗ್ರಹ! ಮತಿವಿಕಲರಂತೆ ಚಂಚಲಗೊಳ್ಳುವುದಲ್ಲ- ಅದರ ಬದಲು ಸಮಚಿತ್ತ- ಸಮಭಾವದ ನೆಲೆಯಿಂದ ಲೋಕಭಾವ- ಲೋಕ ಚಿತ್ತದಲ್ಲಿ ಒಂದಾಗುವ ಪರಿಕ್ರಮ.

೨೬-೦೫-೨೦೧೧

# ಅರಣ್ಯ ನ್ಯಾಯ!?

ಮನುಷ್ಯ ಕೇಂದ್ರಿತ ವಿಷಯಗಳನ್ನು ಮಾತನಾಡುವಾಗ 'ಅರಣ್ಯ ನ್ಯಾಯ'ದ ಪ್ರಸ್ತಾಪವಾಗುತ್ತದೆ. ಮನುಷ್ಯ ವಾಸಮಾಡುವ 'ಊರು' ಮುಖ್ಯವಾದಾಗ ಪ್ರಾಣಿಗಳು ವಾಸ ಮಾಡುವ ಅರಣ್ಯ ಮನುಷ್ಯನ ದೃಷ್ಟಿಯಲ್ಲಿ ಅಮುಖ್ಯವಾಗುತ್ತದೆ. ಮನುಷ್ಯನು ತನ್ನ ಬದುಕಿನ ಹಸನಿಗಾಗಿ ಮಾಡಿಕೊಂಡಿರುವ ನೀತಿ ನಿಯಮಗಳು, ರೀತಿ ರಿವಾಜುಗಳು ಶ್ರೇಷ್ಠವಾಗಿ ತೋರುತ್ತವೆ. ಅದಕ್ಕೆ ಸಮಾನಾಂತರವಾಗಿ ಈ ಭೂಮಿಯ ಮೇಲೆ ಮತ್ತು ಒಳಗೆ ಇರುವ ಅಸಂಖ್ಯಾತ ಜೀವ ಸಂಕುಲಗಳ ಬದುಕು ಮತ್ತು ಅವುಗಳ ಜೀವನ ನಿಯಮಾವಳಿಗಳು ನಮಗೆ ವಿಚಿತ್ರವಾಗಿಯೂ ಅಸಹಜವಾಗಿಯೂ ಅನೇಕ ಸಂದರ್ಭಗಳಲ್ಲಿ ಅಮಾನವೀಯವಾಗಿಯೂ ಕಾಣುತ್ತವೆ.

ಇದು ಸಹಜವೇ! ಏಕೆಂದರೆ ಮಾನವ ಸಂಕುಲಕ್ಕೆ ಹೊರತಾದ ಬದುಕನ್ನು ನಾವು ನೋಡುವುದು ಮತ್ತು ವ್ಯಾಖ್ಯಾನಿಸುವುದು ಮಾನವ ದೃಷ್ಟಿಯಿಂದಲೇ. ಆ ಬದುಕಿನಲ್ಲಿ ನಾವು ನಿರೀಕ್ಷಿಸುವುದು ನಮ್ಮ ಬದುಕಿನ ನಿಯಮಾವಳಿಗಳನ್ನೇ ಮತ್ತು ನೈತಿಕ-ಜೈವಿಕ ರೀತಿ ರಿವಾಜುಗಳನ್ನೇ. ಆ ಬದುಕನ್ನು ಅಳೆಯುವ, ಮೌಲ್ಯೀಕರಿಸುವ ದೃಷ್ಟಿಕೋನವು ಕೂಡ ಮಾನವ ನಿರ್ಮಿತ ಮಾನದಂಡಗಳನ್ನು ಅವಲಂಬಿತವಾಗಿರುತ್ತದೆ. ಆದುದರಿಂದ ಅರಣ್ಯದಲ್ಲಿ ಪ್ರಾಣಿಗಳ ಬದುಕು ನೈತಿಕ ನೆಲೆಯಲ್ಲಿಲ್ಲವೆಂಬಂತೆಯೂ, ಕ್ರೂರತೆಯಿಂದ ಕೂಡಿರುವಂತೆಯೂ ತೋರುತ್ತದೆ. ಪ್ರಾಣಿಗಳ ಬದುಕಿನಲ್ಲಿ ನಾವು ನಮ್ಮಲ್ಲಿರುವಂತಹ ತಾಯಿ-ಮಗ ತಂದೆ-ಮಗಳು ತರದ ಮನುಷ್ಯ ಸಂಬಂಧೀ ನೆಲೆಗಳನ್ನು ಹುಡುಕಿ-ಇಲ್ಲದಿರುವುದನ್ನು ಕಂಡು ನಿರಾಶರಾಗುತ್ತೇವೆ. ಮತ್ತು ಅಲ್ಲಿನ ನಿರ್ಭಿಡೆ ಸಂಬಂಧಗಳಿಗೆ ಅಸಹ್ಯಪಟ್ಟುಕೊಳ್ಳುತ್ತೇವೆ. 'ಛೇ, ಏನಿದು? ಇವುಗಳಲ್ಲಿ ಸಂಬಂಧಗಳಿಗೆ ಬೆಲೆಯೇ ಇಲ್ಲವಲ್ಲ! ತಂದೆ ಮಗಳ ಜೊತೆಯಲ್ಲಿ ಅಥವಾ ತಾಯಿ ಮಗನ ಜೊತೆ ಲೈಂಗಿಕ ಸಂಬಂಧಕ್ಕೆ ತೊಡಗುತ್ತವಲ್ಲ! ಸೋದರ ಸಂಬಂಧವೇ ಇಲ್ಲವಲ್ಲ! ಅವು ಜೈವಿಕವಾಗಿ ಬೆರೆಯುತ್ತವಲ್ಲ!' ಎಂದು ವ್ಯಾಖ್ಯಾನಿಸುತ್ತೇವೆ.

ಆದರೆ ಪ್ರಾಣಿ ಪ್ರಪಂಚದಲ್ಲಿ ಪ್ರತಿ ಸಂಕುಲಕ್ಕೂ ಅದರವೇ ಆದ ಜೀವನ ಶೈಲಿ ಮತ್ತು ನಿಯಮಾವಳಿಗಳಿರುತ್ತವೆ ಮತ್ತು ಅವುಗಳಿಗನುಗುಣವಾಗಿ ಅವು ಬದುಕುತ್ತಿರುತ್ತವೆ. ಅವು ಪ್ರಜ್ಞೆ ಮತ್ತು ಪ್ರವೃತ್ತಿಯ ಮಟ್ಟದಲ್ಲಿ ಬದುಕುತ್ತಿರುತ್ತವೆ. ಆ ಬದುಕು ನೈಸರ್ಗಿಕವಾಗಿರುತ್ತದೆ. ಸಹಜವಾಗಿರುತ್ತದೆ. ಬಿಸಿಲು ಮಳೆ ಗಾಳಿಗಳಂತೆ ಅಕೃತ್ರಿಮವಾಗಿರುತ್ತದೆ. ಮನುಷ್ಯನ ಬದುಕಿನ

ರೀತಿ ಸಹಜತೆಯಿಂದ ಅಸಹಜತೆಯ ಕಡೆಗೆ ಕಟ್ಟಿಕೊಂಡ, ರೂಪಿಸಿಕೊಂಡ ನಿರ್ಮಿತಿಯಲ್ಲ. ಈ ಕಟ್ಟಿಕೊಂಡ ನಿರ್ಮಿತಿಯಿಂದಾಗಿಯೇ ಮನುಷ್ಯನ ಬದುಕು ಉಸಿರು ಸಿಕ್ಕಿಸಿಕೊಂಡಂತೆ ಸಂಕಟಪಡುತ್ತದೆ. ಅನೇಕ ಸಂದರ್ಭದಲ್ಲಿ ಉಸಿರು ಕಟ್ಟಿಸಿಕೊಂಡ ಬಂಧನದಿಂದ ಬಿಡಿಸಿಕೊಂಡು ನೈಸರ್ಗಿಕವಾಗಲು ಹೆಣಗುತ್ತದೆ. ಆ ರೀತಿ ಪ್ರಯತ್ನಿಸಿದಾಗಲೆಲ್ಲಾ, ಪ್ರಯತ್ನಿಸಿದ ಜೀವ ಅಥವಾ ಸಮೂಹ ವ್ಯವಸ್ಥೆಯ ಕಟ್ಟುಪಾಡನ್ನು ಮೀರಿದ ಪಾಪಕ್ಕೆ ಗುರಿಯಾಗುತ್ತದೆ; ವ್ಯವಸ್ಥೆಯ ಶಿಕ್ಷೆಗೆ ಗುರಿಯಾಗುತ್ತದೆ. ಆದರೂ ವ್ಯವಸ್ಥೆ ನಿರ್ಮಾಣ ಮಾಡಿದ ನೀತಿ ನಿಯಮಗಳನ್ನು ಮೀರುವ ಪ್ರಯತ್ನ ನಿಂತಿಲ್ಲ. ಅದು ಚಲನಶೀಲತೆಯ ಲಕ್ಷಣ; ಮನುಷ್ಯ ನೈಸರ್ಗಿಕ ನಿಯಮಗಳಿಗೆ ತೀರಾ ಹತ್ತಿರವಾದವನು ಎಂಬುದರ ಸೂಚಕ. ಅಂದರೆ ಮೂಲತಃ ಮನುಷ್ಯನು ಕೂಡ ಜೀವ ಜಗತ್ತಿನ ಒಂದಂಶ ಮಾತ್ರ ಎಂಬ ಸತ್ಯದ ದರ್ಶನವಾದಂತಾಯಿತು. ಈ ಸತ್ಯವನ್ನು ಅರ್ಥ ಮಾಡಿಕೊಳ್ಳದ ಮಾನವನು ಮಾತ್ರ ತಾನು ಇತರ ಜೀವಜಗತ್ತಿಗಿಂತ ಉತ್ತಮವೆಂದು ಬೀಗುತ್ತಾನೆ. ಇದು ಅಹಂಕಾರದ ಮತ್ತು ಅಜ್ಞಾನದ ಸಂಕೇತ ಮಾತ್ರ.

'ಅರಣ್ಯ ನ್ಯಾಯ'ವನ್ನು 'ಲಾ ಆಫ್ ದ ಜಂಗಲ್' ಎಂದು ಇಂಗ್ಲಿಷ್‌ನಲ್ಲಿ ಕರೆಯುತ್ತಾರೆ. 'ಅರಣ್ಯ ನ್ಯಾಯ'ವೆಂದರೆ ಯಾವುದೇ ನಿಯಮಗಳಿಲ್ಲದ, ಮಾನವೀಯತೆ ಇಲ್ಲದ, ಕ್ರೌರ್ಯ ತುಂಬಿದ ನ್ಯಾಯ ವ್ಯವಸ್ಥೆಯೆಂದು ಸಾಂಪ್ರದಾಯಿಕ ಅರ್ಥ ತಿಳಿಸುತ್ತದೆ. ಬಲಾಢ್ಯತೆಯ ಬದುಕು; ಶಕ್ತಿ ಇದ್ದವ ಬದುಕುತ್ತಾನೆ. ಕಾಡಿನಲ್ಲಿ ಹುಲಿ ಸಿಂಹ ಚಿರತೆಗಳಂಥ ಬಲಾಢ್ಯ ಮಾಂಸಾಹಾರಿ ಪ್ರಾಣಿಗಳು ದುರ್ಬಲ ಸಸ್ಯಾಹಾರಿ ಪ್ರಾಣಿಗಳನ್ನು ಹಿಡಿದು ತಿನ್ನುತ್ತವೆ. ಇದು ತಪ್ಪು, ಮನುಷ್ಯ ಜಗತ್ತಿನಂತೆ ಸಬಲ ದುರ್ಬಲರೆಲ್ಲರೂ ಸಹಬಾಳ್ವೆ ನಡೆಸಬೇಕು, ಪ್ರೀತಿ ಸ್ನೇಹ ಸಂಬಂಧವಿರಬೇಕು. ಅದುವೇ ಜೀವನ ಎಂಬಂಥ ಕಲ್ಪನೆಯಿದೆ. ಈ ಕಲ್ಪನೆ, ಮಾನವ ಆದರ್ಶ ಅರಣ್ಯಬದುಕಿನಲ್ಲಿ ಜಾರಿಗೆ ಬಂದರೆ ಆಗುವ ಅನಾಹುತವನ್ನು ಕಲ್ಪಿಸಿಕೊಳ್ಳಿ. ಹುಲಿ, ಸಿಂಹ, ಚಿರತೆ ಮುಂತಾದ ಪ್ರಾಣಿಗಳೆಲ್ಲವೂ ಹಸಿವೆಯಿಂದ ಬಳಲಿ ಪ್ರಾಣ ನೀಗಬೇಕಾಗುತ್ತದೆ. ನೈಸರ್ಗಿಕ ಸಮತೋಲನ ತಪ್ಪಿ ಸಸ್ಯಾಹಾರಿ ಪ್ರಾಣಿಗಳು ಅಪಾರ ಸಂಖ್ಯೆಯಲ್ಲಿ ಅಧಿಕಗೊಂಡು ಆಹಾರವಿಲ್ಲದೆ ನರಳಿ ಸಾಯಬೇಕಾಗುತ್ತದೆ. ಜಗತ್ತಿನ ಅನೇಕ ಜೀವ ಸಂಕುಲಗಳು ಆಹಾರ ಸರಪಳಿಯ ಕೊಂಡಿಯ ಕುಣಿಕೆಯಿಂದ ತಪ್ಪಿಸಿಕೊಂಡು ಕಣ್ಮರೆಯಾಗಬೇಕಾಗುತ್ತದೆ. ಆದುದರಿಂದ ಪ್ರಕೃತಿ ಧರ್ಮದಂತೆ ಜೀವನ ಕ್ರಮ ಸಾಗುವುದು ಉತ್ತಮ. ಪ್ರಕೃತಿಯ ಮಡಿಲಲ್ಲಿ ಪ್ರತಿಯೊಂದು ಜೀವ ಸಂಕುಲಕ್ಕೂ ಬದುಕುವ ಸವಾಲುಗಳು ಕರಗತವಾಗಿರುತ್ತವೆ. ಆ ಸವಾಲುಗಳನ್ನು ಸ್ವೀಕರಿಸಿ ನಿಂತಾಗ ಮಾತ್ರ ಅವುಗಳ ಅಸ್ತಿತ್ವ ಚಲನೆಯಲ್ಲಿರುತ್ತದೆ.

೦೯-೦೬-೨೦೧೧

# ಹೆಂಡತಿ ಪ್ರಾಣ ಹಿಂಡುತಿ!?

ಪುರಂದರದಾಸರ ದೇವರನಾಮವೊಂದರಲ್ಲಿ 'ಹೆಂಡತಿ ಪ್ರಾಣ ಹಿಂಡುತಿ! ಕೊಂಡ ದೊಡ್ಡ ಕೋತಿಯಂತೆ ಕುಣಿ ಕುಣಿಸುತ್ತಿ!... ಮೃತ್ಯು ದೇವತೆಯಂತೆ ಮನೆಯೊಳಗಿರುತ್ತಿ! ಮಾತು ಮೀರುತ್ತಿ! ಇಲ್ಲದ್ದು ಬೇಡುತ್ತಿ ಸುಳ್ಳು ಮಾತಾಡುತ್ತಿ!... ಹಿರಿಯತನಕೋಗುತ್ತಿ ಗರುವಿಕೆ ಮಾಡುತ್ತಿ! ನೆರೆ ಹೊರೆಯವರ ಕೂಡ ಬಡೆದಾಡುತ್ತಿ' -ಎಂದೆಲ್ಲಾ ಪತ್ನಿಯ ವ್ಯಕ್ತಿತ್ವವನ್ನು ವರ್ಣಿಸಲಾಗಿದೆ. ಪುರಂದರದಾಸರು ಅಪಾರ ಲೋಕಜ್ಞಾನವನ್ನು ಪಡೆದವರಾಗಿದ್ದರು. ಅಂತಹವರು ಪತ್ನಿಯ ಬಗ್ಗೆ ಅತ್ಯಂತ ಲೌಕಿಕ ಅರ್ಥದಲ್ಲಿ ಮಾತನಾಡುತ್ತಾರೆಂದರೆ ಆಶ್ಚರ್ಯವಾಗುತ್ತದೆ. ಅವರ ಬದುಕಿನಲ್ಲಿ ಅವರ ಪತ್ನಿ ಅವರ ಅಂತರಂಗ ತಿಳಿವಿನ ಎಚ್ಚರಕ್ಕೆ ಕಾರಣಳಾದಳೆಂಬ ದಂತಕತೆಯೂ ಇದೆ. ಆದುದರಿಂದ ಸಾಮಾನ್ಯಾರ್ಥದಲ್ಲಿ ಪುರಂದರರು 'ಹೆಂಡತಿ'ಯೆಂಬ ಅರ್ಥವನ್ನು ಸೂಚಿಸಿ ಹೇಳುತ್ತಿಲ್ಲವೆಂದು ಭಾಸವಾಗುತ್ತದೆ. ನಮ್ಮಲ್ಲಿ ಭಕ್ತ-ಭಗವಂತ ಸಂಬಂಧವನ್ನು ಹೆಣ್ಣು ಗಂಡಿನ ಸಂಬಂಧಕ್ಕೆ ಅನ್ವಯಿಸಿ ಹೇಳುವ ಪದ್ಧತಿಯಿದೆ. ಬಹುಶಃ ಪುರಂದರರಿಗೆ ಅವರಿಗಿಂತ ಮುನ್ನಿನ ವಚನ ಸಂಸ್ಕೃತಿಯ ಪ್ರಭಾವ ಪರೋಕ್ಷವಾಗಿ ಆಗಿರಲು ಸಾಧ್ಯವಿದೆ. ವಚನ ಸಂಸ್ಕೃತಿಯ 'ಶರಣ ಸತಿ-ಲಿಂಗ ಪತಿ' ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿ ತಮ್ಮೊಳಗಿನ ಆತ್ಮವನ್ನು ಅವರು 'ಹೆಂಡತಿ'ಯೆಂದು ಪರಿಭಾವಿಸಿ, ಅದು ಅಧ್ಯಾತ್ಮದ ಬೆಳಕಿನತ್ತ ಚಲಿಸಲೆಂದು ಛೇಡಿಸುವ ಧಾಟಿಯಲ್ಲಿ ಈ ಕೀರ್ತನೆಯನ್ನು ಕಟ್ಟಿರಬಹುದು.

ಆದರೆ ನಮ್ಮ ಬದುಕಿನ ಜನ ಸಮುದಾಯದಲ್ಲಿ 'ಹೆಂಡತಿ'ಗೆ ಎರಡನೆಯ ಸ್ಥಾನವನ್ನು ನೀಡಿರುವುದು ಸತ್ಯವಾದ ಸಂಗತಿ. ಇಂದೂ ಕೂಡ ಕುಟುಂಬ ವ್ಯವಸ್ಥೆಯಲ್ಲಿ ತೀರ್ಮಾನ ತೆಗೆದುಕೊಳ್ಳುವ ಅಂತಿಮ ಹಕ್ಕು ಪುರುಷನಿಗೇ ಇರುವುದು. ಮನೆಯ ಒಳಗೆ ಮತ್ತು ಹೊರಗೆ ಪುರುಷಪಾರಮ್ಯ ಮೆರೆಯುವುದು ನಮ್ಮ ಸಂಸ್ಕೃತಿಯ ನಿರಂತರತೆಯ ಅಂಶವಾಗಿದೆ. ಅದರಿಂದ ಆಧುನಿಕ ವಿದ್ಯೆ ಕೂಡ ಸ್ತ್ರೀಯನ್ನು ಸಮಾನತೆಯ ನೆಲೆಗೆ ತರಲು ಅಸಮರ್ಥವಾಗಿದೆ. ಮೇಲು ನೋಟಕ್ಕೆ ಆಧುನಿಕ ವಿದ್ಯೆ ಭಾರತೀಯ ಸಮಾಜದಲ್ಲಿ ಸ್ತ್ರೀ ಸಬಲೀಕರಣವನ್ನು ಸಾಧಿಸಿದೆಯೆಂದು ಕಂಡುಬಂದರೂ, ಅವಳು ಆರ್ಥಿಕ ಸ್ವಾತಂತ್ರ್ಯದ ಬೆಳಕಿನಲ್ಲಿ ನಿಜವಾದ ಅಸ್ತಿತ್ವವನ್ನು ಕಂಡುಕೊಳ್ಳುವಲ್ಲಿ ವಿಫಲವಾಗಿರುವಂತೆ ತೋರುತ್ತದೆ. ಆರ್ಥಿಕ ಸ್ವಾತಂತ್ರ್ಯ ಭೋಗಮೂಲ ತುಡಿತಗಳನ್ನು ಮತ್ತು ಕೊಳ್ಳುಬಾಕತನವನ್ನು ತಣಿಸಬಹುದೇ ಹೊರತು ಸಾಮಾಜಿಕ ಮತ್ತು ಕೌಟುಂಬಿಕ ಸಮಾನತೆಯನ್ನು ತಂದುಕೊಡಲು ವಿಫಲವಾಗಿದೆಯೆಂಬುದನ್ನು ವಿವೇಕದ ಮೂಲಕ, ವಿವೇಚನೆಯ ಮೂಲಕ ಕಂಡುಕೊಳ್ಳಬೇಕಾಗಿದೆ. ಸೂಕ್ಷ್ಮವಾಗಿ ಗಮನಿಸಿದರೆ ಪುರುಷನು ಸ್ತ್ರೀ

ವಿದ್ಯೆಯ ಮೂಲಕ ಪಡೆದುಕೊಂಡಿರುವ ಆರ್ಥಿಕ ಸಬಲವನ್ನು ಮತ್ತು ಸುಖವನ್ನು ಪರೋಕ್ಷವಾಗಿ ಕಬಳಿಸುತ್ತಿರುವುದು ಕಂಡುಬರುತ್ತದೆ. ಅವಳನ್ನು ಅವಳು ಆಧುನಿಕ ಯುಗದಲ್ಲಿ ಪಡೆದಿರುವ ವಿದ್ಯೆಯಿಂದಾಗಿಯೇ ಇಮ್ಮಡಿಯಾಗಿ ದುಡಿಯುವಂತೆ ಮಾಡಿದೆಯೆಂಬ ಸತ್ಯವನ್ನು ಅಲ್ಲಗೆಳೆಯಲಾಗುತ್ತದೆ. ಅವಳು ಕಲಿತ ವಿದ್ಯೆ ಅವಳಿಗೆ ಹೊರ ಜಗತ್ತಿನ ದುಡಿಮೆಯ ಹಕ್ಕನ್ನು ಗಳಿಸಿಕೊಟ್ಟಿರುವುದು ನಿಜ. ಆದರೆ ಅವಳನ್ನು ಅವಳ ಮನೆಯೊಳಗಿನ ದುಡಿಮೆಯಿಂದ ಮುಕ್ತಗೊಳಿಸಿಲ್ಲ. ನಿಜವಾದ ಅರ್ಥದಲ್ಲಿ ಭಾರತೀಯ ಸಮಾಜದಲ್ಲಿ ಕಲಿತ ಕುಟುಂಬದಲ್ಲೂ ಹಾಗೂ ಗಂಡ ಹೆಂಡತಿ ಸಮಾನವಾಗಿ ದುಡಿಯುವ ಸಂದರ್ಭದಲ್ಲೂ ದುಡಿಮೆಯ ಹಂಚಿಕೆಯಾಗಿಲ್ಲ. ದುಡಿಮೆಯ ಭಾರ ಪೂರ್ಣವಾಗಿ ಹೆಂಡತಿಯ ಮೇಲೆ ಬಿದ್ದಿದೆ. ಇದರಿಂದಾಗಿ ಅವಳು ದೈಹಿಕವಾಗಿ- ಮಾನಸಿಕವಾಗಿ ಜರ್ಜರಿತಳಾಗುತ್ತಿದ್ದಾಳೆ; ಹೊರಗಿನ- ಒಳಗಿನ ದುಡಿಮೆಯ ಒತ್ತಡಕ್ಕೆ ಸಿಲುಕಿದ್ದಾಳೆ. ಅಸ್ವಸ್ಥತೆಯ ಹಾದಿಯಲ್ಲಿ ಅವಳು ನರಳುವಂತಾಗಿದೆ. ಆದರೆ ಪುರುಷ ಏಕದುಡಿಮೆಯಿಂದ ವಿರಾಮ ಮತ್ತು ನೆಮ್ಮದಿಯ ಸುಖವನ್ನು ಅನುಭವಿಸುತ್ತಿದ್ದಾನೆ. ಈ ಸೂಕ್ಷ್ಮಗಳು ಹೆಂಡತಿಯನ್ನು ದುಡಿಯುವ, ಹೆರುವ ಕೆಲಸಗಾರ್ತಿಯನ್ನಾಗಿಯೇ ಇಟ್ಟಿವೆಯೆಂಬ ಸತ್ಯವನ್ನು ಹೊರಗೆಡಹುತ್ತವೆ. ಈ ಅಂಶವನ್ನು ಹೆಣ್ಣು ಇಂದು ವಿಶ್ಲೇಷಣೆ ಮಾಡಬೇಕಾಗಿದೆ.

ನಮ್ಮಲ್ಲಿ ದಂಪತಿಗಳು ನಿಜವಾಗಿಯೂ 'ಜೋಡಿ'ಗಳಲ್ಲ. 'ಜೋಡಿಗಳು' ಎಂಬ ಮಾತಿನಲ್ಲಿ ಸಮಾನತೆಯ ಅರ್ಥವಿದೆ. ಗಂಡು ಹೆಣ್ಣನ್ನು 'ನೋಡಿ' ಅವರನ್ನು 'ಜೋಡಿ' ಮಾಡುವ ಕ್ರಿಯೆಯನ್ನೇ 'ಮದುವೆ'ಯೆಂದು ವ್ಯಾಖ್ಯಾನಿಸಬೇಕು- ಭಾರತೀಯ ಸಂದರ್ಭದಲ್ಲಿ! ಹೀಗೆ 'ಜೋಡಿ'ಗಳನ್ನು ಮಾಡುವ ಮದುವೆಗಳು ಲಿಂಗ ಸಮಾನತೆಯನ್ನೂ, ಪರಸ್ಪರ ಗೌರವ ನೀಡುವಿಕೆಯನ್ನು ಮಾನ್ಯ ಮಾಡಬೇಕು. ಆದರೆ ಅದು ನಮ್ಮ ನಡುವೆ ಸಾಧಿತವಾಗುತ್ತಿಲ್ಲ. ಮದುವೆಯಾದ ಮೇಲೆ ಹೆಂಡತಿಯ ಹೊರ- ಒಳಗಿನ ದುಡಿಮೆ ನಿರಂತರವಾಗಿ ನಡೆಯಬೇಕಾದ ಅನಿವಾರ್ಯತೆ ಸೃಷ್ಟಿಯಾಗುತ್ತದೆ. ಭಾರತೀಯ ದುಡಿಯುವ ವರ್ಗದಲ್ಲಿ, ರೈತಾಪಿ ವಲಯದಲ್ಲಿ ಹೆಣ್ಣು ದುಡಿಯುವ ಆಳೇ ಸೈ! ಆ ದುಡಿಮೆಯ ಫಲದ ಸಿಂಹಪಾಲು ಮನೆಯ ಪುರುಷನಿಗೆ! ಅವಳು ಎಂದಿಗೂ ಸೆರಗ ಹಿಂದಿನ ಬದುಕನ್ನೇ ಅನುಭವಿಸಬೇಕು.

ನಮ್ಮ ಸಮಾಜದಲ್ಲಿ ಹೆಂಡತಿ ಇಂದಿಗೂ 'ಬೆಟರ್ ಹಾಫ್' ಆಗಿಲ್ಲದಿರುವುದು ನಮ್ಮ ಬದುಕಿನ ವ್ಯಂಗ್ಯವೂ ಹೌದು, ಸ್ತ್ರೀ ಹೋರಾಟದ ಆತಂಕವೂ ಹೌದು.

೨೩-೦೬-೨೦೧೧

# ಸೃಷ್ಟಿ ಮತ್ತು ಕರ್ತ

ಸೃಷ್ಟಿಯ ಮೂಲ ಶೋಧದ ತುಡಿತ ಅತ್ಯಂತ ಪುರಾತನವಾದುದು. ಇಂದು ನಾವು ಅದರ ಬಗ್ಗೆ ಏನು ಮಾತನಾಡಿದರೂ ಹಿಂದಿನವರ ಕಾಣ್ಕೆಯೋ ಅಥವಾ ಅದರ ಮುಂದುವರಿಕೆಯೋ ಆಗಿರುತ್ತದೆ. ಏಕೆಂದರೆ ಸೃಷ್ಟಿಯೆಂಬುದು ಚಿಂತಕರ ಚಿಂತನೆಗೆ ಮುಂಚಿತವಾಗಿಯೇ ಇತ್ತು. ಇದು ವಿವಾದಾತೀತ ಸತ್ಯ. ದೇವರಿಗಿಂತ ಮುಂಚೆ ಸೃಷ್ಟಿ ಇತ್ತು; ದೇವ ಮಾನವರಿಗಿಂತ ಮುಂಚೆ ಸೃಷ್ಟಿ ಇತ್ತು ಎಂಬ ಸತ್ಯವನ್ನು ಆಸ್ತಿಕ ಮನಸ್ಸು ಒಪ್ಪಿಕೊಳ್ಳಲು ಸಿದ್ಧವಾಗಲೇ ಇಲ್ಲ. ಚರಿತ್ರೆಯುದ್ದಕ್ಕೂ ಸೃಷ್ಟಿಗೆ ಕಾರಣವಾದ ಅಸ್ತಿತ್ವದ ಬಗ್ಗೆ ನಿರಾಯಾಸವಾದ ವಾದ ಮಂಡನೆಯಾಗುತ್ತಲೇ ಬಂದಿದೆ. ಈ ವಾದವನ್ನು ಪ್ರಶ್ನಿಸಿದವರನ್ನು ಸಮಾಜ ದ್ರೋಹಿಗಳೆಂದೂ ಧರ್ಮದ್ರೋಹಿಗಳೆಂದೂ ನಾಸ್ತಿಕರೆಂದೂ- ಇಂಥವರಿಂದ ಅಧರ್ಮ ಹೆಚ್ಚುತ್ತಿದೆಯೆಂದು ಹೇಳುತ್ತಲೇ ಬರಲಾಗುತ್ತಿದೆ. ಅನೇಕ ವೇಳೆ ಚರಿತ್ರೆ ಈ ರೀತಿ ಪ್ರಶ್ನಿಸಿದವರನ್ನು, ಸೃಷ್ಟಿಯ ಬಗೆಗಿನ ಯಥಾವಾದವನ್ನು ಅಥವಾ ಇರುವಿಕೆಯನ್ನು ಇದ್ದ ಹಾಗೆ ಮತ್ತು ಇರುವುದೇ ಸತ್ಯವೆಂದು ಹೇಳುವವರನ್ನು ಅತ್ಯಂತ ಕ್ರೂರವಾಗಿ ದಂಡಿಸುತ್ತಲೇ ಬಂದಿದೆ. ಆದರೆ ಕರ್ತನನ್ನು ಪ್ರಶ್ನೆ ಮಾಡುವ ಮನೋಧರ್ಮವನ್ನು ಹತ್ತಿಕ್ಕಲು ಸಾಧ್ಯವಾಗಿಲ್ಲ.

ಜಗತ್ತಿಗೊಬ್ಬ ಸೃಷ್ಟಿಕರ್ತನನ್ನು ಕಲ್ಪಿಸಿಕೊಂಡದ್ದು ಆಸ್ತಿಕ ಮನಸ್ಸು ಕಂಡುಕೊಂಡ ಸರಳ ಪರಿಹಾರ. ಈ ಸಮಸ್ತವನ್ನು ಯಾವನೊ ಒಬ್ಬ ಅಸಾಮಾನ್ಯ ಶಕ್ತಿಯುಳ್ಳ, ಪವಾಡದಂತೆ ಜಂತರ್ ಮಂತರ್ ಮಾಡಬಲ್ಲ ವ್ಯಕ್ತಿ ಸೃಷ್ಟಿಸಿದ ಎಂಬುದು ಮನುಷ್ಯನ ಆಲೋಚನಾ ಚಾಲನೆಗೆ ಒಂದು ಪೂರ್ಣ ವಿರಾಮ ತಂದ ಪರಿಕಲ್ಪನೆ. ಈ ಪರಿಕಲ್ಪನೆಯಿಂದ ಜಗತ್ತು ಸೃಷ್ಟಿಯಾಗಲಿಲ್ಲ. ಅದರ ಬದಲಿ ಸ್ವರ್ಗ–ನರಕಗಳು ಕಲ್ಪಿತಗೊಂಡವು; ಅಲ್ಲಿ ವಾಸ ಮಾಡುತ್ತಿರುವ ಮಾನವರಿಗಿಂತ ಭಿನ್ನವಾದ ಶಕ್ತಿಯುಳ್ಳ ದೇವತೆಗಳು ಸೃಷ್ಟಿಯಾದರು. ಅವರು ಕಲ್ಪಿತ ಅತೀತ ಶಕ್ತಿಯುಳ್ಳವರಾದುದರಿಂದ ಮಾನವರು ಅವರ ಅಧೀನರೆಂದು ತಮಗೆ ತಾವೇ ರೂಪಿಸಿಕೊಂಡರು. ತಾವೇ ನೆಯ್ದ ಬಲೆಯಲ್ಲಿ ತಾವೇ ಬಂಧಿಗಳಾಗಿ, ಅದರಲ್ಲೇ ಒಂದು ಬಗೆಯ ಆನಂದ ಕಂಡುಕೊಂಡರು.

ಈ ಆನಂದವನ್ನು ಮುಂದೆ ಭಕ್ತಿರಸವೆಂದು ಕರೆದು ಮೀಮಾಂಸೆ ಹೆಣೆಯಲಾಯಿತು. ಈ ಭಕ್ತಿಯೆಂಬುದು ಸಂಪೂರ್ಣವಾಗಿ ವ್ಯಕ್ತಿಯಲ್ಲಿರುವ ಶೋಧ ಬುದ್ಧಿಯನ್ನು, ಅನ್ವೇಷಕ ಪ್ರವೃತ್ತಿಯನ್ನು ನಾಶಮಾಡಿ ಕೇವಲ ನಂಬಿಕೆಯ ಮೇಲೆ ನಿಲ್ಲುವಂಥದ್ದು. ಈ ನಂಬಿಕೆಯೇ ಸಮಸ್ತ ಆಸ್ತಿಕ ಸಿದ್ಧಾಂತದ ನೆಲೆಯಾಗಿ ನಿಂತು ಆಳತೊಡಗಿತು. ಈ ಆಸ್ತಿಕ ಸಿದ್ಧಾಂತದ ತಳಹದಿಯ

ಮೇಲೆ ಪುರಾಣಗಳು, ಪವಾಡಗಳು ಸೃಷ್ಟಿಯಾಗಿ ದೈವೀಕಲ್ಪನೆ ಮತ್ತಷ್ಟು ಗಟ್ಟಿಯಾಯಿತು. ಈ ಪುರಾಣಗಳ ಆಧಾರದ ಮೇಲೆ ಪ್ರತಿಯೊಂದು ಧಾರ್ಮಿಕ ಸಂಪ್ರದಾಯದ ಜನ ಕಾವ್ಯ-ಕಲೆಗಳನ್ನು ಸೃಷ್ಟಿಸಿದರು. ತಮ್ಮ ದೇವರು ಅಥವಾ ದೇವಮಾನವರು ಇತರೆ ಧಾರ್ಮಿಕ ಸಂಪ್ರದಾಯದ ದೇವರು- ದೇವಮಾನವರಿಗಿಂತ ಶ್ರೇಷ್ಠರೆಂದು ವಾದಿಸಿದರು. ಆ ಮೂಲಕ ಮಾನವಮಾನವರಲ್ಲಿ ಅಭಿಪ್ರಾಯಭೇದಗಳು ಉಂಟಾದವು. ಈ ಭಿನ್ನ ನಂಬಿಕೆ ಮತ್ತು ವಾದಗಳೇ ಮತ್ತಷ್ಟು ಗಟ್ಟಿಯಾಗಿ ಕನಿಷ್ಠ- ಶ್ರೇಷ್ಠ ಎಂಬ ಅಸಮಾನತೆಯನ್ನುಂಟು ಮಾಡಿದವು. ಜಗತ್ತು ಮಾನವರಿಂದ- ಕೇವಲ ಮಾನವರಿಂದ ಕೂಡಿತ್ತು. ಇಂಥ ಕೇವಲ ಮಾನವರಿಂದ ಕೂಡಿದ್ದ ಜಗತ್ತು, ಈ ಧಾರ್ಮಿಕ ಭಿನ್ನ ನಂಬಿಕೆಗಳ ಕಾರಣದಿಂದಾಗಿ ಇಂದು ಜಗತ್ತು ಒಡೆದು ಅನೇಕ ಪಂಗಡಗಳಾಗಿ ಚದರಿಹೋಗಿದೆ. ಮಾನವೀಯ ನೆಲೆಯಲ್ಲೇ ಹರಿದಾಡುತ್ತಿದ್ದ ಮನಸ್ಸುಗಳು ಭಿನ್ನ ಧಾರ್ಮಿಕ ನೆಲೆಯಲ್ಲಿ ಬದುಕತೊಡಗಿ, ಶ್ರೇಷ್ಠತೆಯ ಅಹಂಕಾರದಲ್ಲಿ ತೇಲಿ ಮುಳುಗುತ್ತಿವೆ. ತಮ್ಮ ಧಾರ್ಮಿಕ ಸಾಮ್ರಾಜ್ಯವನ್ನು ಎಲ್ಲೆಡೆ ವಿಸ್ತರಿಸಬೇಕೆಂಬ ಭ್ರಮಾಧೀನ ನೆಲೆಯಲ್ಲಿ ಇಂದು ಧಾರ್ಮಿಕ ಮೂಲಭೂತವಾದ ವಿಜೃಂಭಿಸುತ್ತಿದೆ.

ಈ ಅನಾಹುತಕ್ಕೆಲ್ಲ ಕಾರಣವಾದದ್ದು- ಈ ಸೃಷ್ಟಿಯ ಸಮಸ್ತಕ್ಕೆಲ್ಲಕ್ಕೂ ಕಾರಣನಾದ ಕರ್ತನೊಬ್ಬನಿದ್ದಾನೆ ಎಂಬ ನಂಬಿಕೆಯೇ! ಸೃಷ್ಟಿ ತಮಗೆ ತಾನು ಇದೆ; ಅದು ಯಾರೊಬ್ಬರ ಪ್ರೇರಣೆಯಿಂದ ಚಲಿಸುತ್ತಿಲ್ಲ; ವಿಕಾಸಗೊಳ್ಳುತ್ತಿಲ್ಲ. ಪ್ರತಿಯೊಂದು ಸೃಷ್ಟಿ ವಿಚಿತ್ರಕ್ಕೂ ಅದರದೇ ಆದ ಅಂತರ್‌ಚೇತನವಿದೆ. ಅದು ಬೇರೆ ಯಾರೋ ನೀಡಿದ ದೇಣಿಗೆಯಲ್ಲ. ಅದು ಅದರ ವ್ಯಕ್ತಿ ವಿಶಿಷ್ಟ ಗುಣ. ಅದರ ನೆಲೆಯ ಮೇಲೆ ಇತರ ಸೃಷ್ಟಿ ಚೇತನದ ವಿಕಾಸಕ್ಕೆ ಅಡ್ಡಿ ಬರದಂತೆ ಬಾಳಿ ಬದುಕುತ್ತದೆ. ಆ ಮೂಲಕ ಹೊಸತನ್ನು ಕಾಣುತ್ತಾ, ರೂಪಾಂತರಗೊಳ್ಳುತ್ತಾ, ಅರಳುತ್ತಾ ಸಾಗುತ್ತದೆ. ಇದೊಂದು ಸರಳ ಸತ್ಯ. ಅದರಲ್ಲಿ ಚಿಂತನೆಗೆ ಅವಕಾಶವಿದೆ. ಕುತೂಹಲಕ್ಕೆ ಅವಕಾಶವಿದೆ. ತನ್ಮೂಲಕ ಬೆಳಕಿನ ಅವಗಾಹನೆಗೆ ಅವಕಾಶವಿದೆ. ಸೃಷ್ಟಿಯ ನಾಗರಿಕತೆ ಬೆಳೆದು ಬಂದಿರುವುದೇ ಹೀಗೆ!

ಒಂದು ಸತ್ಯವನ್ನು ನಾವು ಅರ್ಥ ಮಾಡಿಕೊಳ್ಳಬೇಕು; ಕರ್ತನ ಪರಿಕಲ್ಪನೆ ಸೃಷ್ಟಿಯ ನಡೆಯನ್ನು ಅಲುಗಾಡಿಸಿಲ್ಲ- ಎಂಬುದನ್ನು.

೦೭-೦೭-೨೦೧೧

# ಮಾನವ ಮೂಳೆ ಮಾಂಸದ ತಡಿಕೆ!

ಭಾರತೀಯರಿಗೆ ಪುನರ್ಜನ್ಮದ ಬಗ್ಗೆ ಅಪಾರವಾದ ನಂಬಿಕೆ ಇದೆ. ಈ ನಂಬಿಕೆಯೆ ಅವರಲ್ಲಿ ಆತ್ಮ 'ಶಾಶ್ವತ'ವೆಂದೂ, ದೇಹ 'ನಶ್ವರ'ವೆಂದೂ ಶ್ರದ್ಧೆ ಮೂಡಿಸಲು ಕಾರಣವಾಗಿದೆ. ಹಾಗೆ ನೋಡಿದರೆ, ಈ ಪುನರ್ಜನ್ಮದ ಪರಿಕಲ್ಪನೆ ಕೇವಲ ಭಾರತೀಯ ಸಿದ್ಧಾಂತಗಳಿಗೆ ಅಂಟಿದ ನಂಬಿಕೆಯಲ್ಲ, ಜಗತ್ತಿನ ಎಲ್ಲ ಪ್ರಮುಖ ಧರ್ಮಗಳಲ್ಲೂ ಇದೊಂದು ಕಾಡುವ ಪರಿಕಲ್ಪನೆಯಾಗಿ ಬೆಳೆದು ಬಂದಿದೆ. 'ಆತ್ಮದ' ನಂಬಿಕೆಯಿಂದಾಗಿಯೇ 'ಬದುಕಿನಾಚೆಯ ಬದುಕಿನ' ಪ್ರಪಂಚವೊಂದು ಎಲ್ಲ ಮತಧರ್ಮಗಳಲ್ಲೂ ಸೃಷ್ಟಿಯಾಗಿದೆ. ಆ ಬದುಕಿನಾಚೆಯ ಬದುಕನ್ನು ಸ್ವರ್ಗವೆಂದೂ ನರಕವೆಂದೂ ಕರೆದು, ದೇವತೆಗಳನ್ನು ರಾಕ್ಷಸರನ್ನು ಸೃಷ್ಟಿಮಾಡಿ ಕಲ್ಪನಾಸಾಹಿತ್ಯ ರಚನೆ ಮಾಡಲಾಗಿದೆ. ಆದಿವಾಸಿಗಳಿಂದ ಹಿಡಿದು ಆಧುನಿಕ ಮತಧರ್ಮಗಳ ಅನುಯಾಯಿಗಳವರೆಗೆ ಈ ಕಲ್ಪನಾಸಾಹಿತ್ಯ ವೈವಿಧ್ಯಮಯವಾಗಿ ಅಭಿವ್ಯಕ್ತಿ ಪಡೆದಿದೆ. ಮತ ಧರ್ಮಗಳ ಸಿದ್ಧಾಂತಗಳಿಗನುಗುಣವಾಗಿ ಪಾಪ ಮಾಡಿದ ಆತ್ಮ ಅಂತರ್‌ಪಿಶಾಚಿಯಾಗಿ ತೊಳಲಾಡುವ-ಅನೇಕ ಜನ್ಮಗಳಲ್ಲಿ ಅನೇಕ ಯೋನಿಗಳ ಮೂಲಕ ಹಾದು ಬಂದು ಪುಣ್ಯ ಸಂಪಾದಿಸಬೇಕಾದ ಅನಿವಾರ್ಯತೆಗೆ ಸಿಲುಕುತ್ತದೆ. ಪಾಪದ ಸಂಚಯ ಖಾಲಿಯಾಗಿ ಪುಣ್ಯದ ಬಾಗಿಲು ತೆರೆದಾಗ ಸ್ವರ್ಗ ಪ್ರಾಪ್ತಿಯಾಗುತ್ತದೆ. ಅಲ್ಲಿಯವರೆಗೆ ಆತ್ಮ ನಿರಂತರವಾಗಿ ಅನೇಕ ದೇಹವೆಂಬ ಮಾಂಸದ ತಡಿಕೆಯನ್ನು ತೊಡುತ್ತಲೇ ಇರಬೇಕಾಗುತ್ತದೆ. ಈ ಕಾರಣದಿಂದ ಈ ದೇಹ ಪದೆ ಪದೆ ಧರಿಸಿ, ಕೊಳೆಯಾದರೆ ತೆಗೆದುಹಾಕುವ ಅಥವಾ ಹರಿದು ಹೋದರೆ ಬಿಸುಟು ಹೊಸತಾಗುವ ಬಟ್ಟೆಯ ಪ್ರತೀಕವಾಗಿಬಿಟ್ಟಿತು!

ತತ್ತ್ವ ಮೀಮಾಂಸೆಯಲ್ಲಿ ಯಾವಾಗಲೂ ಶಾಶ್ವತವಾಗಿರುವುದಕ್ಕೆ ಹೆಚ್ಚು ಬೆಲೆ, ಆತ್ಮ ಶಾಶ್ವತವಾದುದು, ಮುಪ್ಪು - ಸಾವಿಲ್ಲದ್ದು, ಅಂತಿಮದಲ್ಲಿ ಅದು ಭಗವಂತನಲ್ಲಿ ಐಕ್ಯವಾಗಿ ನೆಲೆಸುವಂಥದ್ದು/ ಸಾನ್ನಿಧ್ಯದಲ್ಲಿರುವಂಥದ್ದು. ಆದರೆ ದೇಹಕ್ಕೆ ಆ ಭಾಗ್ಯವಿಲ್ಲ! ಅದು ಜನ್ಮ ಜನ್ಮದಲ್ಲಿ ಹುಟ್ಟಿ ನಾಶವಾಗುವಂಥದು! ರೋಗ ರುಜಿನಗಳಿಂದ ನರಳುವಂಥದ್ದು. ವಯಸ್ಸಾಗಿ ಮಣ್ಣಲ್ಲಿ ಮಣ್ಣಾಗುವಂಥದ್ದು. ಆದ್ದರಿಂದ ಅದಕ್ಕೆ ಅಂಥ ಬೆಲೆಯಿಲ್ಲ. ಅದು ನಿಕೃಷ್ಟವಾದುದು. 'ಮೂಳೆ ಮಾಂಸದ ತಡಿಕೆ. ತಡಿಕೆಯ ಮೇಲೆ ತೊಗಲಿನ ಹೊದಿಕೆಯನ್ನು ಹಾಕಿಕೊಂಡಿದೆ'! ಧರಿಸಿ ಬಿಸಾಡುವಂಥ ಈ ದೇಹಕ್ಕೇಕೆ ಬೆಲೆ ಕೊಡಬೇಕೆಂಬುದು ನಮ್ಮ ಧಾರ್ಮಿಕ ತಿಳಿವಳಿಕೆಯ ನಿಲುವು.

ಇದೊಂದು ವಿಚಿತ್ರ ಸತ್ಯ. ಇರುವುದನ್ನು ತುಚ್ಛೀಕರಿಸಿ ಇರದದುರ ಕಡೆ ತುಡಿಯುವ

ಕ್ರಿಯೆ. ಗೋಪಾಲಕೃಷ್ಣ ಅಡಿಗರ ಮೋಹನ ಮುರಳಿಯ ಕರೆಯು ಇದನ್ನೇ ಧ್ವನಿಸುವುದು. ಅವರ ಕಾವ್ಯದ ಆಶಯವನ್ನು ಭಾರತೀಯ ತತ್ತ್ವಸಿದ್ಧಾಂತಗಳ ಹಿನ್ನೆಲೆಯಲ್ಲಿ ಪರಿಭಾವಿಸಿದಾಗ, ಅವರ ಮತಧರ್ಮಗಳ ಬದ್ಧತೆ ಸ್ಪಷ್ಟವಾಗುತ್ತದೆ. ಬದುಕಿನಲ್ಲಿ ಸಿಗುವುದು, ಸಿಗುತ್ತಿರುವುದು ನಮಗೆ ಅಗಣ್ಯವಾಗುತ್ತದೆ. ಅದರ ಅನುಭವ ನಮಗೆ ಮತ್ತೊಂದು ನಿಗೂಢವನ್ನು ಅರಸುವ ಕ್ರಿಯೆಗೆ ಪ್ರಚೋದಿಸುತ್ತದೆ. ಈ ನಿಗೂಢ ಪ್ರಕೃತಿಯೇ ಆಗಬೇಕಾಗಿರುವುದು ಮತ್ತು ಅದರ ಅನಂತ ಗುಹ್ಯಗಳನ್ನು ಶೋಧಿಸುವುದರತ್ತ ನಮ್ಮನ್ನು ಕರೆದೊಯ್ಯಬೇಕು. ಅದರೆ ದುರಂತವೆಂದರೆ- ಈ ನಿಗೂಢವನ್ನು ಕಾಲ್ಪನಿಕ ಜಗತ್ತಿನ ತಿಳಿವಳಿಕೆಯ ಅರಿವೆಂದು ಭಾವಿಸಿದ್ದು; ಅದು ಆತ್ಮ- ಪರಮಾತ್ಮ ಸ್ವರ್ಗ- ನರಕ, ದೇವರು- ರಾಕ್ಷಸರ ಕಲ್ಪನೆಗಳಲ್ಲಿ ಬೆರೆತು ಹೋದದ್ದು ವಾಸ್ತವ ಸತ್ಯವಾದ, ಈ ಜಗತ್ತಿನ ಎಲ್ಲ ಅರಿವನ್ನು ಗ್ರಹಿಸಿ ಅಭಿವ್ಯಕ್ತಿಸುವ ದೇಹವನ್ನು, ಪ್ರಕೃತಿಯ ಸಹಜ ಚೆಲುವನ್ನು ನೋಡಿ ರಸಾನಂದವನ್ನು ಅನುಭವಿಸುವ ದೇಹವನ್ನು, ಬದುಕಿಗೊಂದು ಅಸ್ತಿತ್ವವನ್ನು ಆಸಕ್ತಿಯನ್ನು ಚಿಗುರಿಸುವ ದೇಹವನ್ನು ನಶ್ವರವೆಂದೂ ಹೀನವೆಂದೂ ಪರಿಭಾವಿಸುವುದು ಉಚಿತವಲ್ಲ.

ದೇಹವಿಲ್ಲದೆ ಆತ್ಮವಿಲ್ಲ. ಆತ್ಮಕ್ಕೆ ಅದರದೇ ಆದ ವ್ಯಕ್ತಿತ್ವವೂ ಇಲ್ಲ, ರೂಪವೂ ಇಲ್ಲ. ಅದಕ್ಕೊಂದು ವಿಶೇಷ ಲಭ್ಯವಾಗಿರುವುದೇ ದೇಹದಿಂದ. 'ಆತ್ಮ'ವೆಂದು ಕರೆದಿರುವುದು ಯಾವುದನ್ನು? ಅದು ದೇಹದ ಯಾವ ಅಂಗಾಂಶದ ಅನುಭವವಿಶೇಷ? ಅದು ಉಸಿರೇ? ಮನಸ್ಸೇ? ಬುದ್ಧಿಯೇ? ನಮ್ಮ ಬುದ್ಧಿ ಭಾವಗಳು ದೇಹದ ಅವಿಭಾಜ್ಯ ಅಂಗ. ಆ ಮೂಲಕ ಸಕಲ ಸರ್ವಸ್ವವೂ ಅನುಭವಗೊಳ್ಳುತ್ತವೆ. ಉಸಿರು ಜೈವಿಕ ವೈಜ್ಞಾನಿಕ ಸತ್ಯ. ಅದು ಜೀವ- ದೇಹ ಬದುಕಿರುವವರೆಗೂ ಸಂಗಾತಿಯಾಗಿದ್ದು, ಅನಂತರ ಪ್ರಕೃತಿಯ ಸಹಜ ಸತ್ಯವಾದ ಗಾಳಿಯಲ್ಲಿ ಒಂದಾಗುತ್ತದೆ. ಆ ಉಸಿರನ್ನು ಆತ್ಮವೆಂದು ಕರೆದು, ಅದು ಸ್ವರ್ಗ ನರಕ ಪಾತಾಳಗಳಲ್ಲಿ ತನ್ನ ಪಾಪ ಕಳೆದುಕೊಂಡು ಮುಕ್ತವಾಗುವವರೆಗೆ ಸಂಚರಿಸುತ್ತಿರುತ್ತದೆ ಎಂಬ ಕಲ್ಪನೆಯೇ ಅವೈಚಾರಿಕವಾದುದು.

ಸಕಲ ಪ್ರಾಣಿಗಳಂತೆಯೇ ಮನುಷ್ಯ ಜೀವವೂ ಒಂದು. ಅದು ಅತ್ಯಂತ ಸುಂದರವೆಂದು ಭಾವಿಸುವುದೇ ಸಂತೋಷ ತರುತ್ತದೆ.

೨೧-೦೭-೨೦೧೧

# ನನ್ನಾಣೆ, ನಿಮ್ಮಾಣೆ, ದೇವರಾಣೆ

ವ್ಯಕ್ತಿ ಅಥವಾ ವಸ್ತು ಅಥವಾ ದೇವರ ಹೆಸರಲ್ಲಿ ಮಾಡುವ ಪ್ರಮಾಣಕ್ಕೆ 'ಆಣೆ' ಎನ್ನುತ್ತಾರೆ. ಜಗತ್ತಿನ ಎಲ್ಲ ಭಾಗಗಳಲ್ಲಿರುವ ಸಮುದಾಯಗಳಲ್ಲಿ- ಎಲ್ಲ ಕಾಲಗಳಲ್ಲೂ- ಅಕ್ಷರಸ್ಥ-ಅನಕ್ಷರಸ್ಥ ಎಂಬ ಭೇದಭಾವಗಳಿಲ್ಲದೆ ಈ ಆಣೆ ಮಾಡುವ ಪದ್ಧತಿ ಜಾರಿಯಲ್ಲಿದೆ. ಈ 'ಆಣೆ' ಮಾಡುವ ಪದ್ಧತಿಗೆ ವೈಜ್ಞಾನಿಕವಾದ ತಳಹದಿ ಇಲ್ಲ. ಅದರ ಹಿಂದೆ ಸಕಾರಣವಾಗಿ ವ್ಯಾಖ್ಯಾನ ಮಾಡುವ ಒಂದು ತಾತ್ವಿಕತೆಯಿಲ್ಲ. ಅದೊಂದು ನಂಬಿಕೆಯ ಮೇಲೆ ನಿಂತಿರುವ ಪದ್ಧತಿ. ಇಬ್ಬರು ವ್ಯಕ್ತಿಗಳ ನಡುವಿನ ನಂಬಿಕೆ ಅಪನಂಬಿಕೆಗಳ ಪ್ರಶ್ನೆಯು ಇಲ್ಲಿ ಪ್ರಧಾನವಾಗಿರುತ್ತದೆ. ಸಾರ್ವಜನಿಕವಾಗಿ ತಾವು ಪ್ರಾಮಾಣಿಕರೆಂದು ಸಾಬೀತು ಮಾಡಲೆತ್ನಿಸುವ ಅಭಿವ್ಯಕ್ತಿ ರೂಪವಿದು. ಈ ಪ್ರಾಮಾಣೀಕರಣಕ್ಕೆ ಯಾವುದೇ ಸಾಕ್ಷಿ ಪುರಾವೆಗಳು ಬೇಕಿಲ್ಲ. ಸಾಕ್ಷಿ ರೂಪವಾಗಿ ತಮಗೆ ಪ್ರಿಯವಾದ ವ್ಯಕ್ತಿಯನ್ನೋ ಅಥವಾ ಭಯಂಕರ ಶಕ್ತಿ ಹೊಂದಿದೆಯೆಂದು ಭಾವಿಸಲಾದ ದೇವರು/ದೆವ್ವಗಳ ಮೇಲೆ ಪ್ರಮಾಣ ಮಾಡಬೇಕಾಗುತ್ತದೆ. ಸುಳ್ಳು ಪ್ರಮಾಣ ಮಾಡಿದರೆ 'ಪ್ರಿಯ ವ್ಯಕ್ತಿ'ಗೆ ಕೆಡುಕಾಗುತ್ತದೆ ಅಥವಾ ಆ ದೇವರು/ದೆವ್ವ ಸುಳ್ಳು ಪ್ರಮಾಣ ಮಾಡಿದ ವ್ಯಕ್ತಿಯನ್ನು ತೊಂದರೆಗೀಡು ಮಾಡುತ್ತದೆ ಎಂಬ ಅಚಲವಾದ ನಂಬಿಕೆ ಈ ಎಲ್ಲ ಆಣೆ ಪ್ರಮಾಣಗಳ ಹಿಂದೆ ಕೆಲಸ ಮಾಡಿರುತ್ತದೆ.

ಇಂಗ್ಲಿಷ್‌ನಲ್ಲಿ 'ಆಣೆ'ಯನ್ನು Swear ಎಂಬ ಪದದಿಂದ ಕರೆಯಲಾಗುತ್ತದೆ. ಅಲ್ಲಿ ಕನ್ನಡದ ಅರ್ಥವೇ ಇದ್ದರೂ, ಅಲ್ಲಿ ಇನ್ನೂ ವಿಸ್ತಾರವಾದ ಅರ್ಥರೂಪಗಳಿವೆ. ಶ್ರದ್ಧೆ, ಶಪಥ, ಹಠ ಸಾಧಿಸು ಮುಂತಾದ ಅರ್ಥಗಳನ್ನು ಹೊರ ಹೊಮ್ಮಿಸಲಾಗುತ್ತದೆ. ಒಂದು ವಸ್ತು ಅಥವಾ ವ್ಯಕ್ತಿ ಅಥವಾ ಸಿದ್ಧಾಂತದ ಬಗ್ಗೆ ವ್ಯಕ್ತಿಯೊಬ್ಬ ತನ್ನ ವಿಶ್ವಾಸ ಮತ್ತು ಶ್ರದ್ಧೆಯನ್ನು ಖಚಿತಪಡಿಸುವಿಕೆಯೂ ಆಗುತ್ತದೆ. ಕೆಲವೇಳೆ ಒಂದು ವಿಷಯವನ್ನು ಬಲವಾಗಿ ಸಮರ್ಥಿಸುವಲ್ಲಿಯೂ ಈ ಪದ ಬಳಕೆಯಾಗುವುದುಂಟು. ಮತ್ತೆ ಕೆಲ ಸಂದರ್ಭಗಳಲ್ಲಿ ಈ ಪದವು ಅಪಶಬ್ದವಾಗಿ ಬಯ್ಗುಳದ ರೂಪದಲ್ಲಿಯೂ ಅಭಿವ್ಯಕ್ತವಾಗುವುದುಂಟು.

ಆಣೆ ಪ್ರಧಾನವಾಗಿ ಇಬ್ಬರು ವ್ಯಕ್ತಿಗಳ ಅಂತಃಸಾಕ್ಷಿಯ ಮೇಲೆ ನಿಂತಿರುತ್ತದೆ. ನಮ್ಮ ಪುರಾಣಗಳಲ್ಲಿ ಈ ಪ್ರಮಾಣಕ್ಕೆ 'ಅಗ್ನಿ'ಯನ್ನು ಬಳಸಿಕೊಂಡಿರುವುದುಂಟು. ನಮ್ಮ ಅನೇಕ ಜಾನಪದ ಕ್ರಿಯೆಗಳಲ್ಲಿ ಈ ಅಗ್ನಿಸಾಕ್ಷಿಯ ಪ್ರಸ್ತಾಪ ಬರುತ್ತದೆ. ಶೀಲ-ಪತಿವ್ರತತನದ ಪರೀಕ್ಷೆಯು ಅಗ್ನಿಯ ಮೂಲಕವಾಗುವುದನ್ನು ನಮ್ಮ ಸೀತಾಮಾತೆಯ ಪ್ರಸಂಗದಲ್ಲಿ ನಾವು ಬಲ್ಲೆವು. ಈ ಪ್ರಸಂಗದಲ್ಲಿಯ ಸತ್ಯವೇನೆಂಬುದು ಓದುಗರಿಗೆ ಮೊದಲೇ ವೇದ್ಯ. ಲೋಕ

ಬಯಸುತ್ತದೆಯೆಂದು ಕಾರಣ ನೀಡಿ ಸೀತಾಮಾತೆಯನ್ನು ಅಗ್ನಿಪ್ರವೇಶ ಮಾಡಿಸುವ ರಾಮಚಂದ್ರ ಕ್ರೂರಿಯಾಗಿ ಕಾಣುತ್ತಾನೆ. ಇಲ್ಲಿ ಸಾಮಾಜಿಕದ ಹೆಸರಲ್ಲಿ ವ್ಯಕ್ತಿಗತ ಹಕ್ಕನ್ನು ಶ್ರೀರಾಮ ದಮನ ಮಾಡುತ್ತಾನೆ. ಅಂದರೆ ಈ ಪ್ರಮಾಣವೆಂಬುದು ಸುಳ್ಳನ್ನು ಸತ್ಯದ ಹೆಸರಿನಲ್ಲಿ ಸಾಮಾಜೀಕರಣಗೊಳಿಸಿ ಭಯವನ್ನುಂಟು ಮಾಡುವುದು ಎಂದಾಯಿತು. ಅನೇಕ ಸಂದರ್ಭಗಳಲ್ಲಿ ಸಾಮಾಜಿಕ ಕ್ರೌರ್ಯಕ್ಕೆ ಹೆದರಿ ಬೆಂಕಿ ಮುಟ್ಟಿ ಪ್ರಮಾಣ ಮಾಡುವ ಅನಿವಾರ್ಯ ಸಂದರ್ಭಗಳು ಸೃಷ್ಟಿಯಾಗಿರುವ ಸಾಧ್ಯತೆಗಳಿವೆ.

ನಮ್ಮ ಹಳೆಗನ್ನಡ ಕಾವ್ಯಗಳಲ್ಲಿ, ನ್ಯಾಯಶಾಸ್ತ್ರಗಳಲ್ಲಿ 'ದಿಬ್ಬ'ವೆಂಬ ಪರೀಕ್ಷೆಯ ಉಲ್ಲೇಖವಿದೆ. ಇದೇ ಅಂಶವೊಂದನ್ನು ಇಟ್ಟುಕೊಂಡು ನಾಗಮಂಡಲದಲ್ಲಿ ಪ್ರಸಂಗವೊಂದರ ಸೃಷ್ಟಿಯಾಗಿದೆ. ತಾನು ಪತಿವ್ರತೆಯೆಂಬುದನ್ನು ಅಥವಾ ತಾನು ಪ್ರಾಮಾಣಿಕ ಅಥವಾ ಸುಳ್ಳುಗಾರ, ಕಳ್ಳನಲ್ಲವೆಂಬುದನ್ನು ಕಾದ ಕಬ್ಬಿಣದ ಸಲಾಖೆಯನ್ನು ಕೈಯಲ್ಲಿ ಹಿಡಿದು, ಸಾರ್ವಜನಿಕವಾಗಿ ತನ್ನನ್ನು ತಾನು ಸತ್ಯವಂತನೆಂದು ಸಾಬೀತುಪಡಿಸಿಕೊಳ್ಳುವುದು. ಅವನು(ಳು) ಸತ್ಯಸಂಧ(ಳಾ)ನಾದರೆ ಆ ಕಾದ ಸಲಾಖೆ ಸುಡುವುದಿಲ್ಲ. ಇಲ್ಲದಿದ್ದಲ್ಲಿ ಅದು ಸುಡುತ್ತದೆ. ಒಂದು ಕ್ಷಣ ಈ ಕ್ರೌರ್ಯವನ್ನು ಪರಿಭಾವಿಸಿದರೆ ದಿಗಿಲಾಗುತ್ತದೆ. ಕಾದ ಕಬ್ಬಿಣದ ಸಲಾಖೆಯನ್ನು ಹಿಡಿದರೆ ಸತ್ಯವಂತರನ್ನೂ ಸುಡುತ್ತದೆ. ಅಸತ್ಯವಂತರನ್ನೂ ಸುಡುತ್ತದೆ, ಬೆಂಕಿಗೆ ಸುಡುವುದೇ ಗುಣ. ಹೀಗಾಗಿ ಅನೇಕ ದೋಷಾರೋಪಿತರು, ಮುಗ್ಧರು ತಮ್ಮ ಕೈಸುಟ್ಟುಕೊಂಡು ವೃಥಾ ಆರೋಪಿಗಳೆಂಬ ಪಟ್ಟ ಕಟ್ಟಿಕೊಂಡು ಶಿಕ್ಷೆ ಅನುಭವಿಸಿದ್ದಾರೆ. ಬೆಂಕಿ ಸತ್ಯವಂತರನ್ನು ಏನೂ ಮಾಡದೆಂಬುದಕ್ಕೆ ನಮ್ಮ ಸೀತಾಮಾತೆಯ ಕಥೆಯಂತು ಇದ್ದೇ ಇದೆ. ಇದರ ಆಧಾರದ ಮೇಲೆ ನೂರಾರು ಜನಪದ ಕಥೆಗಳು ಸೃಷ್ಟಿಯಾಗಿವೆ. ಈ ಎಲ್ಲವೂ ಕ್ರೌರ್ಯವನ್ನು ಸತ್ಯದ ಹೆಸರಲ್ಲಿ ವಿಜೃಂಭಿಸಿವೆ.

ಇಂದಿನ ವರ್ತಮಾನದ ನಮ್ಮ ಬದುಕಿನಲ್ಲಿ ಆಣೆ ಪ್ರಮಾಣಗಳಿಗೆ ಎಂಥ ಮೌಲ್ಯವೂ ಉಳಿದಿಲ್ಲ. ಅದು ಒಂದು ಮಕ್ಕಳಾಟಿಕೆಯ ಪದ ಪ್ರಯೋಗದ ಮಟ್ಟಕ್ಕಿಳಿದಿದೆ. ನೈತಿಕತೆಯ ಅಧಃಪತನವಾಗಿರುವ ಈ ಕಾಲಘಟ್ಟದಲ್ಲಿ 'ನಾಲಗೆ' ಬಗ್ಗೆ ಯಾರಿಗೂ ಗೌರವವಿಲ್ಲ. ಇದ್ದರೂ ಅಂಥವರು ಅಪರೂಪವಾಗುತ್ತಿದ್ದಾರೆ; ವರ್ತಮಾನದ ಬದುಕಿಗೆ ಅಪವಾದವಾಗುತ್ತಿದ್ದಾರೆ. ಇಂದು ಆಣೆ ಮಾಡುವವನಿಗೂ ಗೊತ್ತು - ಆಣೆ ಮಾಡಿಸುತ್ತಿರುವವನಿಗೂ ಗೊತ್ತು; ಇದರಿಂದೇನೂ ಅಡ್ಡ ಪರಿಣಾಮವಾಗುವುದಿಲ್ಲವೆಂದು! ಆದುದರಿಂದ 'ಆಣೆ' ಎಂಬ ಮಾತನ್ನು ಧಾರಾಳವಾಗಿ ಬಳಸುತ್ತಾರೆ.

೦೪-೦೮-೨೦೧೧

## ಹೆತ್ತವರಿಗೆ...

'ಹೆತ್ತವರಿಗೆ ಹೆಗ್ಗಣ ಮುದ್ದು...' ಎಂಬ ಜನಪ್ರಿಯ ಮಾತು ನಮ್ಮಲ್ಲಿದೆ. ಇಂದಿನ ಯುವಕರು ನಾಳಿನ ನಮ್ಮ ನಾಡಿನ ನಿರ್ಮಾಪಕರು ಎಂಬ ಮಾತು, ಅವರು ಗಿಡವಾಗಿ ಮರವಾಗಿ ಬೆಳೆಯುವ ಹಂತದಲ್ಲಿ ಯಾವ ಬಗೆಯಲ್ಲಿ ಗಟ್ಟಿಯಾಗಬೇಕು ಎಂಬುದನ್ನು ಧ್ವನಿಸುತ್ತದೆ. ಅವರನ್ನು ಗಟ್ಟಿಗೊಳಿಸುವ ಕ್ರಿಯೆಯಲ್ಲಿ ಹೆತ್ತವರ ಪಾತ್ರ ಹಿರಿದಾದುದು. ಅವರ ಪರಿಸರ, ಗೆಳೆಯರು, ಗುರುಗಳು, ಓದು ಮುಂತಾದವು ಅವರ ಅಂತರಂಗದ ವಿಕಾಸಕ್ಕೆ ಕಾರಣವಾಗುತ್ತವೆ ಎಂಬುದು ಸತ್ಯವಾದರೂ; ಹೆತ್ತವರ ಮಾರ್ಗದರ್ಶನ, ನಡೆ ನುಡಿ ವರ್ತನೆಗಳು ಮಹತ್ತರವಾಗಿ ಪ್ರಭಾವ ಬೀರುತ್ತವೆ. ಮಕ್ಕಳ ರೂಪ, ಆಕಾರ, ಧ್ವನಿ, ದೈಹಿಕ ಚಲನೆ ಮುಂತಾದ ಜೈವಿಕ ಸ್ವರೂಪಗಳು ಮಾತ್ರವಲ್ಲದೆ ನೈತಿಕ ಪ್ರಜ್ಞೆಯನ್ನು ಜಾಗೃತಗೊಳಿಸುವಲ್ಲಿ ಹೆತ್ತವರು ಬಹು ಮುಖ್ಯ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ.

ಮಕ್ಕಳನ್ನು ಪ್ರೀತಿಸಬೇಕು ನಿಜ, ಮುದ್ದಿಸಬೇಕೆಂಬುದೂ ದಿಟ. ಆದರದು ಅತಿಯಾಗಬಾರದು. ಪ್ರೀತಿ ಬದುಕನ್ನು ಕಟ್ಟುವ ಕ್ರಿಯೆಯಾಗಬೇಕೇ ಹೊರತು ಬದುಕನ್ನು ದಾರಿ ತಪ್ಪಿಸುವ ಸಾಧನವಾಗಬಾರದು. ನಮ್ಮ ಗ್ರಾಮೀಣ ಸಮುದಾಯದಲ್ಲಿ ಮಕ್ಕಳನ್ನು ಮುದ್ದಿಸುವಾಗ ಮುದ್ದಿಸುತ್ತಿದ್ದರು, ಜೊತೆಯಲ್ಲೇ ಒಂದು ಎಚ್ಚರದ ಅಂಕೆ ಕಾವಲು ಕಾಯುತ್ತಿತ್ತು. ನಮ್ಮ ನಗರ ಜೀವನದ ಮಧ್ಯಮವರ್ಗದ ಹಿರಿಯರು 'ಮಕ್ಕಳ ಮೇಲಿರುವ ಪ್ರೀತಿ ಅಭಿವ್ಯಕ್ತಿ ರೂಪದಲ್ಲಿರಬಾರದು, ಅದು ಹೃದಯದಲ್ಲಿರಬೇಕು' ಎನ್ನುತ್ತಿದ್ದರು. ಈ ಎರಡೂ ಪ್ರೀತಿಯ ಸ್ವರೂಪಗಳ ಬಗ್ಗೆ ಇಂದಿನ ಮನಃಶಾಸ್ತ್ರ ಭಿನ್ನಾಭಿಪ್ರಾಯ ವ್ಯಕ್ತಪಡಿಸಬಹುದು. ಆದರೆ ಈ ಸ್ವರೂಪದ ನಮ್ಮ ಹಿರಿಯರ ನಡತೆಯಲ್ಲಿ ಲೋಕಾನುಭವದಿಂದ ರೂಪಿತವಾದ ಜೀವನ ದೃಷ್ಟಿ ಇತ್ತು ಎಂಬುದನ್ನು ಅಲ್ಲಗಳೆಯಲಾಗದು. ಅಂಕೆಯಲ್ಲಿಡುವುದು ಊಳಿಗಮಾನ್ಯ ಧೋರಣೆಯನ್ನೂ ಪ್ರೀತಿಯ ಅಭಿವ್ಯಕ್ತರಾಹಿತ್ಯವನ್ನೂ ಶೀಥಲತೆಯನ್ನೂ ಸೂಚಿಸಬಹುದು. ಆದರೆ ಮಕ್ಕಳನ್ನು ಬೆಳೆಸುವ ಕ್ರಮದಲ್ಲಿ ಒಂದು ಹದವಾದ 'ಟ್ರಿಮ್ಮಿಂಗ್' ಬೇಕು ಎಂಬುದನ್ನು ಆಧುನಿಕ ಕುಟುಂಬಗಳನ್ನು ಮತ್ತು ಅವುಗಳಿಂದ ಸೃಷ್ಟಿಯಾಗಿ ಹೊರಬರುತ್ತಿರುವ ಯುವ ಜನಾಂಗವನ್ನು ನೋಡಿದಾಗ ಅನುಭವಕ್ಕೆ ಬಾರದಿರದು.

ಹೆತ್ತವರಿಗೆ ತಮ್ಮ ಮಗು ಎಂಥ ಅತಿರೇಕದ ತುಂಟಾಟ ಮಾಡಿದರೂ ಹಿತವಾಗಿ ಕಾಣುತ್ತದೆ. ಮಕ್ಕಳಾಗಿದ್ದಾಗ ಮಾತನಾಡುವ, ವರ್ತಿಸುವ ಬಗೆಯನ್ನು ಪ್ರೀತಿಯಿಂದಲೇ ತಿದ್ದುವ ಪ್ರಯತ್ನ ಮಾಡಬೇಕು. ದೊಡ್ಡವರೊಡನೆ ಹೇಗೆ ಮಾತನಾಡಬೇಕು, ಹೊರಗಿನವರು ನಮ್ಮ ಮನೆಗೆ

ಬಂದಾಗ ಹೇಗೆ ಕೂರಬೇಕು. ಬೇರೆಯವರ ಮನೆಗೆ ಹೋದಾಗ ಹೇಗೆ ವರ್ತಿಸಬೇಕು ಎಂಬುದನ್ನು ಕಲಿಸಬೇಕು. ಕಲಿಯದಿದ್ದಲ್ಲಿ ತುಸು ಜಂಕಿಸಿ ಹೇಳಬೇಕು. ಆ ಧ್ವನಿಯಲ್ಲಿ ಸ್ವಲ್ಪ ಅಧಿಕಾರವಿರಬೇಕು; ಹಿರಿಯತನದ ಗೌರವದ ಗಡುಸುತನವಿರಬೇಕು. ಈ ಗಡಸುತನವನ್ನು ಭಯಹುಟ್ಟಿಸುವ ಕ್ರಿಯೆಯಾಗಿ ಪರಿವರ್ತಿಸಬಾರದು ಅಷ್ಟೆ. ದೇವಕಿನಂದನ ಕೃಷ್ಣನನ್ನು ಅವನ ತಾಯಿ ಯಶೋದೆ ಅತಿಯಾಗಿ ಪ್ರೀತಿಸುತ್ತಿದ್ದಳೆಂಬುದರಲ್ಲಿ ಸಂಶಯವಿಲ್ಲ. ಅವನು ಗೋಕುಲದಲ್ಲಿ ಅತಿಹೆಚ್ಚು ಎನಿಸುವ ರೀತಿಯಲ್ಲೇ ತುಂಟಾಟ ಮಾಡಿರುವುದು ದಾಸರ ಪದಗಳಲ್ಲಿ ಉಕ್ತವಾಗಿದೆ; 'ಗೀತ ಗೋವಿಂದ'ದಲ್ಲೇನು ಕಡಿಮೆಯಿಲ್ಲ, ಆದರೆ ನಮ್ಮ ಪುರಾಣಗಳು ಅವನನ್ನು ಪರಿಭಾವಿಸಿರುವ ಪರಿಯೇ ಬೇರೆ. ಅವನು ಎಲ್ಲರಂತಲ್ಲ, ಅತೀತ. ಹೀಗಾಗಿ ಅವನು ಬಾಲ್ಯವನ್ನು ಕಳೆದುಕೊಂಡ ನಂತರ ರೂಪಾಂತರ ಪ್ರಕ್ರಿಯೆಗೊಳಗಾಗಿ ಸಮಾಜಮುಖಿಯಾಗಿ ಅರಳುತ್ತಾನೆ. ಅಂಥ ಪುರಾಣಪ್ರಿಯ ಕೃಷ್ಣನನ್ನು ಕೂಡ ಅವನ ಸಾಕುತಾಯಿ ಕಟ್ಟಿಹಾಕುತ್ತಾಳೆ. ಗುಮ್ಮನ ಕರೆದು ಹೆದರಿಸುತ್ತಾಳೆ. ನಮಗೆ ಈ ನಡೆ ಮುಖ್ಯ. ಪ್ರತಿ ತಾಯಿಯೂ ಸಾಮಾಜಿಕ ಮುಖಿಗಳನ್ನಾಗಿ, ಕುಟುಂಬ ಮುಖಿಗಳನ್ನಾಗಿ ತಮ್ಮ ಮಕ್ಕಳನ್ನು ಬೆಳೆಸುವ ಜವಾಬ್ದಾರಿಯನ್ನು ಹೊರಬೇಕು.

ಒಂದು ಸುಸಂಸ್ಕೃತ ಸಮಾಜ ನಿರ್ಮಾಣವಾಗಿದೆಯೆಂದರೆ ಅಲ್ಲಿನ ಜನರು ಮಾನವೀಯ ಗುಣಗಳಿಂದ ಸನ್ನಡತೆಗಳಿಂದ ಕೂಡಿರಬೇಕು. ಅವರು ಅಹಂಕಾರಕ್ಕೆ ಹೊರತಾದ ಪ್ರೀತಿ ವಿಶ್ವಾಸ ತುಂಬಿದ ಸ್ವಾಭಿಮಾನದ ಬದುಕನ್ನು ನಡೆಸುತ್ತಿರಬೇಕು. ನೆರೆಹೊರೆಯನ್ನು ತನ್ನಂತೆ ಕಾಣುತ್ತಾ ಜೀವಪರತೆಯನ್ನು ಮೈಗೂಡಿಸಬೇಕು. ಮತಧರ್ಮಗಳು ಜೀವನ ಮಾರ್ಗದ ಈ ಬಗೆಯ ನಡೆಯ ದೃಷ್ಟಿಯನ್ನು ಮೂಡಿಸಿದರೆ ಸರಿ. ಅದರ ಬದಲು ಶ್ರೇಷ್ಠತೆಯ ಅಹಂಕಾರವನ್ನು ಮೂಡಿಸುವಂತಾದರೆ ಅವುಗಳನ್ನು ಖಂಡತುಂಡವಾಗಿ ನಿರಾಕರಿಸಬೇಕು. ಶ್ರೇಷ್ಠತೆಯೆನ್ನುವುದು ನಮ್ಮ ಬದುಕಿನ ನಡೆಯಲ್ಲಿ ವ್ಯಕ್ತವಾಗುವ ಸೌಮ್ಯ ಸ್ವರೂಪದ ಗುಣ. ಆ ಗುಣ ನಮಗೆ ಬರಬೇಕಾದರೆ ನಮ್ಮ ಬಾಲ್ಯ-ಕೌಮಾರ್ಯಗಳು ಸರಿಯಾದ ಹದದಲ್ಲಿ ಬೆಳೆದಿರಬೇಕು. ಅದಕ್ಕೆ ಹೆತ್ತವರ ಮುದ್ದು ಸರಿದಾರಿಯಲ್ಲಿರಬೇಕು.

ಇಂದಿನ ನಮ್ಮ ಯುವ ಜನಾಂಗದಲ್ಲಿ ಮರೆಯಾಗುತ್ತಿರುವ ಸನ್ನಡತೆಯ ಮೌಲ್ಯಕ್ಕೆ ನಮ್ಮ ವಿಭಕ್ತ ಕುಟುಂಬಗಳು ಕಾರಣವಾಗಿರಬಹುದೆ? ಅಜ್ಜ ಅಜ್ಜಿಯರು ದೂರದವರಾಗಿರುವುದು ಕಾರಣವಾಗಿರಬಹುದೆ?

೧೮-೦೮-೨೦೧೧

# ವ್ಯಷ್ಟಿ ಪ್ರಜ್ಞೆ- ಸಮಷ್ಟಿ ಪ್ರಜ್ಞೆ

ವ್ಯಕ್ತಿ ದೊಡ್ಡವನೋ ಸಮುದಾಯ ದೊಡ್ಡದೋ ಅಥವಾ ಆಯ್ಕೆಯ ಪ್ರಶ್ನೆ ಬಂದಾಗ ವ್ಯಕ್ತಿಯೋ ಸಮುದಾಯವೋ ಎಂಬ ಸಮಸ್ಯೆ ಎದುರಾದಾಗ ಸಮುದಾಯದ ಕಡೆ ವಾಲುವುದು ಜನಪರ- ಪ್ರಗತಿಪರ ನಿಲುವು. ಹಾಗಾದರೆ ವ್ಯಕ್ತಿ ಅಮುಖ್ಯನೇ ಎಂದು ಚಿಂತನೆ ಮಾಡಿದಾಗ 'ಅವನು ಅಮುಖ್ಯನಲ್ಲ. ಅವನೂ ಮುಖ್ಯ' ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ವ್ಯಕ್ತಿ ಸಮುದಾಯದ ಅತ್ಯಂತ ಕಿರಿಯ ಅಂಶ, ಘಟಕ. ಅಂಥ ನೂರಾರು ಘಟಕಗಳು ಕೂಡಿ ಸಮುದಾಯ ಸೃಷ್ಟಿಯಾಗಿರುತ್ತದೆ. ಅಂದರೆ ವ್ಯಕ್ತಿಯಿಲ್ಲದೆ ಸಮುದಾಯವಿಲ್ಲ. ವ್ಯಕ್ತಿ ಆ ಸಮುದಾಯದೊಳಗಿದ್ದಾನೆ. 'ಸಮುದಾಯ'ವೆಂದು ಕರೆದಾಗ ಅನೇಕ ವ್ಯಕ್ತಿಗಳಿದ್ದಾರೆ. ಆದರೆ ಒಬ್ಬ 'ವ್ಯಕ್ತಿ' ಸಮಗ್ರ ಸಮುದಾಯವಾಗಲಾರ. ಸಮುದಾಯದ ಕಲ್ಯಾಣದಲ್ಲಿ ವ್ಯಕ್ತಿಯ ಕಲ್ಯಾಣವು ಖಂಡಿತವಾಗಿಯೂ ಇರುತ್ತದೆ. ಆದರೆ ಒಬ್ಬ ವ್ಯಕ್ತಿಯ ಕಲ್ಯಾಣ ಒಂದು ಸಮುದಾಯದ ಕಲ್ಯಾಣವಾಗದಿರುವ ಸಂದರ್ಭಗಳಿರುತ್ತವೆ. ಅನೇಕ ವೇಳೆ ವ್ಯಕ್ತಿ ಸ್ವಾರ್ಥಿಯಾದಾಗ ಅವನಿಗೆ ಸಮುದಾಯ ಹಿತ ಅಗಣ್ಯವಾಗುತ್ತದೆ. ಅವನು ಲೋಭಿಯೂ ಸ್ವಹಿತ-ಸ್ವಕುಟುಂಬ ಮೋಹಿಯೂ ಆಗಿ ಸಮುದಾಯವನ್ನು ತನ್ನ ವ್ಯಕ್ತಿಗತ ಆಸೆಗಳಿಗೆ ಬಳಸಿಕೊಂಡು ಶೋಷಕನಾಗುತ್ತಾನೆ. ಅರ್ಥ ಮತ್ತು ಅಧಿಕಾರಗಳನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡು ಮುಗ್ಧವೂ ಅಸಹಾಯಕವೂ ಆಗಿಹೋದ ಸಮುದಾಯವನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು ನಿರಂಕುಶನಾಗುತ್ತಾನೆ. ಆಗಲೇ ಸರ್ವಾಧಿಕಾರಿಗಳು, ಉಗ್ರ ಧಾರ್ಮಿಕ ನಾಯಕರುಗಳು ಸೃಷ್ಟಿಯಾಗುವುದು.

ಸಮುದಾಯದಲ್ಲಿ ಸಮಷ್ಟಿಹಿತ ಪ್ರಜ್ಞೆಯನ್ನು ಜಾಗೃತಗೊಳಿಸಿ, ಅವರನ್ನು ಸರ್ವಾಧಿಕಾರ, ಭ್ರಷ್ಟತನ, ಮತ ಮೌಢ್ಯ ಮುಂತಾದ ಅನಿಷ್ಟಗಳ ವಿರುದ್ಧ ಒಗ್ಗೂಡಿ ಹೋರಾಡುವಂತೆ ಸಂಘಟಿಸುವವನು ಕೂಡ ಒಬ್ಬ ಪ್ರಜ್ಞಾವಂತ ವ್ಯಕ್ತಿಯೇ ಆಗಿರುತ್ತಾನೆಂಬುದು ಕೂಡ ವಾಸ್ತವ ಸತ್ಯ. ಯುರೋಪಿನ ಧಾರ್ಮಿಕ ಶೋಷಣೆಯನ್ನು ನಿವಾರಿಸಲು ಬೆಳಕಿನಂತೆ ಧುತ್ತನೆ ಮೂಡಿದವನು ಕ್ರಿಸ್ತ; ಭಾರತದ ವರ್ಣ ವ್ಯವಸ್ಥೆ, ಆರ್ಥಿಕ ಅಸಮಾನತೆ, ದೈವ ಪರಿಕಲ್ಪನೆಗಳ ವಿರುದ್ಧ ಹೋರಾಟ ಸಾರಿದವನು ಬುದ್ಧ; ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡಲು ಜನರನ್ನು ಸತ್ಯ ಅಹಿಂಸೆಗಳ ದಾರಿಯಲ್ಲಿ ಸಂಘಟಿಸಿದವನು ಮೋಹನದಾಸ ಕರಮಚಂದ ಗಾಂಧಿ; ಶತ ಶತಮಾನಗಳ ದಾಸ್ಯ ಅವಮಾನಗಳ ಸುಳಿಯಲ್ಲಿ ಸಿಲುಕಿ ನೊಂದು ಬೆಂದು ಬಸವಳಿದಿದ್ದ ದಲಿತರಿಗೆ ಬೆಳಕು ತೋರಿದವನು ಒಬ್ಬ ಬಾಬಾ ಸಾಹೇಬ ಅಂಬೇಡ್ಕರ್. ಇವರೆಲ್ಲಾ ವ್ಯಕ್ತಿಗಳೇ! ವ್ಯಷ್ಟಿ ಪ್ರಜ್ಞೆಯ

ಮೂಲಕ ಒಂದು ಸಮಾಜ, ದೇಶ, ಜನಾಂಗಗಳಿಗೆ ನಾನಾ ಬಗೆಯ ಸಮಸ್ಯೆಗಳಿಂದ ಮುಕ್ತವಾಗುವ ಬಗೆಯನ್ನು; ಹೋರಾಡುವ ಛಲವನ್ನು; ಸವಾಲುಗಳನ್ನು ಸ್ವೀಕರಿಸಿ ನಿಭಾಯಿಸುವ ಮನೋಧರ್ಮವನ್ನು ರೂಪಿಸಿಕೊಟ್ಟ ಅಸಾಮಾನ್ಯರು. ಅಂದರೆ ಸಾಮಾನ್ಯತೆಯ ಒಡಲೊಳಗಿನಿಂದಲೇ ಈ ಅಸಾಮಾನ್ಯ ಚಿಂತಕರು, ಮನೋ ಸಾಹಸಿಗಳು ಜನ್ಮ ತಾಳುತ್ತಾರೆ.

ಅಂದರೆ ವ್ಯಷ್ಟಿಯಿಂದ ಸಮಷ್ಟಿಯೋ? ಸಮಷ್ಟಿಯಿಂದ ವ್ಯಷ್ಟಿಯೋ? ಈ ಪ್ರಶ್ನೆ ಬೀಜ ಮರ ಸಿದ್ಧಾಂತದಂತೆ ಜಟಿಲವಾಗುತ್ತದೆ. ವ್ಯಕ್ತಿಗೆ ತನ್ನಿಂದ ತಾನೆ ಜ್ಞಾನವೆಂಬುದು ಮೂಡಲು ಸಾಧ್ಯವಿಲ್ಲ. 'ಜ್ಞಾನೋದಯ', 'ದೈವಕೃಪೆ', 'ವರ ಪ್ರಸಾದ' ಎಂಬೆಲ್ಲಾ ಮಾತುಗಳನ್ನು; ತಮ್ಮ ವ್ಯಕ್ತಿಗತ ಅಸಾಧಾರಣ ವ್ಯಷ್ಟಿ ಪ್ರಜ್ಞೆಯಿಂದ ಸಮಾಜವನ್ನು ಪರಿವರ್ತಿಸುವ, ಒಂದು ಜನಾಂಗದ ದೃಷ್ಟಿ ಧೋರಣೆಗಳನ್ನೇ ಬದಲಾಯಿಸುವ ವ್ಯಕ್ತಿಗಳನ್ನು ದೇವಮಾನವರೆಂದೋ ಅವತಾರ ಪುರುಷರೆಂದೋ ಕರೆಯುವ ಮಾತುಗಳನ್ನು ಅವೈಚಾರಿಕ ಅತಾರ್ಕಿಕವಾದವುಗಳೆಂದು ಭಾವಿಸುವುದು ಒಳ್ಳೆಯದು. ಸಮಾಜಜೀವಿಯಾದ ವ್ಯಕ್ತಿ ತನ್ನ ಬೌದ್ಧಿಕ ವಿಕಾಸಕ್ಕೆ ಅಂತರಂಗದ ಜಾಗೃತಿಗೆ ಬೇಕಾದ ಸತ್ವ ಸಂಜೀವಿನಿಯನ್ನು ತನ್ನ ಸುತ್ತಲಿನ ಪ್ರಪಂಚದಿಂದಲೇ ಪಡೆಯುತ್ತಾನೆ. ತಾನು ಉಸಿರಾಡುತ್ತಿರುವ ಸ್ಥಿತಿಯನ್ನು ಮನಗಂಡು, ಅದು ಸಮಾನತೆಯ ಮಾನವೀಯತೆಯ ನೆಲೆಯತ್ತ ಹೊರಳಬೇಕಾದರೆ ಏನೆಲ್ಲಾ ಆಗಬೇಕು ಮತ್ತು ಹಾಗೆ ಆಗುವ ಪ್ರಕ್ರಿಯೆಯಲ್ಲಿ ಸಾಗುವ ಹೋರಾಟದಲ್ಲಿ ಏನೆಲ್ಲಾ ಅವಗಡಗಳು ಸಂಭವಿಸಬಹುದು. ಆ ಅವಗಡಗಳನ್ನು ನಿವಾರಿಸಿಕೊಂಡು ಸಮಾನತೆಯ ಕಡೆ ನಡೆಯಲು ಅನುಸರಿಸಬೇಕಾದ ಜೀವನ ಮಾರ್ಗಸೂಚಿಗಳನ್ನು ಅವನು ತನ್ನೊಳಗೆ ಮೊದಲು ಕಡೆಯುತ್ತಾನೆ. ಅವುಗಳನ್ನು ಮತ್ತೆ ಮತ್ತೆ ವಿಮರ್ಶಿಸುತ್ತಾನೆ; ಸಾಧಕ ಬಾಧಕಗಳನ್ನು ವಿವೇಚಿಸುತ್ತಾನೆ. ಅವುಗಳ ಅನುಷ್ಠಾನಕ್ಕೋಸ್ಕರ ತನ್ನೊಡನೆ ಕೈ ಜೋಡಿಸುವ ಸಮಾನ ಮನಸ್ಕರನ್ನು ಗುರುತಿಸಿ, ಅವರ ಎದೆಯಲ್ಲಿ ತನ್ನ ಚಿಂತನೆಯನ್ನು ಬಿತ್ತುತ್ತಾನೆ. ಅದು ಅವರಲ್ಲಿ ಒಪ್ಪಿತವಾದರೆ, ಅದು ಮೊಳೆತು ಸಾವಿರಾರು ಧ್ವನಿಯಾಗಿ ಮೊಳಗುತ್ತದೆ ಎಂದು ಅರಿಯುತ್ತಾನೆ. ಸಾವಿರಾರು ಧ್ವನಿಗಳಲ್ಲಿ ತನ್ನ ಧ್ವನಿಯನ್ನು ಗುರುತಿಸುತ್ತಾನೆ. ಆದರೆ ಅದು ಅಲ್ಲಿಯೇ ಐಕ್ಯವಾಗುವ ಎಚ್ಚರವಹಿಸುತ್ತಾನೆ. ಅದು ಜನರ ಧ್ವನಿಯಾಗಿ, ಶಕ್ತಿಯಾಗಿ, ಸಮಷ್ಟಿ ಪ್ರಜ್ಞೆಯಾಗಿ ವ್ಯಷ್ಟಿ ಪ್ರಜ್ಞೆ ನಿರಶನವಾಗುವ ಪ್ರಕ್ರಿಯೆ ಹೀಗೆ ಬೆಳೆಯುತ್ತದೆ.

ಬುದ್ಧ, ಕ್ರಿಸ್ತ, ಗಾಂಧಿ ಮುಂತಾದವರನ್ನು ಈ ಹಿನ್ನೆಲೆಯಲ್ಲಿ ವ್ಯಕ್ತಿಗಳೆಂದು ಕರೆಯುವಂತಿಲ್ಲ. ಅವರು ಒಂದು ಕಾಲಘಟ್ಟದ, ಸಮುದಾಯದ ಅನಿವಾರ್ಯ ಪರಿವರ್ತನೆಯ ಸಮಷ್ಟಿ ಪ್ರಜ್ಞೆಯೆಂದೇ ಭಾವಿಸಬೇಕು.

೦೧-೦೯-೨೦೧೧

# ಹೆಂಡತಿಯೆಂಬ ತಾಯಿ!

ಹೆಂಡತಿಯನ್ನು 'ಗೃಹ ದೇವತೆ', 'ಮನೆ ಮನೆಯ ಸರಸ್ವತಿ' ಮುಂತಾಗಿ ಕರೆದು ಕೀರ್ತಿಸುವುದು ಅಷ್ಟು ಸಮಂಜಸವಲ್ಲ. ಏಕೆಂದರೆ 'ದೇವತೆ'ಯೆಂದು ಕರೆಯುತ್ತಲೇ ಅವಳನ್ನು ಅತ್ತೆ ಮಾವ ಮೈದುನ ಬಾವ ಗಂಡ ಮಕ್ಕಳಾದಿಯಾಗಿ ಎಲ್ಲರೂ ನಯವಾಗಿ ದುಡಿಸಿಕೊಳ್ಳುವುದನ್ನು ನಾವು ಮನೆಮನೆಗಳಲ್ಲಿ ಕಂಡಿದ್ದೇವೆ. ಅವಳು ಸದಾ ದುಡಿಯುವ ಹಸುವಿನಂತೆ ಇದ್ದುಬಿಟ್ಟಿದ್ದಾಳೆ. ನಮ್ಮ ಸಮಾಜ ತಲತಲಾಂತರದಿಂದಲೂ ಅವಳನ್ನು ಆ ರೀತಿಯೇ ಬೆಳೆಸಿದೆ. ತಾಯಿಯನ್ನು ನೋಡಿ ಮಗಳು ಕಲಿಯುತ್ತಾಳೆ; ಅತ್ತೆಯ ಗುಣಗಳನ್ನು ಸೊಸೆ ಮುಂದುವರಿಸುತ್ತಾಳೆ. ಸಂಸಾರಕ್ಕಾಗಿ ದುಡಿಯುವುದನ್ನು ಅವಳು ಎಷ್ಟರಮಟ್ಟಿಗೆ ಮೈಗೂಡಿಸಿಕೊಂಡಿದ್ದಾಳೆಂದರೆ, ಆ ದುಡಿಮೆಯಲ್ಲಿ ಅಕಸ್ಮಾತ್ ಬೇರೆಯವರು ಕೈಜೋಡಿಸಿದರೆ ತನ್ನ ಹಕ್ಕಿನ ಉಲ್ಲಂಘನೆಯಾಯಿತೆಂದು ಭಾವಿಸಿಬಿಡುತ್ತಾಳೆ! ಅದು ಅವಳ ವಂಶವಾಹಿಗಳಲ್ಲಿ ಸೇರಿಬಿಟ್ಟಿರುವ ಹಾಗೆ ತೋರುತ್ತದೆ. ಈ ದುಡಿಮೆಯ- ಗಂಡಿನ ನಯವಾದ ಬಂಧನದ ಬಿಡುಗಡೆಯನ್ನು ಅವಳು ಬೌದ್ಧಿಕ- ಪ್ರಜ್ಞಾಪೂರ್ವಕ ಎಚ್ಚರದ ಮೂಲಕ ಬಿಡಿಸಿಕೊಳ್ಳಬೇಕಾಗಿದೆ.

ಈ ಬಿಡುಗಡೆ ಸಾಂಪ್ರದಾಯಿಕ ಶಿಕ್ಷಣದಿಂದ ಸಾಧ್ಯವಾಗದೆಂಬುದು ಈಗಾಗಲೇ ಅನುಭವ ವೇದ್ಯವಾಗಿದೆ. ಸಾಂಪ್ರದಾಯಿಕ- ರೂಢಿಗತ ಶಿಕ್ಷಣ ವ್ಯವಸ್ಥೆ ಅವಳನ್ನು- ಸ್ತ್ರೀಯನ್ನು - ಅಕ್ಷರಸ್ಥಳನ್ನಾಗಿ ಮಾಡುತ್ತಿದೆಯಷ್ಟೆ. ವೈಚಾರಿಕವಾಗಿ ಲಿಂಗಸಮಾನತೆಯ ಪರವಾಗಿ ಚಿಂತಿಸಿ ಹಕ್ಕೊತ್ತಾಯ ಮಾಡುವಂಥ ಬೌದ್ಧಿಕ ವಿಕಾಸವನ್ನು ನೀಡುವ ಹೊಸ ಬಗೆಯ ಶಿಕ್ಷಣ ಕ್ರಮವನ್ನು ಅವಳು ಅನ್ವೇಷಿಸಬೇಕಾಗಿದೆ. ರೂಢಿಗತ ಶಿಕ್ಷಣ- ಪದವಿಗಳು ಅವಳಿಗೆ ಆರ್ಥಿಕ ಸ್ವಾತಂತ್ರ್ಯವನ್ನೂ, ಹೊಸ್ತಿಲ ಹೊರಗಿನ ಬೆಳಕನ್ನು ನೀಡಿರುವುದರಲ್ಲಿ ಸಂಶಯವಿಲ್ಲ. ಅವು ಅವಳಿಗೆ ತನ್ನ ಮನಸ್ಸಿಗೆ ಅನಿಸಿದ್ದನ್ನು ಕೊಳ್ಳುವ- ಅದರಲ್ಲಿ ಸುಖಿಸುವಷ್ಟರ ಮಟ್ಟದ ಅವಕಾಶವನ್ನು ನೀಡಿವೆ. ಆದರೆ ಅವಳ ಮನೆಯೊಳಗಿನ ದುಡಿಮೆ, ಗಂಡಸನ್ನು ಪರಿಭಾವಿಸುವ ರೀತಿ, ತನ್ನನ್ನು ತಾನು ಸ್ಥಾನೀಕರಿಸಿಕೊಳ್ಳುವ ಬಗೆ ಬದಲಾಗಿಲ್ಲ. ಒಂದು ಪಕ್ಷ ಸಾಂಪ್ರದಾಯಿಕ ಸ್ತ್ರೀಯ ಅಸ್ತಿತ್ವವನ್ನು ಪರಿವರ್ತಿಸಬೇಕೆಂದು ಹೋರಾಡುವ ಸ್ತ್ರೀ ಪ್ರಜ್ಞೆ ಮೂಡಿಸಿಕೊಂಡ ಮಹಿಳಾ ಹೋರಾಟಗಾರ್ತಿಯರನ್ನು ನಿಕೃಷ್ಟವಾಗಿ ನೋಡುವ ಮನೋಪ್ರವೃತ್ತಿಯಿದೆ.

'ಗಂಡ', 'ಹೆಂಡತಿ' ಎಂಬುವ ಸಂಬಂಧ ವಾಚಕಗಳು ಒಂದು ಸಾಮಾಜಿಕ- ಭಾಷಿಕ ನೆಲೆಯಲ್ಲಿ ಬಳಸುವ ಪದಗಳಾಗಿವೆ. ಇವು ಸಮಾಜದಿಂದ ಸಮಾಜಕ್ಕೆ ಬೇರೆಯ ರೀತಿಯಲ್ಲಿ ಉಚ್ಚಾರಣೆಗೊಂಡರೂ ಸ್ಫುರಿಸುವ ಅರ್ಥವೊಂದೇ. ಆದರೆ ನಮ್ಮಲ್ಲಿ, ನಮ್ಮ ಸಾಮಾಜಿಕ

ವ್ಯವಸ್ಥೆಯಲ್ಲಿರುವ ಲಿಂಗ ತಾರತಮ್ಯದ ಕಾರಣದಿಂದ ಬಹುಪಾಲು ಹೆಂಡತಿಯರು ತಮ್ಮ ಗಂಡಂದಿರನ್ನು 'ಗಂಡ'ನೆಂದು ಇತರರಿಗೆ ಪರಿಚಯಿಸುವುದಿಲ್ಲ. ಅವರು 'ಯಜಮಾನ'ನ ಸ್ಥಾನವನ್ನು ಅಲಂಕರಿಸುತ್ತಾನೆ. ಅವಳಿಗೆ ಅವನು ಆಗಬೇಕಾಗಿರುವುದು ಗಂಡನೇ ಹೊರತು 'ಯಜಮಾನ'ನಾಗಿಯಲ್ಲ. 'ಯಜಮಾನ'ನೆಂದಾಕ್ಷಣ ಇವಳು ಕೆಳಗಿನ ಸ್ಥಾನಕ್ಕಿಳಿಯುತ್ತಾಳೆ. ಸೇವಕಿ ಅಥವಾ ಕೆಲಸಗಾರ್ತಿಯಾಗುತ್ತಾಳೆ. ಆದರೆ 'ಗಂಡ' 'ಹೆಂಡತಿ' ಎಂಬ ಪದಗಳು ಸಮಾನ ಸ್ಥಾನಮಾನವನ್ನು ಸೂಚಿಸುವ ಪದಗಳು. ಆ ಪದಗಳು ಸೂಚಿಸುವ ಸ್ಥಾನಗಳಿಗೆ ಅವುಗಳದೇ ಆದ ಘನತೆ ಇದ್ದೇ ಇದೆ. ಆ ಘನತೆಯನ್ನು 'ಯಜಮಾನ'ನೆಂದು ಕರೆದು ಕಡಿಮೆ ಮಾಡಿಕೊಳ್ಳಬಾರದು.

ಭಾರತೀಯ ಸಮಾಜದಲ್ಲಿ ಇಂದಿಗೂ ಹೆಣ್ಣಿನ ದುಡಿಮೆಗೆ ಬೆಲೆ ಕಟ್ಟಲಾಗದು. ಅವಳದೊಂದು ನಿಸ್ವಾರ್ಥ ಕಾಯಕ. ತಾನು ಹುಟ್ಟಿ ಬೆಳೆದ ಆವರಣದಿಂದ ಬೇರ್ಪಟ್ಟು, ಸಂಪೂರ್ಣ ಹೊಸದಾದ ಆವರಣದಲ್ಲಿ, ಅಭಿರುಚಿಯ ನಡುವೆ, ನವನವೀನ ಮನಸ್ಥಿತಿಗಳ ಒಡನೆ ತನ್ನ ಬದುಕನ್ನು ಕಟ್ಟಿಕೊಂಡು ಅಸ್ತಿತ್ವ ಸ್ಥಾಪಿಸುವ ಬಗೆಯೇ ರೋಮಾಂಚನಕಾರಿಯಾದುದು ಮತ್ತು ನಿಗೂಢವಾದುದು. ತನ್ನನ್ನು ತಾನು ತನ್ನ ಗಂಡ ಮತ್ತು ಮಕ್ಕಳ ಶ್ರೇಯಸ್ಸಿಗಾಗಿ ಅರ್ಪಿಸಿಗೊಂಡು, ತನ್ನತನವನ್ನು ಅವರ ಹಿರಿಮೆ ಗರಿಮೆಗಳಲ್ಲಿ ಇಲ್ಲವಾಗಿಸಿಕೊಳ್ಳುವ ರೀತಿ ಬೆರಗು ಮೂಡಿಸುವಂಥದು. ಅವಳು ಕೇವಲ ತನ್ನ ಮಕ್ಕಳಿಗೆ ಮಾತ್ರ ತಾಯಿಯಾಗುವುದಿಲ್ಲ. ಅವಳು ತನ್ನ ಗಂಡನಿಗೂ ತಾಯಿಯಾಗಿ ಅವನನ್ನು ಪೋಷಿಸುತ್ತಾಳೆ.

ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಹೆಂಡತಿಯನ್ನು 'ಚಿಕ್ಕಮ್ಮ'ನೆಂದು ಗುರುತಿಸುವ ವಾಡಿಕೆಯಿದೆ. ಇದೊಂದು ಅನುಭವಜನ್ಯವಾದ ಪರಿಭಾವನೆ. ಒಂದು ಸಮಾಜವು ತನ್ನ ಮಡಿಲಿಗೆ ಅನ್ಯ ಕುಟುಂಬದಿಂದ ಬಂದ ಹೆಣ್ಣುಮಗಳೊಬ್ಬಳು ಬಂದ ಕುಟುಂಬದ ಏಳಿಗೆಗಾಗಿ ದುಡಿಯುವ ರೀತಿಯನ್ನು ಲಿಂಗ ಅಸಮಾನತೆಯ ನಡುವೆಯೂ ಗುರುತಿಸಿದೆ. ಎಲ್ಲೋ ಅವಳನ್ನು ದುಡಿಸಿಕೊಂಡಿರುವ ರೀತಿಗೆ, ಅವಳ ಮೇಲೆ ಎಸಗಿರುವ ಶ್ರಮದ ಕ್ರೌರ್ಯಕ್ಕೆ, ಗಂಡಿಗೆ ಸಿಗ್ಗಾಗಿರಬೇಕು. ಅವಳ ಮುಂದೆ ತನ್ನ ದುಡಿಮೆ-ತ್ಯಾಗಗಳು ಕಡಿಮೆಯೆಂಬ ಪ್ರಜ್ಞೆ ಕಾಡಿರಬೇಕು. ಅದಕ್ಕಾಗಿ ಅವಳನ್ನು ಹೆಂಡತಿಯ ಸ್ಥಾನದಿಂದ ತಾಯಿಯ ಸ್ಥಾನಕ್ಕೇರಿಸಿ ವೈಭವೀಕರಿಸುವ ಮನಸ್ಸು ಮಾಡಿರಬೇಕು. ತನ್ಮೂಲಕ ತನಗಾಗಿರುವ ನಾಚಿಕೆಯನ್ನು ಮುಚ್ಚಿಕೊಳ್ಳಲೆತ್ನಿಸುವ ಹುನ್ನಾರವಾಗಿರಬಹುದೇ?

೧೫-೦೯-೨೦೧೧

# ಹೊಟ್ಟೆಬಾಕ ಪ್ರವೃತ್ತಿ

ಊಟ ಮಾಡುವುದು ಕೂಡ ಒಂದು ಕಲೆ. ಕೇವಲ ಹೊಟ್ಟೆ ತುಂಬಿಸಿಕೊಳ್ಳುವ ಅಥವಾ ಹಸಿವು ನೀಗಿಸಿಕೊಳ್ಳುವ ಕ್ರಿಯೆಯಾಗಿ ಅದು ಇರಬಾರದು. ಹಸಿವು ಮನುಷ್ಯನ ಮೂಲಭೂತ ಪ್ರವೃತ್ತಿಗಳಲ್ಲೊಂದು, ನಿಜ. ಅದು ಪೂರೈಕೆಯಾಗಿ ತಣಿದಾಗ ಮಾತ್ರ ಮಿಕ್ಕ ಇಂದ್ರಿಯಗಳು ಸರಿಯಾಗಿ ಕೆಲಸ ಮಾಡುತ್ತವೆ; ಬುದ್ಧಿ ಮನಸ್ಸುಗಳು ವಿವೇಕದಿಂದ ವರ್ತಿಸುತ್ತವೆ. ದೈಹಿಕವಾಗಿ ಆರೋಗ್ಯವಾಗಿರಲು ಸಾಧ್ಯವೂ ಆಗುತ್ತದೆ. ಹಾಗಂತ ನೋಡುವವರು ಮುಜಗರಕ್ಕೊಳಗಾಗುವಂತೆ ಅಥವಾ ಅಸಹ್ಯಪಟ್ಟುಕೊಳ್ಳುವಂತೆ ನಮ್ಮ ಭೋಜನ ಕ್ರಿಯೆ ಸಾಗಬಾರದು, ಅದು ಬಕಾಸುರನಂತೆ ಎಷ್ಟು ತಿಂದರೂ ಸಾಕಾಗದ ಪ್ರವೃತ್ತಿಯಾಗಬಾರದು. ಅವನು ತನಗಾಗಿ ಬಂದ ಬಂಡಿ ಬಂಡಿ ಭಕ್ಷ್ಯ ಭೋಜ್ಯವನ್ನು ನಿಧಾನವಾಗಿ ಸವಿಯುತ್ತಾ, ಅದನ್ನು ಆನಂದಿಸುತ್ತಾ ತಿನ್ನಲಿಲ್ಲ. ದಾಹದಿಂದ ಮುಕ್ಕಿದನು. ಆ ಮುಕ್ಕುವ ಕ್ರಿಯೆಯಲ್ಲಿ ಆಹಾರ ಅವನ ಮುಖಮೋರೆಯ ಮೇಲೆ, ಅವನ ಎದೆಯ ಮೇಲೆ ಬಿದ್ದು ಚೆಲ್ಲಾಡಿತು. ಅದು ನೋಡುವವರಿಗೆ ಭೀಕರವೂ ಅಸಹ್ಯವೂ ಆಗಿತ್ತು. ಊಟ ಮಾಡುವ ವಿಧಾನ ಅಸಹ್ಯವನ್ನುಂಟು ಮಾಡಬಾರದು. ಅದು ನೋಡುಗರಿಗೆ ಆನಂದವನ್ನು ಬಡಿಸುವವರಿಗೆ ಉತ್ಸಾಹವನ್ನೂ ಉಂಟು ಮಾಡುವಂತಿರಬೇಕು.

ಹಸಿವಾದವರೆಲ್ಲರೂ ತಹತಹಿಸಿ ತಿನ್ನುತ್ತಾರೆಂಬುದು ಅತಿಶಯದ ಮಾತು. ಹಾಗೆ ನೋಡಿದರೆ ಸಾಕಷ್ಟು ಹಸಿವಾದಾಗ ಗಬಗಬನೆ ತಿನ್ನಲಾಗುವುದಿಲ್ಲ. ಹಾಗೆ ತಿನ್ನಲು ಯತ್ನಿಸಿದರೆ ಗಂಟಲಿಗೆ ಸಿಕ್ಕಿಕೊಂಡು ಉಸಿರು ಕಟ್ಟಿದಂತಾಗುತ್ತದೆ. ಕೆಲವು ಸಂದರ್ಭದಲ್ಲಿ ಹಾಗೆ ತಿಂದರೆ ಮಾರಣಾಂತಿಕ ಪರಿಣಾಮಗಳುಂಟಾಗಬಹುದು. ಆಗ ನಿಧಾನವಾಗಿ, ತುಸು ತುಸು ತಿಂದರೆ ಸರಾಗವಾಗುತ್ತದೆ. ಆಗ ಚೈತನ್ಯ ಮೂಡಿಸಿಕೊಂಡ ದೇಹವು ತಡವಾಗಿ ಊಟ ಮಾಡಲು ಸಿದ್ಧವಾಗುತ್ತದೆ. ಈ ಪ್ರಕ್ರಿಯೆ ಒಂದೆರಡು ದಿನಗಳಿಗೆ ವಿಸ್ತರಿಸಿದರೂ ಆಶ್ಚರ್ಯವಿಲ್ಲ. ಆದುದರಿಂದ 'ಶತಮಾನಗಳಿಂದ ಹಸಿದವನಂತೆ ಸಿಕ್ಕಿದ್ದನ್ನೆಲ್ಲಾ ಗಬಗಬನೆ ತಿಂದನು' ಎಂದು ಬರೆಯುವ ಮಾತುಗಳ ಬಗ್ಗೆ, ಹಸಿದವರ ತಿನ್ನುವ ದಾಹದ ಬಗ್ಗೆ ಚಲನಚಿತ್ರಗಳಲ್ಲಿ ತೋರಿಸುವ ದೃಶ್ಯಗಳ ಬಗ್ಗೆ ಮರುಚಿಂತನೆ ಮಾಡುವುದು ಒಳಿತು. ಹಸಿದ ಬಡವರ ಬಗ್ಗೆ ಅಗೌರವದ ವರ್ತನೆ ಇದೆಂದು ಭಾವಿಸುವಂತಾಗುತ್ತದೆ.

ಈಗ ಭಾರತದಲ್ಲಿ ದುಡಿದು ತಿನ್ನುವ ಯಾರೂ ಹಸಿವಿನಿಂದ ಬಳಲಬೇಕಿಲ್ಲ. ಕೆಲಸ ಮಾಡಬಯಸುವ ಕೈಗಳಿಗೆ ಕೈತುಂಬ ಕೆಲಸ ಸಿಗುತ್ತದೆ; ಬಾಯ್ತುಂಬ ಎರಡು ಹೊತ್ತು ತಿನ್ನುವಷ್ಟು ಹಣ ದೊರೆಯುತ್ತದೆ. ಒಂದು ದೇಶವೇ ಬರಗಾಲದಿಂದ, ಬಡತನದಿಂದ, ನಾನಾ ಪ್ರಕೃತಿ

ವಿಕೋಪಗಳಿಂದ ಅಥವಾ ಆಳುವ ಸರ್ಕಾರಗಳ ಅಕ್ರಮ ಅವ್ಯವಹಾರ ಭ್ರಷ್ಟಾಚಾರಗಳಿಂದ ಹಸಿವಿನಿಂದ ನರಳುವಂತಾಗಬಹುದು. ಆಫ್ರಿಕಾದ ಕೆಲವು ದೇಶಗಳಲ್ಲಿ ಈ ಪರಿಸ್ಥಿತಿಯನ್ನು ಕಂಡಿದ್ದೇವೆ. ಆದರೆ ಇಂದು ಜಗತ್ತು ಸಾಕಷ್ಟು ನಾಗರಿಕವಾಗಿದೆ. ಮಾನವೀಯ ಅಂತಃಕರಣದಿಂದ ನೋವಿಗೆ ಮಿಡಿಯುತ್ತದೆ. ಎಲ್ಲೇ ಪ್ರಕೃತಿ ವಿಕೋಪವಾಗಲೀ, ಬರಗಾಲದಿಂದ ಹಾಹಾಕಾರ ಉಂಟಾಗಲಿ ಅನ್ನ ಆಹಾರ ಬಟ್ಟೆಗಳ ಮಹಾಪೂರವೇ ಅಲ್ಲಿಗೆ ಹರಿದುಬರುತ್ತದೆ. ಮಾನವೀಯತೆ-ಪ್ರೀತಿಗಳು ಉಸಿರಾಡುತ್ತವೆ. ಈ ಬಗೆಯ ಅನ್ನ ಆಹಾರಗಳ ಅಸಮಾನತೆಗಳು ಎಲ್ಲ ಕಾಲದಲ್ಲೂ ಎಲ್ಲ ಸಮಾಜಗಳಲ್ಲೂ ಇದ್ದವು. ಆದರೆ ಆಧುನಿಕ ಜ್ಞಾನ ವಿಜ್ಞಾನಗಳು ಈ ಹಸಿವಿನ ತೀವ್ರತೆಯನ್ನು ಕಡಿಮೆ ಮಾಡುತ್ತವೆ.

'ತಾಯಿ ಮಾಡಿದ ಹೊಟ್ಟೆ, ಊರು ಮಾಡಿದ ಕೊಳಗ' ಎಂಬ ಗಾದೆ ಮಾತಿದೆ. ವ್ಯಕ್ತಿಯಲ್ಲಿ ತಿನ್ನುವ ಪ್ರವೃತ್ತಿಯನ್ನು ಬೆಳೆಸುವಲ್ಲಿ ಮುಖ್ಯ ಪಾತ್ರವಹಿಸುವವಳು ತಾಯಿಯೆಂದಾಯಿತು. ತನ್ನ ಮಗು ಹೊಟ್ಟೆಬಾಕನಾಗಲಿ ಎಂಬ ಉದ್ದೇಶ ಅವಳಿಗೆ ಖಂಡಿತವಿರುವುದಿಲ್ಲ. ತನ್ನ ಮಗು ಚೆನ್ನಾಗಿ ತಿಂದುಂಡು ದಷ್ಟಪುಷ್ಟವಾಗಿ ಆರೋಗ್ಯಕರವಾಗಿ ಬೆಳೆಯಲೆಂಬುದು ಅವಳ ಆಸೆ. ಆ ಕಾರಣದಿಂದ ಅವಳು ಅವನಿಗೆ ಅವನ ಆವಶ್ಯಕತೆಗೆ ಮೀರಿ ತಿನ್ನಿಸತೊಡಗುತ್ತಾಳೆ. ತಿನ್ನುವುದನ್ನು ಅಭ್ಯಾಸ ಮಾಡಿಸುತ್ತಾಳೆ. ತಿನ್ನುವುದು ಅನಂತರ ಅವನಿಗೆ ಗೀಳಾಗಿ ಅಂಟಿಕೊಳ್ಳುತ್ತದೆ. ಜೀವನ ಪರ್ಯಂತ ಮಾಯೆಯಾಗಿ ಕಾಡುತ್ತದೆ. ಅವನು ತಿನ್ನುವ ರೋಗಿಯಾಗುತ್ತಾನೆ; ತಿನ್ನುವ ಭರದಲ್ಲಿ ತನ್ನ ನಾಗರಿಕ ವರ್ತನೆಗಳನ್ನು ಅಲಕ್ಷ್ಯ ಮಾಡುತ್ತಾನೆ. ಅವನಿಗರಿವಿಲ್ಲದಂತೆಯೇ ತನ್ನ ಹೊಟ್ಟೆಯನ್ನು ತೋಳದ ಹೊಟ್ಟೆಯನ್ನಾಗಿಸಿಕೊಳ್ಳುತ್ತಾನೆ. ಜೀವನದ ಪರಮಗುರಿ ತಿನ್ನುವುದೇ ಆಗಿದೆ. 'ಎಲ್ಲಾರು ಮಾಡುವುದು ಗೇಣು ಹೊಟ್ಟೆಗಾಗಿ...' ಎಂಬುದು ಅವನ ಆದರ್ಶವಾಗಿ ಬಿಡುತ್ತದೆ. ಆದರೆ ಆ ಕೀರ್ತನೆಯ ಅಂತ್ಯದಲ್ಲಿ ದಾಸರು ಅಭಿವ್ಯಕ್ತಿಸುವ ಬದುಕಿನ ನಿಜಗುರಿ ಅಗಣ್ಯವಾಗಿಬಿಡುತ್ತದೆ.

ಬದುಕಿನಲ್ಲಿ ಜೀವ ಸಾಗುವ ಪ್ರಕ್ರಿಯೆಗೆ ಆಹಾರ ಬೇಕು. ಬದುಕಿನ ಗುರಿ ತಿನ್ನುವುದಲ್ಲ. ಸಂಕುಲಾಭಿವೃದ್ಧಿ ಮಾಡುವುದು ಮತ್ತು ಆ ಸಂಕುಲದ ನೆಮ್ಮದಿ ಹಾಗೂ ಸುಸಂಸ್ಕೃತಮಯ ಹಾದಿಯನ್ನು ಸುಗಮಗೊಳಿಸಲು ಸೌಮ್ಯ ಸುಖಕರ ವಾತಾವರಣವನ್ನು ರೂಪಿಸುವುದು ಜೀವಿತದ ಗುರಿಯಾಗಬೇಕು. ಅದಕ್ಕಾಗಿ ದುಡಿಯುವ ಜೀವನ ಆರೋಗ್ಯ ಮತ್ತು ಶಕ್ತಿಗೆ ಅವನು ತೆಗೆದುಕೊಳ್ಳುವ ಆಹಾರ ಪೂರಕವಾಗಿ ಕೆಲಸ ಮಾಡುವಂತಿರಬೇಕು.

ವ್ಯಕ್ತಿ ವ್ಯಕ್ತಿಯನ್ನೇ ತಿನ್ನುವಂಥ, ರಾಜ್ಯ ರಾಜ್ಯವನ್ನೇ ತಿನ್ನುವಂಥ, ದೇಶ ಮತ್ತೊಂದು ದೇಶವನ್ನೇ ತಿನ್ನುವಂಥ ಹಾಗೂ ಅಮಾನುಷತ್ವ ಮಾನವತೆಯನ್ನೇ ಕಬಳಿಸುವ ಹೊಟ್ಟೆಬಾಕ ಪ್ರವೃತ್ತಿಯೂ ಇದೆಯೆಂಬುದನ್ನು ಮರೆಯುವಂತಿಲ್ಲ.

೨೯-೦೯-೨೦೧೧

# ಅಮ್ಮ - ಧರೆಗೂ ದೊಡ್ಡವಳು!

ಪತ್ರಕರ್ತ ರವೀಂದ್ರಭಟ್ 'ಮೂರನೇ ಕಿವಿ' ಎಂಬ ಅಪರೂಪದ ಅನುಭವಜನ್ಯ ಕೃತಿಯನ್ನು ಬರೆದಿದ್ದಾರೆ. ಆ ಕೃತಿಯನ್ನು ಓದಿದಾಗ ನಿಜಕ್ಕೂ 'ತಾಯಿ' ಎಂಬುವಳು ಧರೆಗೂ ದೊಡ್ಡವಳು ಎಂಬುದು ವೇದ್ಯವಾಗುತ್ತದೆ. 'ಧರೆ' ಎಂಬುದು ಸಹನೆಯ ಮಹಾಮೂರ್ತಿ. ಅದು ತನ್ನ ಮಕ್ಕಳು - ಅವರು ಮಾನವ ಪ್ರಾಣಿಪಕ್ಷಿಗಳೇ ಆಗಿರಲಿ- ಏನೇ ಅನ್ಯಾಯ ತುಳಿತ ಮುಂತಾದ ದೌರ್ಜನ್ಯ ನಡೆಸಿದರೂ ಅವಳು ಸಹಿಸಿಕೊಳ್ಳುತ್ತಾಳೆಂಬುದನ್ನು ನಾವು ಬಲ್ಲೆವು. ಮಕ್ಕಳ ದೌರ್ಜನ್ಯ ಸಹಿಸಿ ಪ್ರತಿಯಾಗಿ ಉಪಕಾರವನ್ನು ಮಾಡುವ ಅವಳ ಮಾತೃಗುಣ ಅನುಪಮವಾದುದು. ಆದರೆ ಆಕೆಗೆ ಮಕ್ಕಳು ನೀಡುತ್ತಿರುವ ಹಿಂಸೆಯಿಂದ ಆಗುವ ನೋವು ಎಂಥಾದ್ದು? ಆಗ ಅವಳಿಗಾಗುವ ಭಾವನೆಗಳೆಂಥವು? ಇವು ಹುಲುಮಾನವರಾದ ನಮಗೆ ಅರ್ಥವಾಗುವುದೇ ಇಲ್ಲ. ಆದರೆ ಅದಕ್ಕೆ ಪ್ರತಿಯಾಗಿ ಮಾನವ ಸಂಕುಲದ ಹೆಣ್ಣು ತಾಯಿಯಾದಾಗ ತನ್ನ ಮಕ್ಕಳನ್ನು ಹೆತ್ತು ಲಾಲನೆ ಪೋಷಣೆ ಮಾಡುವಾಗ ಪಡುವ ಆನಂದ ಮತ್ತು ಯಾತನೆಗಳು ನಮಗೆ ಅರ್ಥವಾಗುತ್ತವೆ. ನೋಡುವ ಕಣ್ಣುಗಳಿದ್ದರೆ, ಅರ್ಥಮಾಡಿಕೊಳ್ಳುವ ಮನಸ್ಸಿದ್ದರೆ, ಅವಳೊಳಗೆ ನಡೆಯುವ ಭಾವಸಮರ ಅನುಭವಕ್ಕೆ ಬರುತ್ತದೆ.

ರವೀಂದ್ರಭಟ್ ಅವರ 'ಮೂರನೇ ಕಿವಿ' ಇಂಥ ಮಹಿಳೆಯೊಬ್ಬಳ ಮಾತೃತ್ವದ ಹೋರಾಟದ ಕಥಾನಕವನ್ನು ಹೃದಯಂಗಮವಾಗಿ ನಮ್ಮ ಹೃದಯಕ್ಕೆ ತಟ್ಟುವಂತೆ ಮೂಡಿಸುತ್ತದೆ. ಕಥಾನಕವೆಂದರೆ ಇದು ಕಾಲ್ಪನಿಕ ಕಥೆಯೊಂದರ ನಿರೂಪಣೆಯಲ್ಲ. ಭಟ್ಟರ ಬದುಕಿನಲ್ಲಿ ಆವಿರ್ಭವಿಸಿದ ಅವರ ಎರಡನೇ ಮಗನ ಅಂಗವೈಕಲ್ಯವನ್ನು ನೀಗಿಸುವಲ್ಲಿ ತಾಯಿಯೊಬ್ಬಳು ತನ್ನ ವೈಯಕ್ತಿಕ ಬದುಕಿನ ಸುಖ ನೆಮ್ಮದಿಯನ್ನು ಇಲ್ಲವಾಗಿಸಿಕೊಳ್ಳುವ ಸವಾಲು ಮತ್ತು ತನ್ನ ಮಗನ ವೈಕಲ್ಯವನ್ನು ಸಾಮಾನ್ಯತೆಗೆ ತರುವ ಪ್ರಯತ್ನದಲ್ಲಿ ತನ್ನ ಸಹಜ ಪ್ರತಿಭೆಯನ್ನು ತ್ಯಾಗಮಾಡುವ ಪರಿ ದಿಗ್ಭ್ರಮೆಗೊಳಿಸುತ್ತದೆ. ಅದರಲ್ಲೂ ಕಿವುಡು-ಮೂಗು ಮಕ್ಕಳು ಸಾಮಾನ್ಯಮಟ್ಟದ ಮಕ್ಕಳಿಗಿಂತ ಅತಿಯೆಂಬಂತೆ ತುಂಟರೂ ಚುರುಕುತನದವರೂ ಆಗಿರುತ್ತಾರೆ. ಅಂಥವರನ್ನು ನಿಭಾಯಿಸಲು ಸಾಕಷ್ಟು ಕಷ್ಟಪಡಬೇಕಾಗುತ್ತದೆ ಮತ್ತು ಅನೇಕ ಬಗೆಯ ಆಕಸ್ಮಿಕ ಸನ್ನಿವೇಶಗಳನ್ನು ಎದುರಿಸಬೇಕಾಗುತ್ತದೆ. ಹೊರಗೆ ಹೋಗಿ ಲೌಕಿಕದಲ್ಲಿ ಮುಳುಗಿಹೋಗುವ ತಂದೆಗಿಂತ, ಅಂಥ ಮಕ್ಕಳ ಜೊತೆಯಲ್ಲಿ ಕ್ಷಣಕ್ಷಣವೂ ಏಗುತ್ತಾ, ಅವರನ್ನು ಸಮಾಜದಲ್ಲಿ ಎಲ್ಲರಂತಾಗಿಸುವ ನಿಷ್ಕಲ್ಮಶ ತ್ಯಾಗಪೂರ್ಣ ದುಡಿಮೆಯಲ್ಲಿ ತಮ್ಮತನವನ್ನು ಇಲ್ಲವಾಗಿಸಿಕೊಳ್ಳುವ ಮತ್ತು ಕೇವಲ ತಾಯಿಯಾಗಿ ಎತ್ತರದ ರೂಪು ಪಡೆಯುವ ಭಟ್ಟರ ಪತ್ನಿ ರೂಪ ಅವರು

ಧರೆಯಂತೆ ದೊಡ್ಡವರಾಗಿಬಿಡುತ್ತಾರೆ.

ಆದರೆ ಇದೇ ಪುಸ್ತಕದಲ್ಲಿ ಒಂದು ಅತ್ಯಂತ ಅಪರೂಪದ ವಾಸ್ತವಿಕ ಪ್ರಸಂಗವೊಂದನ್ನು ರವೀಂದ್ರಭಟ್ಟರು ನಮ್ಮ ಕಣ್ಮುಂದೆ ಬಿಚ್ಚಿಡುತ್ತಾರೆ. ಮಗನ ನೆಮ್ಮದಿಗಾಗಿ, ಅವನ ಸ್ವಾಸ್ಥ್ಯಕ್ಕಾಗಿ ಯಾವ ಮಟ್ಟದ ಕ್ರಿಯೆಗೂ ಅವಳು ತೊಡಗಬಲ್ಲಳೆಂಬುದನ್ನು ಮುಂದಿನ ವಿವರವನ್ನು ಓದಿದರೆ ತಿಳಿದು ಬರುತ್ತದೆ:

ತಾಯಿಯೊಬ್ಬಳು ತನ್ನ ಕಿವುಡುಮೂಗು ಮಗನನ್ನು ಸಾಮಾನ್ಯ ಮಕ್ಕಳು ಓದುವ ಶಾಲೆಯೊಂದಕ್ಕೆ ಸೇರಿಸಿದ್ದಳು. ಸಮಾನಾಂತರವಾಗಿ ಅವನನ್ನು ಸೂಕ್ತ ತರಬೇತಿಯ ಚಿಕಿತ್ಸೆಯ ಮೂಲಕ ಸಾಮಾನ್ಯಗೊಳಿಸುವ ಪ್ರಯತ್ನವನ್ನೂ ಮಾಡುತ್ತಿದ್ದಳು. ಮಗ ಬೆಳೆಯುತ್ತಿದ್ದ, ಅವನ ದೇಹ ಕೂಡ ವಯೋಸಹಜವಾದ ಪ್ರವೃತ್ತಿಗಳಿಗೂ ಸ್ಪಂದಿಸುತ್ತಿತ್ತು. ಪ್ರೌಢಶಾಲೆಯಲ್ಲಿ ಓದುತ್ತಿದ್ದ ಆ ತಾಯಿಯ ಮಗ ತನ್ನ ದೇಹದಲ್ಲಿ ಕಾಮ ಪ್ರವೃತ್ತಿ ಕೆರಳಿದಾಗ ತನ್ನ ಹೆಣ್ಣು ಸಹಪಾಠಿಗಳನ್ನು ಯಾವ ಎಗ್ಗು ಸಿಗ್ಗುಗಳಿಲ್ಲದೆ ಹಿಡಿದು ಆಕ್ರಮಿಸಲು ಯತ್ನಿಸುತ್ತಾನೆ. ಶಾಲೆಯಲ್ಲಿ ಇದು ಸಹಿಸಲಸಾಧ್ಯವಾದ ದಿನನಿತ್ಯದ ಪರಿಪಾಟಲಾದಾಗ ಅನಿವಾರ್ಯವಾಗಿ ಶಾಲೆಯಿಂದ ಅವನನ್ನು ಹೊರಹಾಕಲು ಆಡಳಿತ ಮಂಡಳಿ ನಿರ್ಧರಿಸುತ್ತದೆ. ತಾಯಿಗೆ ಆಕಾಶ ತಲೆಯ ಮೇಲೆ ಕಳಚಿ ಬಿದ್ದಂತಾಗುತ್ತದೆ. ಮಗನ ವಿದ್ಯಾಭ್ಯಾಸಕ್ಕೆ ಕಂಟಕ ಬರುವುದು ಅವಳಿಗಿಷ್ಟವಿಲ್ಲ, ಅವಳು ವೈದ್ಯರಲ್ಲಿಗೆ ಮಗನನ್ನು ಕರೆದೊಯ್ಯುತ್ತಾಳೆ. ಮನೋವೈದ್ಯರು ಅವಳ ಮಗನನ್ನು ಪರೀಕ್ಷೆ ಮಾಡಿ ಅವನ ದೈಹಿಕ ರೋಗಕ್ಕೆ ತಕ್ಕ ಪರಿಹಾರವನ್ನು ಸೂಚಿಸಿದರು. ತಾಯಿ ಆ ಚಿಕಿತ್ಸೆಯನ್ನು ನೀಡಲು ಒಪ್ಪಿದಳು. ಅದರಂತೆ ದಿನನಿತ್ಯ ಮಗನಿಗೆ ಚಿಕಿತ್ಸೆ ನೀಡಿದಳು. ಮಗನು ಎಲ್ಲರಂತಾದ. ಅವನು ಮತ್ತೆ ಶಾಲೆಗೆ ಹೋದ. ಮುಂದೆಂದೂ ಅವನು ತನ್ನ ಹೆಣ್ಣು ಸಹಪಾಠಿಗಳೊಡನೆ ಅಸಭ್ಯವಾಗಿ ವರ್ತಿಸಲಿಲ್ಲ. ಇದು ಮೈಸೂರು ನಗರದಲ್ಲಿ ನಡೆದ ಸತ್ಯ ಪ್ರಸಂಗ. ಭಟ್ಟರು ಅದನ್ನು ನಿರ್ವಿಕಾರವಾಗಿ ದಾಖಲಿಸುತ್ತಾರೆ.

ಮಗನ ವಯೋಧರ್ಮಕ್ಕನುಗುಣವಾಗಿ ಮೂಡಿದ ದೈಹಿಕ ಬಯಕೆ ಸೂಚಿತವಾದ ಮದ್ದು -ಅವನಿಗೆ ಮುಷ್ಠಿಮೈಥುನ ಮಾಡುವುದು, ಅವಳು ಪ್ರತಿನಿತ್ಯ ಬೆಳಿಗ್ಗೆ ಸ್ನಾನ ಮಾಡಿಸುವಾಗ ಆ ತಾಯಿ ಮುಷ್ಠಿಮೈಥುನ ಮಾಡಿದಳು. ಮಗನ ದೈಹಿಕ ಬಯಕೆ ಶಮನವಾಯಿತು. ಅವನು ನಾರ್ಮಲ್ ಆದ. ಜಗತ್ತಿನ ಯಾವ ತಾಯಿ ಮಗನ ಒಳತಿಗಾಗಿ ಇಂಥ ಕೆಲಸ ಮಾಡಿಯಾಳು? ಆಶ್ಚರ್ಯವಾಗುವುದೆ? ಆದರೆ ಇದು ವಾಸ್ತವ ಸತ್ಯ. ಈ ತಾಯಿ ಮಗನಿಗಾಗಿ ಇಂಥ ಕೆಲಸ ಮಾಡಲು ಸಿದ್ಧವಾಗುತ್ತಾಳೆ, ಆದುದರಿಂದಲೇ ತಾಯಿ 'ಧರೆಗೂ - ದೊಡ್ಡವಳು' ಎಂದು ಅನ್ನಿಸುತ್ತಾಳೆ.

೦೯-೦೯-೨೦೧೧

# ಚಿತ್ತ ಶುದ್ಧಿ

ಭಾರತದ ದೇವಸ್ಥಾನಗಳಿಗೆ ಹರಿದುಬರುವ ಸಂಪತ್ತು ಇಂದಿಗೂ ಅಪಾರ. ತಮ್ಮ ಜೀವಮಾನದುದ್ದಕ್ಕೂ ಇಷ್ಟ ದೇವತೆಗಳಿಗೆ ಪ್ರತಿವರ್ಷವೂ ತಪ್ಪದೆ ನಡೆದುಕೊಳ್ಳುವ ಭಕ್ತರಿದ್ದಾರೆ. ಕಷ್ಟ ಬಂದಾಗ ಹರಕೆಹೊತ್ತು ಕಾಣಿಕೆಗಳನ್ನು ನೀಡುತ್ತೇವೆಂದು ಬೇಡಿಕೊಂಡು ಅದನ್ನು ತೀರಿಸುವ ಆಸ್ತಿಕರಿದ್ದಾರೆ. ಈ ನಡವಳಿಕೆ ಶತಶತಮಾನಗಳಿಂದ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಸಂಪ್ರದಾಯವಾಗಿದೆ. ಈ ಸಂಪ್ರದಾಯದಿಂದಲೇ ಭಾರತದ ದೇವಸ್ಥಾನಗಳಲ್ಲಿ ಸಂಪತ್ತು ಶೇಖರಣೆಯಾಗುತ್ತದೆ. ಇಂದಿನ ದೇವಾಲಯಗಳಲ್ಲಿ ಹಣವನ್ನು ಕಾಣಿಕೆಯಾಗಿ ಪಡೆದರೂ ಅದು ಸಂಪತ್ತಾಗಿ ಪರಿವರ್ತಿತವಾಗುತ್ತದೆ. ಇದರ ಜೊತೆಗೆ ಚಿನ್ನ ಬೆಳ್ಳಿಯ ಆಭರಣ ರೂಪದ ದ್ರವ್ಯವಂತು ಪ್ರವಾಹದ ರೀತಿ ಹರಿದು ಬರುತ್ತಲೇ ಇರುತ್ತದೆ. ಈ ಶೇಖರಣಾ ಪರಿಕ್ರಮದಿಂದಾಗಿಯೇ ದೇವಸ್ಥಾನಗಳಲ್ಲಿ ಕೋಟ್ಯನುಕೋಟಿ ಸಂಪತ್ತು ಸಂಗ್ರಹವಾಗುತ್ತದೆ. ಇದರಿಂದಾಗಿಯೇ ಆಧುನಿಕ ಕಾಲದಲ್ಲಿ ದೇವಸ್ಥಾನ ಕಟ್ಟಿಸುವುದು ಮತ್ತು ದೈವ ಸಂಬಂಧಿಯಾದ ಆಚರಣೆಗಳನ್ನು ನಡೆಸುವುದು ಲಾಭದಾಯಕ ಉದ್ದಿಮೆಯಾಗತೊಡಗಿದೆ. ನೆರಳಿನಲ್ಲಿ ಕುಳಿತು ಮೈಬೆವರು ಸುರಿಸದೆ, ಅನಾಯಾಸವಾಗಿ ಹಣ ಸಂಪಾದಿಸುವ ಸಾಧನವಾಗಿ ದೇವಸ್ಥಾನಗಳು ರೂಪಾಂತರಗೊಳ್ಳುತ್ತಿವೆ.

ಕಳೆತ ಶತಮಾನದಲ್ಲಿ ವಿದ್ಯೆ ತಂದುಕೊಟ್ಟ ಅರಿವಿನ ಕಾರಣದಿಂದಾಗಿ ಸರ್ವಧರ್ಮ ಸಮನ್ವಯ ಮತ್ತು ಸಮಾನತಾ ಧೋರಣೆ ಜಾಗೃತವಾಗಿತ್ತು. ಎಲ್ಲವನ್ನು ಮಾನ್ಯ ಮಾಡಿ, ಎಲ್ಲವನ್ನು ಗೌರವದಿಂದ ಬಾಳಲು ಬಿಟ್ಟು ತಾನೂ ಬಾಳಬೇಕೆಂಬ ಉದಾರವಾದ ಉಸಿರಾಡತೊಡಗಿತ್ತು. ಅದರ ಬೆನ್ನ ಹಿಂದೆ ಆಧುನಿಕ ಚಿಂತನಾ ತತ್ತ್ವಗಳು ಕೆಲಸ ಮಾಡಿದ್ದವು. ವೈಚಾರಿಕ ಪ್ರಜ್ಞೆ ಮತ್ತು ವೈಜ್ಞಾನಿಕ ಮನೋಧರ್ಮಗಳು ವ್ಯಕ್ತಿಯ ಅಂತಃಚಕ್ಷುವನ್ನು ವಿಶಾಲಗೊಳಿಸಿದ್ದವು. ಇದರ ಫಲವಾಗಿ ದೇವರು ಮತ್ತು ಆ ಸಂಬಂಧಿಯಾದ ನಂಬಿಕೆಗಳು ಬೀದಿಯ ಆಚರಣೆಯಾಗದೆ, ಅದು ಮನೆಯ ಒಳಗಿನ ನಡೆಯೆಂಬಂತೆ ಭಾಸವಾಗತೊಡಗಿದ್ದವು. ಆದರೆ ಕಳೆದ ಕಾಲು ಶತಮಾನದಿಂದೀಚೆಗೆ ಕೇವಲ ಭಾರತ ಮಾತ್ರವಲ್ಲದೆ ಜಗತ್ತಿನೆಲ್ಲೆಡೆ ವ್ಯಾಪಕವಾಗಿ ಹರಡುತ್ತಿರುವ ಧಾರ್ಮಿಕ ಮೂಲಭೂತವಾದದ ಕಾರಣದಿಂದಾಗಿ ಊರು ಕೇರಿಗಳಲ್ಲಿ ಇಂದು ದೇವಸ್ಥಾನಗಳು ನಾಯಿಕೊಡೆಗಳಂತೆ ಉದ್ಭವವಾಗುತ್ತಿವೆ. ತಮ್ಮ ಧರ್ಮವೇ ಸರ್ವಶ್ರೇಷ್ಠವೆಂಬ ಹುಸಿ ನಿಷ್ಠೆಯಿಂದ ಅನ್ಯಮತ ಸಂಸ್ಕೃತಿಗಳನ್ನು ಹೀಗಳೆದು ದ್ವೇಷದ ಬೀಜಗಳನ್ನು ಬಿತ್ತಿ ಬೆಳೆಯಲಾಗುತ್ತಿದೆ.

ಹೀಗೆ ಸರ್ವರಲ್ಲಿ ಸೋದರತ್ವವನ್ನು ಮೂಡಿಸಬೇಕಾಗಿದ್ದ ಧಾರ್ಮಿಕ ಸಂಸ್ಥೆಗಳು ಒಂದೆಡೆ ಅಸಮಾನತೆಯನ್ನೂ ದ್ವೇಷವನ್ನೂ ಬೆಳೆಸುತ್ತಿದ್ದರೆ, ಮತ್ತೊಂದೆಡೆ ವ್ಯಾಪಾರೀಕರಣದ ದಂಧೆಯಾಗಿ ಬದಲಾಗಿಬಿಟ್ಟಿವೆ.

ಇದಕ್ಕೆ ವ್ಯಕ್ತಿಯ ಮನೋ ನೆಲೆಯೇ ಮುಖ್ಯ ಕಾರಣವಾಗಿದೆಯೆಂದು ತೋರುತ್ತದೆ. ಅವನ ಚಿತ್ತಚಾಂಚಲ್ಯವೇ ಅವನನ್ನು ದಾಸನನ್ನಾಗಿ ಮಾಡಿಕೊಂಡುಬಿಟ್ಟಿದೆ. ತನ್ನ ಚಿತ್ತದ ಮೇಲೆ ಪ್ರಭುತ್ವವನ್ನು ಸಾಧಿಸುವ ದಿಕ್ಕಿನ ಸಾಧನೆಯ ಬಗ್ಗೆ ಅವನು ಚಿಂತೆ ಮಾಡುತ್ತಿರುವಂತೆ ತೋರುತ್ತಿಲ್ಲ. ಅವನ ಚಿಂತೆ ಏನಿದ್ದರೂ ತಾನು ನಂಬಿರುವ ಹುಸಿ ಸತ್ಯವನ್ನು ಸಾಕಾರ ಮಾಡುವ ಬಗೆಗಿನ ಅಶಾಂತಿ ಮಾರ್ಗದ ಬಗ್ಗೆ. ಅದನ್ನು ಬಿಟ್ಟರೆ ತನ್ನ ಬದುಕಿನ ಸುಖವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುವ ಸುಲಭದ ಮಾರ್ಗಗಳ ಬಗ್ಗೆ ಅವನ ಆಲೋಚನಾ ಲಹರಿ ಹರಿಯುತ್ತದೆ. ಹೀಗಾಗಿ ನಿರ್ಮಲ ಮನಸ್ಸು ಎಂಬುದು ಅವನಿಗೆ ಮರೀಚಿಕೆಯಾಗಿದೆ. ತನ್ನ ಲೌಕಿಕ ಬದುಕಿನಲ್ಲಿ ಸುಖ ಸೌಲಭ್ಯಗಳನ್ನು ಲಂಚ ರುಸುವತ್ತುಗಳನ್ನು ನೀಡಿ ಸಂಪಾದಿಸುವ ಹಾಗೆ ದೇವರಿಗೂ ಲಂಚ ರುಸುವತ್ತುಗಳನ್ನು ನೀಡಿ ಒಲಿಸಿಕೊಳ್ಳಬಹುದೆಂಬ ಮನಸ್ಥಿತಿಯಲ್ಲಿ ಬಹುಪಾಲು ಆಸ್ತಿಕ ಜನರಿದ್ದಾರೆ. ಈ ಮನಸ್ಥಿತಿಯಿರುವುದರಿಂದಲೇ ಇಂದು ಧಾರ್ಮಿಕ ಸಂಸ್ಥೆಗಳಿಗೆ ಮತ್ತು ದೇವಸ್ಥಾನಗಳಿಗೆ ಅಪಾರವಾದ ಧನರಾಶಿ ಹರಿದು ಬರುವಂತಾಗಿದೆ. ಆಸ್ತಿಕ ಜನರ ಈ ಮನಸ್ಥಿತಿಯನ್ನು ದುರುಪಯೋಗ ಪಡಿಸಿಕೊಂಡು ಶ್ರೀಮಂತರಾಗುತ್ತಿರುವ ಆಷಾಢಭೂತಿಗಳು ಕೂಡ ಅಧಿಕವಾಗುತ್ತಿದ್ದಾರೆ.

ದೇವರಲ್ಲಿ ನಂಬಿಕೆ ಇರುವ ಮಹಾಶಯರಿಗೆ ಬೇಕಾಗಿರುವುದು ಚಿತ್ತಶುದ್ಧಿ; ಹಣ ಐಶ್ವರ್ಯ ಆಡಂಬರಗಳನ್ನು ದೇವರು ಒಲ್ಲನೆಂಬ ತಿಳಿವಳಿಕೆ. ಒಮ್ಮೆ ವಿವೇಕಾನಂದರು ತಮ್ಮ ಗುರು ರಾಮಕೃಷ್ಣರನ್ನು 'ಭಕ್ತರು ದೇವರಿಗೆ ಏನನ್ನು ಅರ್ಪಿಸಬೇಕು? ದೇವರು ತಮ್ಮ ಭಕ್ತರಿಂದ ಏನನ್ನು ಅಪೇಕ್ಷಿಸುತ್ತಾನೆ?' ಎಂದು ಕೇಳುತ್ತಾರೆ. ಅವರ ದೃಷ್ಟಿಯಲ್ಲಿ ದೇವರಿಗೆ ಕಾಣಿಕೆ ರೂಪದಲ್ಲಿ ಧನಕನಕಗಳನ್ನು ಆಡಂಬರ ಅಬ್ಬರ ರೂಪದಲ್ಲಿ ಅರ್ಪಿಸುವ ಭಕ್ತರಿದ್ದರು ಎಂದು ತೋರುತ್ತದೆ. ಅದಕ್ಕೆ ಉತ್ತರವಾಗಿ ಗುರು ರಾಮಕೃಷ್ಣರು 'ತನ್ನ ಮಕ್ಕಳಿಗೆ ಎಲ್ಲವನ್ನು ನೀಡಿರುವ ದೇವರು ಅವರಿಂದ ಏನು ತಾನೆ ಬಯಸಿಯಾನು? ಮಕ್ಕಳಾದ ಭಕ್ತರಲ್ಲಿ ಇರುವುದೆಲ್ಲವೂ ಅವನು ನೀಡಿದ ಭಿಕ್ಷೆಯೇ ಸರಿ. ದೇವರು ತನ್ನ ಭಕ್ತರಿಂದ ಏನನ್ನಾದರೂ ಅಪೇಕ್ಷಿಸಿದರೆ ಅದು ಸಂಪೂರ್ಣವಾಗಿ ಆ ಭಕ್ತನದೇ ಆಗಿರಬೇಕು. ಭಕ್ತನ ಬಳಿ ಇದ್ದುದಾದರೆ - ಅದು ನಿರ್ಮಲವಾದ ಚಿತ್ತವೊಂದೇ. ಆ ನಿರ್ಮಲ ಚಿತ್ತವನ್ನು ಭಗವಂತನಿಗೆ ಅರ್ಪಿಸಿದ್ದೇ ಆದರೆ - ಅವನು ತೃಪ್ತ' ಎನ್ನುತ್ತಾರೆ.

ಆಧುನಿಕ ಧಾರ್ಮಿಕಾಚರಣೆಗಳಿಗೆ ರಾಮಕೃಷ್ಣರ ಮಾತಿನಲ್ಲಿ ಉತ್ತರವಡಗಿದೆ.

೨೦-೧೦-೨೦೧೧

# ನಮ್ಮಲ್ಲಿ ಬಹಳ ಜನ ಸಿದ್ಧಾರ್ಥರಿದ್ದಾರೆ!

ಜಗತ್ತಿನ ಸಾವುನೋವುಗಳಿಗೆ ಪರಿಹಾರಗಳನ್ನು ಶೋಧಿಸಲು ಅಂದು ಸಿದ್ಧಾರ್ಥ ನಡುರಾತ್ರಿಯಲ್ಲಿ ಮನೆ ತೊರೆದು ತನ್ನ ಮನದ ಬಾಗಿಲನ್ನು ತೆರೆದುಕೊಂಡನು. ಅದುವರೆಗೂ ಮುಚ್ಚಿಕೊಂಡಿದ್ದ ಅವನ ಕಣ್ಣುಗಳು ನಿಚ್ಚಳವಾಗಿ ತೆರೆದುಕೊಂಡು ಬದುಕನ್ನು ಅದರ ಆಳ ವಿಸ್ತಾರಗಳಲ್ಲಿ ನೋಡತೊಡಗಿದವು. ಆಗ ಅವನಿಗೆ ಅದುವರೆಗೂ ಬದುಕಿದ್ದ ಕತ್ತಲ ಕೂಪವೆಂಥದ್ದು ಎಂದು ಅರ್ಥವಾಗತೊಡಗಿತು. ನಿಜವಾದ ಜಗತ್ತು ಮತ್ತು ಅದರ ನಿಗೂಢಗಳು ನಾಲ್ಕು ಗೋಡೆಯ ಒಳಗೆ ಅರ್ಥವಿಸಿಕೊಳ್ಳಲು ಅಸಾಧ್ಯವೆಂದು ತಿಳಿಯಿತು. ನಮ್ಮ ಬಹುತೇಕ ನೋವುಗಳು ವ್ಯಕ್ತಿಮೂಲಜನ್ಯವೆಂದು ಅನ್ನಿಸಿದರೂ ಅವಕ್ಕೆ ಸಾಮಾಜಿಕ ಮುಖವಿರುತ್ತದೆಯೆಂದೂ, ಅವುಗಳನ್ನು ನಿವಾರಿಸಿಕೊಳ್ಳಲು ಸಮಾಜದಲ್ಲೇ ಔಷಧ ಶೋಧಿಸಬೇಕೆಂದೂ ಅವನು ಕಂಡುಕೊಂಡ. ಅದರ ಜೊತೆಗೆ ಸಮಾಜಜನ್ಯವೆಂದು ತೋರುವ ಬಹುಪಾಲು ಸಮಸ್ಯೆಗಳಿಗೆ ವ್ಯಕ್ತಿಮೂಲವಾದ ಹೋರಾಟ ಮತ್ತು ಪರಿಶ್ರಮದಿಂದ ಪರಿಹಾರ ಸಾಧ್ಯವೆಂದು ಅವನು ಅರ್ಥಮಾಡಿಕೊಂಡ. ಅಂದರೆ ವ್ಯಕ್ತಿ ಮತ್ತು ಸಮಾಜ ಪರಸ್ಪರ ಅವಲಂಬಿಗಳು. ಒಂದರ ಸುಖದುಃಖಗಳು ಮತ್ತೊಂದರ ಉತ್ಪನ್ನಗಳಂತೆ ಮಾರ್ಪಡುತ್ತವೆ; ಒಂದು ಮತ್ತೊಂದನ್ನು ಬಿಂಬಿಸುತ್ತಲೋ ಅವಲಂಬಿಸುತ್ತಲೋ ಜೀವಿಸುತ್ತಿರುತ್ತವೆ. ಅಂದರೆ ಮನೆಯ ಒಳವರ್ತುಲ ಜಗತ್ತು ಆಗಲಾರದು. ಅದೇರೀತಿ ಹೊರ ಜಗತ್ತು ಅತ್ಯಂತ ಭಿನ್ನವೆಂದು ತೋರಿದರೂ ಅದು ಅನೇಕ ಮನೆಗಳ ಆಸಕ್ತಿ ಅಭಿವ್ಯಕ್ತಿಗಳ ರೂಪವೆಂದೇ ತಿಳಿಯಬೇಕು.

ಆದರೆ ಮನೆಯೆಂಬುದು ಸುಖವೆಂದೂ, ಹೊರಜಗತ್ತೆಂಬುದು ಸವಾಲುಗಳ ಪರಿಶ್ರಮಗಳ ಮಹಾಪೂರವೆಂದು ತಿಳಿದು ಅದರಿಂದ ಪಲಾಯನ ಮಾಡುವ ಪ್ರವೃತ್ತಿ ಬಹುಜನರಲ್ಲಿರುತ್ತದೆ. ಇದೊಂದು ಬಗೆಯ ಭ್ರಮೆಯ ತಿಳಿವಳಿಕೆ. ಈ ಭ್ರಮೆಯಲ್ಲಿದ್ದವನು ಶುದ್ಧೋದನ. ಆದುದರಿಂದಲೇ ಅವನು ತನ್ನ ಮಗ ಸಿದ್ಧಾರ್ಥ ರೋಗರುಜಿನ ಮುಂತಾದ ನೋವುಕಾರಕ ನಿಮಿತ್ತಗಳಿಂದ ದೂರವಿರಬೇಕೆಂದು ಅವನನ್ನು ಮನೆಯಲ್ಲೇ ಕೂಡಿಹಾಕಿದ, ಜೀವನದ ಕಟುವಾಸ್ತವ ಸತ್ಯಗಳು ಸಿದ್ಧಾರ್ಥನ ಗಮನಕ್ಕೆ ಬರಬಾರದೆಂದು ಶ್ರಮವಹಿಸಿದ. ಅದು ಅವನು ಮಾಡಿದ ತಪ್ಪು ತಿಳಿವಳಿಕೆಯೆಂಬುದು ಅವನಿಗೆ ಅರ್ಥವಾಗಿದ್ದೇ ಸಿದ್ಧಾರ್ಥ ಗೃಹ ತ್ಯಾಗಮಾಡಿ ಹೊರ ನಡೆದ ನಂತರವೇ. ಇಲ್ಲಿ ಶುದ್ಧೋದನ ನಮಗೆ ಜೀವನದ ಅನೇಕ ವ್ಯಂಗ್ಯಗಳಿಗೆ ಪ್ರತೀಕನಾಗುತ್ತಾನೆ. ಸತ್ಯವೆಂದರೆ ಏನೆಂಬುದು ತಿಳಿದೂ ಅದರಿಂದ ಬದುಕನ್ನು ಪಲಾಯನಗೈಯಲು ಯತ್ನಿಸುವುದು ವಿಫಲ ಪ್ರಯತ್ನವೆಂಬುದನ್ನು ಅರಿಯದ ಮನಸ್ಥಿತಿಗೆ ಅವನು ಸಂಕೇತವಾಗಿ

ಅಂತ್ಯದಲ್ಲಿ ವಿಷಾದ ನಾಯಕನಂತೆ ತೋರುತ್ತಾನೆ. ಶುದ್ಧೋದನನಿಗೆ ವಾಸ್ತವದ ಅರಿವಿದ್ದೂ ಮಗನನ್ನು ಅದರಿಂದ ದೂರವಿಡಲು ಅವನು ಮಾಡಿದ ಪ್ರಯತ್ನವೇ ಮಗನನ್ನು ಕಳೆದುಕೊಳ್ಳಲು ಕಾರಣವಾಯ್ತೆಂಬುದು ನಮಗೆ ಈಗ ಮುಖ್ಯವಾಗಿ ಕಾಣುತ್ತದೆ. ಸಿದ್ಧಾರ್ಥ ಲೋಕ ಚಿಂತಕನೂ, ಅವನು ಆಂತರ್ಯದಲ್ಲಿ ಸಮಾಜಮುಖಿಯೂ ಆದ್ದರಿಂದ ಬದುಕಿನ ನೋವು ಕಷ್ಟಕಾರ್ಪಣ್ಯಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಗೃಹತ್ಯಾಗಮಾಡಿ ಹೊರನಡೆದು, ತನ್ನ ಐಹಿಕ ಸಂಬಂಧಗಳನ್ನೆಲ್ಲವನ್ನೂ ಕಳೆದುಕೊಂಡು ಬುದ್ಧನಾದ. ಅವನಿಗೆ ಹೊರಜಗತ್ತು ಹೊಸ ಮನೆಯಾಯಿತು. ಆ ಜಗತ್ತಿನ ಎಲ್ಲಾ ಸಮಸ್ಯೆಗಳನ್ನು ಮತ್ತು ಅದರ ಸುತ್ತಲು ಆವರಿಸಿಕೊಂಡಿರುವ ನೋವುಗಳನ್ನು ಹೇಗೆ ಪರಿಹರಿಸಬೇಕೆಂಬುದರಲ್ಲೇ ತನ್ನ ಜೀವಿತದ ಕಾಲವನ್ನೆಲ್ಲ ಅವನು ಕಳೆದ. ಏಕೆಂದರೆ ಅವನು ಬುದ್ಧನಾಗಿದ್ದ, ನಿಜವಾದ ಅರ್ಥದಲ್ಲಿ ಅವನು ಬುದ್ಧನಾಗಿದ್ದ.

ಸಮಸ್ಯೆಯಿರುವುದೇ ಇಲ್ಲಿ. ನಮ್ಮ ಬಹುಪಾಲು ತಂದೆ ತಾಯಿಗಳು ಶುದ್ಧೋದನ ಪ್ರವೃತ್ತಿಯವರೇ ಆಗಿರುತ್ತಾರೆ. ತಮ್ಮ ಮಕ್ಕಳು ಕಷ್ಟವನ್ನೇ ಪಡಬಾರದು ಎಂದು ಶ್ರೀಮಂತಿಕೆಯ ಸುಪ್ಪತ್ತಿಗೆಯ ವರ್ತುಲದಲ್ಲಿ ಮಕ್ಕಳನ್ನು ಬೆಳೆಸುತ್ತಾರೆ. ಅದಕ್ಕಾಗಿ ಅವರು ಹೊರಜಗತ್ತಿನ ಸುಖವನ್ನು ಸೂರೆಮಾಡಿ ಅನೇಕ ಅನೈತಿಕ ಮಾರ್ಗಗಳಲ್ಲಿ ಸಂಪತ್ತನ್ನು ಸಂಗ್ರಹಿಸುತ್ತಾರೆ. ಸುಖವೆಂಬುದು ಮನೆಯ ನಾಲ್ಕು ಗೋಡೆಗಳ ನಡುವೆಯೇ ಸಾಧಿತವಾಗುತ್ತದೆಯೆಂಬ ಭ್ರಮೆಯಲ್ಲಿ ಮುಳುಗುತ್ತಾರೆ. ತಮ್ಮ ಮಕ್ಕಳು ಸದಾ 'ಸಿದ್ಧಾರ್ಥ'ರಾಗಿಯೇ ಉಳಿಯಬೇಕೆಂದು ಅದಕ್ಕಾಗಿ ಶ್ರಮಿಸುತ್ತಾರೆ. ಬದುಕಿನಲ್ಲಿ ತಂದೆ ತಾಯಿಗಳ ಹಂಬಲದ ಈ ಪರಿಯಿಂದ ಬಹುತೇಕ ಮಕ್ಕಳು 'ಬುದ್ಧ'ರಾಗುವ ಅವಕಾಶದಿಂದ ವಂಚಿತರಾಗಿ 'ಸಿದ್ಧಾರ್ಥ'ರಾಗಿಯೇ ಉಳಿದುಬಿಡುತ್ತಾರೆ. ಏಕೆಂದರೆ ಎಲ್ಲರಲ್ಲೂ ಬುದ್ಧತ್ವದ ಒತ್ತಡವಿರುವುದಿಲ್ಲ.

ನಾವು ಸದಾ ಈ ಜನಪದ ಸೂಕ್ತಿಯನ್ನು ನೆನಪಿಡಬೇಕು : 'ಬೀದಿ ಮಕ್ಕಳು ಬೆಳೆದೊ; ಕೋಣೆ ಮಕ್ಕಳು ಕೊಳೆತೊ.'

೦೩-೧೧-೨೦೧೧

# ಶ್ರದ್ಧೆ - ಅಂಧ ಶ್ರದ್ಧೆ

ನಾವು ಮಾಡುವ ಪ್ರತಿಯೊಂದು ಕೆಲಸದಲ್ಲೂ, ಶ್ರದ್ಧೆಯಿರಬೇಕೆಂಬ ಮಾತಿನಲ್ಲಿ ಅತಿಶಯತೆಯೇನಿಲ್ಲ. ಅದು ಬದುಕಿನ ಪ್ರತಿ ಕ್ರಿಯೆಯಲ್ಲೂ ಇರಬೇಕಾದುದೇ. ಅದಿಲ್ಲದೆ ನಾವು ಮಾಡುವ ಕೆಲಸಕ್ಕೆ ಅರ್ಥವಾಗಲೀ ಗುರಿಯಾಗಲೀ ಇರುವುದಿಲ್ಲ. ಅಂಥ ದುಡಿಮೆಗೆ ಬದ್ಧತೆಯಾಗಲೀ ಪ್ರೀತಿಯ ಲೇಪನವಾಗಲೀ ಇರುವುದಿಲ್ಲ. ನಾವು ನಂಬಿರುವ ತತ್ತ್ವಗಳಿಗೆ ಪೂರಕವಾದ ಕ್ರಿಯೆಗಳಲ್ಲಿ ಗಾಢವಾದ ಶ್ರದ್ಧೆ ಸಹಜವಾಗಿ ಇರುತ್ತದೆ. ನಾವು ನಮ್ಮ ದೈನಂದಿನ ಅಗತ್ಯಗಳನ್ನು ಪೂರೈಸುವ ಸಾಮಾನ್ಯ ಕೆಲಸಗಳಿಂದ ಹಿಡಿದು ಕೌಟುಂಬಿಕ - ಸಾಮಾಜಿಕ ಮೌಲ್ಯಗಳನ್ನು ಎತ್ತಿಹಿಡಿಯುವ ಜವಾಬ್ದಾರಿಯುತ ಕೆಲಸಗಳವರೆಗೆ ಶ್ರದ್ಧೆಯನ್ನು ತೋರಲೇಬೇಕು. ಸಾಮಾನ್ಯರು ವೈಯಕ್ತಿಕ ಆಸಕ್ತಿಗಳ ಪೂರೈಕೆಯ ಕೆಲಸಗಳಿಗೆ ತೋರುವ ಆಸಕ್ತಿಯನ್ನು ಸಮುದಾಯದ ಕೆಲಸಗಳಿಗೆ ತೋರದೆ ಇರಬಹುದು. ತಮ್ಮ ಹಿತಾಸಕ್ತಿಯನ್ನು ದಕ್ಕಿಸಿಕೊಳ್ಳುವ ಕೆಲಸದಲ್ಲೇ ಅಪಾರ ಶ್ರದ್ಧೆ ತೋರಬಹುದು. ಇಂಥವರಿಗೆ ಸಮುದಾಯದ ಸುಖದಲ್ಲಿ ಅಥವಾ ನೋವಿನಲ್ಲಿ ತಮ್ಮ ಪಾಲೂ ಇದೆ ಎಂಬುದು ಹೃದ್ಗತವಾಗದೆ ಹೋಗಬಹುದು. ಆದರೆ ಸಮುದಾಯ ಸುಖ ಅಥವಾ ದುಃಖ ತಮ್ಮ ವೈಯಕ್ತಿಕ ಬದುಕನ್ನು ಆಪೋಶನ ತೆಗೆದುಕೊಳ್ಳುತ್ತದೆ ಎಂಬ ಸತ್ಯ ಅರಿವಾಗುವುದರೊಳಗೆ ಕಾಲ ಮಿಂಚಿರುತ್ತದೆ.

ಸಮುದಾಯದ ಹಿತದ ಕೆಲಸಗಳಲ್ಲಿ ಸದಾ ಶ್ರದ್ಧೆಯನ್ನು ಹೊಂದಿ ದುಡಿಯುವ ವ್ಯಕ್ತಿ ಲೌಕಿಕ ಕಣ್ಣುಗಳಿಗೆ ಹುಚ್ಚನಂತೆ ವಿಚಿತ್ರವಾಗಿ ಕಾಣುತ್ತಾನೆ. ಸಾಕ್ರೆಟೀಸ್, ಗೆಲಿಲಿಯೋ, ಬುದ್ಧ, ಮಹಾತ್ಮ ಗಾಂಧಿಯಂಥವರು! ಅವರ ಸುತ್ತಮುತ್ತಲಿನ ಲೌಕಿಕರ ದೃಷ್ಟಿಯಲ್ಲಿ ಅಪ್ಪಟ ಕೆಲಸಕ್ಕೆ ಬಾರದವರೇ! ಆದರೆ ಅವರ ಶ್ರದ್ಧೆ ವ್ಯಕ್ತಿನೆಲೆಯನ್ನು ಮೀರಿ ಸಮುದಾಯದ ಭೌತಿಕ ಮತ್ತು ಬೌದ್ಧಿಕ ಅಭ್ಯುದಯದ ಬೆಳಕನ್ನು ಮೀರಿ ನಿಲ್ಲುವ ದುಡಿಮೆಯಲ್ಲಿತ್ತು. ಆದುದರಿಂದಲೇ ಅವರು ಕಾಲವಾದ ನಂತರವೂ ಬದುಕಿ ವರ್ತಮಾನದ ದಾರಿದೀಪವಾಗುತ್ತಿದ್ದಾರೆ. ಆದರೆ ವ್ಯಕ್ತಿ ನೆಲೆಯಲ್ಲಿ ಅಪಾರ ಶ್ರದ್ಧೆಯಿಟ್ಟು ದುಡಿದು ಕೇವಲ ತಮ್ಮ ಸುಖಕ್ಕಾಗಿಯೇ ಬದುಕಿದವರು, ನೀರ ಮೇಲಣ ಗುಳ್ಳೆಯಂತೆ ಅಂದಂದೇ ಮರೆಯಾಗುತ್ತಾರೆ! ಇದು ಕಟುಸತ್ಯವಾದರೂ ಮಾನವ ಅರ್ಥ ಮಾಡಿಕೊಳ್ಳಲಾಗದ ಬದುಕಿನ ಅತಿ ದೊಡ್ಡ ವ್ಯಂಗ್ಯವಾಗಿದೆ.

ಕುವೆಂಪು ಹೇಳುವಂತೆ ಭೂತವನ್ನು ಶೋಧಿಸಿ ವರ್ತಮಾನದ ಅಗತ್ಯತೆಗೆ ತಕ್ಕಂತೆ ಅದನ್ನು ಮಾರ್ಪಡಿಸುವ, ಒಗ್ಗಿಸಿಕೊಳ್ಳುವ ಕೆಲಸದಲ್ಲಿ ನಮ್ಮ ಶ್ರದ್ಧೆಯಿರಬೇಕು. ಹೊಸದನ್ನು ಶೋಧಿಸುವ, ಆ ಮೂಲಕ ಕಂಡುಕೊಂಡ ಸತ್ಯವನ್ನು ಅರಗಿಸಿಕೊಳ್ಳುವ ಮತ್ತು ಆ ಸತ್ಯವನ್ನು

ತನ್ನ ಸುತ್ತಮುತ್ತಲಿನ ಸಮಾಜಕ್ಕೆ ಅರ್ಥೈಸಿಸುವ ಕೆಲಸದಲ್ಲಿ ಅಪಾರವಾದ ಶ್ರದ್ಧೆಯ ದುಡಿಮೆಯಿರಬೇಕು. ಏಕೆಂದರೆ ನಮ್ಮ ಸಮಾಜ ಭೂತಕಾಲದ ಮೌಲ್ಯಗಳನ್ನು ಒಪ್ಪಿ ಅಪ್ಪಿಕೊಳ್ಳುವಲ್ಲಿ ತೋರುವ ಶ್ರದ್ಧೆಯನ್ನು ಸತ್ಯದ ಹಾದಿಯ ಬೆಳಕುಗಳಲ್ಲಿ ತೋರುವುದಿಲ್ಲ. ಏಕೆಂದರೆ ಒಪ್ಪಿತ ಮೌಲ್ಯಗಳನ್ನು ಒಪ್ಪಿ ನಡೆಯುವುದರಲ್ಲಿ ಸಂಘರ್ಷವಿರುವುದಿಲ್ಲ. ಅದರಲ್ಲಿ ಲಾಭವಿದೆ. ಆಧುನಿಕ ಸತ್ಯಗಳು ಪ್ರಮಾಣವನ್ನು ಬೇಡುತ್ತವೆ; ಸಾಕ್ಷಿ ಪುರಾವೆಗಳನ್ನು ಕೇಳುತ್ತವೆ. ಸತ್ಯದ ಬೆಳಕು ಸಮಾನತೆಯನ್ನು ಸೂಸುತ್ತದೆ. ಅದಕ್ಕೆ ಜನಾಂಗ, ಜಾತಿ, ಮತ ಮತ್ತು ಲಿಂಗಗಳ ತಾರತಮ್ಯವಿಲ್ಲ. ಅದು ಕಾಯಕದ ಅಸಮಾನತೆಯನ್ನು ಲಕ್ಷಿಸುವುದಿಲ್ಲ; ಭೇದವನ್ನು ಕಾಣುವುದಿಲ್ಲ. ಆದರೆ ಒಪ್ಪಿತ ಮೌಲ್ಯಗಳು ಕೇವಲ ನಂಬಿಕೆಯನ್ನು ಕೇಳುತ್ತವೆ; ಆ ನಂಬಿಕೆಯಲ್ಲಿ ಶ್ರದ್ಧೆಯಿಡುವಂತೆ ಹೇಳುತ್ತವೆ. ಅವು ಪ್ರಶ್ನೆ ಮಾಡುವುದನ್ನು ಸಹಿಸುವುದಿಲ್ಲ. ಅವು ನಿರೀಕ್ಷೆ ಮಾಡುವುದು ಕೇವಲ ಅಂಧಶ್ರದ್ಧೆಯನ್ನು!

ಈ ಅಂಧಶ್ರದ್ಧೆಯೆನ್ನುವುದು ವ್ಯಕ್ತಿಯನ್ನು ಯಾವ ಮಟ್ಟಕ್ಕೆ ಕರೆದೊಯ್ಯುತ್ತದೆಯೆಂದರೆ - ಅವೈಜ್ಞಾನಿಕ - ಅವೈಚಾರಿಕ ಒಪ್ಪಿತ ಮೌಲ್ಯಗಳು ಹೇಳುವ ಕೆಲಸವನ್ನು ಮಾಡುವುದರಲ್ಲಿ ಸಮಾಜಕ್ಕೆ ಹಾಗೂ ತನಗೆ ಒಳ್ಳೆಯದಾಗುತ್ತದೆಯೆಂಬ ಗಾಢ ನಂಬಿಕೆ ಅವನಲ್ಲಿ ಬೆಳೆದುಬಿಟ್ಟಿರುತ್ತದೆ. ಆದುದರಿಂದಲೇ ಅವನು ಅವುಗಳು ಹೇಳುವ ಮೌಲ್ಯಗಳನ್ನು ಈಡೇರಿಸಲು ನೂರಾರು ಜನರನ್ನು ಬಲಿತೆಗೆದುಕೊಳ್ಳಲು, ಸಾವಿರಾರು ಜನರ ಬದುಕಿನ ಸೌಖ್ಯವನ್ನು ಇಲ್ಲವಾಗಿಸಲು ಮುಂದಾಗುತ್ತಾನೆ. ಅಷ್ಟೇ ಅಲ್ಲ, ಆ ಕಾಯಕದಲ್ಲಿ ಹುತಾತ್ಮನಾಗಲು ಸಿದ್ಧನಾಗುತ್ತಾನೆ. ಅವನು ಎಂಥ ಹುಸಿ - ಅಂಧಶ್ರದ್ಧೆಯಲ್ಲಿ ಬದುಕುತ್ತಿರುತ್ತಾನೆಂದರೆ - ಇಂಥ ಮಾನವ ವಿರೋಧಿ ಅಸಮಾನತಾ ಸಮಾಜ ರೂಪಿಸುವ ಕೆಲಸದಲ್ಲಿ ತಾನು ಬಲಿಯಾದರೆ - ಸ್ವರ್ಗದಲ್ಲಿ ತನಗಾಗಿ ಕಪ್ಪುಕಂಗಳ ಕಪ್ಪುಕೂದಲ ಸುರಸುಂದರಾಂಗಿಯರು ಕಾದಿರುತ್ತಾರೆಂದು ನಂಬುತ್ತಾನೆ. 'ಗೆದ್ದರೆ ಜಯ, ಸತ್ತರೆ ವೀರ ಸ್ವರ್ಗ' ಎಂಬ ಹುಸಿ ನಂಬಿಕೆಯಲ್ಲಿ ಶ್ರದ್ಧೆಯಿಟ್ಟು ಮತಾಂಧನಾಗಲೂ ಅವನು ಹಿಂಜರಿಯುವುದಿಲ್ಲ. ಇದು ಬದುಕಿನ ವಿಷಾದಮಯ ಅಂತ್ಯವೆಂದು ಅವನಿಗೆ ಅನಿಸುವುದೂ ಇಲ್ಲ.

೧೭-೧೧-೨೦೧೧

# ಪ್ರಾಪಂಚಿಕರಾಗದಿರಿ

ಶ್ರೀರಾಮಕೃಷ್ಣರು ವ್ರತನಿಯಾಮಾದಿಗಳನ್ನು ಪಾಲಿಸುವುದನ್ನು ಒಪ್ಪುತ್ತಿದ್ದರು. ಅವುಗಳಿಂದ ಬದುಕಿಗೊಂದು ಶಿಸ್ತು ಬರುತ್ತದೆ, ದೇಹದ ಆರೋಗ್ಯ ವೃದ್ಧಿಸುತ್ತದೆಯೆಂಬ ಆಶಯವಿರಬಹುದು. ಅದರೊಡನೆ ದೈವೀಶಕ್ತಿಯ ಬಗ್ಗೆ ಅವರಿಗೆ ಅಚಲವಾದ ನಂಬಿಕೆ. ವ್ರತನಿಯಮಾದಿಗಳ ಮೂಲಕ ದೇವರ ಕೃಪೆಗೆ ಪಾತ್ರವಾಗಬಹುದೆಂಬ ನಂಬಿಕೆ ಅವರಿಗಿತ್ತು ಎಂಬುದರಲ್ಲಿ ಸಂಶಯವಿಲ್ಲ. ಅದರಲ್ಲೂ ಸನ್ಯಾಸಿಗಳು ಈ ಶಿಸ್ತುಬದ್ಧ ನಿಯಮಗಳ ಪಾಲನೆಯಲ್ಲಿರಬೇಕೆಂದು ಆಶಿಸುತ್ತಿದ್ದರು. ಆದರೆ, ಶ್ರೀರಾಮಕೃಷ್ಣರು ಕರ್ಮಠರಾಗಿರಲಿಲ್ಲ. ಪ್ರೀತಿಪೂರ್ವಕ ನಂಬಿಕೆಯಿಲ್ಲದ ವ್ರತಗಳು ಅರ್ಥಹೀನವೆಂದು ಅವರು ಮನಗಂಡಿದ್ದರು. ಕೇವಲ ಢಂಬಾಚಾರದ ವ್ರತಗಳು ಸಮಾಜವನ್ನು ಟೊಳ್ಳುಗೊಳಿಸುತ್ತವೆಯೆಂದು ಅವರು ತಿಳಿದಿದ್ದರು. ಸಮಾಜದಲ್ಲಿರುವ ಅಸಂಖ್ಯಾತ ಲೌಕಿಕರಿಗೆ, ಅದರಲ್ಲೂ ಗೃಹಸ್ಥರಿಗೆ ಈ ನಿಟ್ಟಿನ ಕಠೋರ ನಿಯಮಗಳ ಆವಶ್ಯಕತೆಯಿಲ್ಲವೆಂದು ಅವರು ತಿಳಿಸಿದ್ದಾರೆ. 'ಕಠೋರ ನಿಯಮಗಳು ಗೃಹಸ್ಥರಿಗೆ ಸಲ್ಲ. ಅವರು ಕುಟುಂಬದ ಮಧ್ಯದಲ್ಲಿ ಇದ್ದೂ ದೇವರ ಮೇಲೆ ಮನಸಿಟ್ಟು ಅನಾಸಕ್ತರಾಗಿರಬಹುದು. ಅವರು ಪ್ರಪಂಚದಲ್ಲಿರಬೇಕು, ಆದರೆ ಪ್ರಾಪಂಚಿಕರಾಗಿರಬಾರದು.' ದೈವ ಸಾಧನೆಯಲ್ಲಿ ವ್ಯಕ್ತಿ ಆಚರಿಸಬೇಕಾದ ವ್ರತ ನಿಯಮಾದಿಗಳು ಕಠೋರವಾಗಿದ್ದಷ್ಟು ಅವು ವ್ಯಕ್ತಿಯಲ್ಲಿ ಸಹನಾಶಕ್ತಿಯನ್ನು ಮೂಡಿಸುತ್ತವೆ ಎಂಬ ಆಶಯವಿದ್ದರೂ, ದೇಹ ಮತ್ತು ಮನಸ್ಸುಗಳನ್ನು ವೃಥಾ ದಂಡಿಸುವುದರಿಂದ ದೈವ ಸಾಕ್ಷಾತ್ಕಾರವಾಗುತ್ತದೆ ಎಂಬುದು ಕೂಡ ಒಂದು ಭ್ರಮೆಯಷ್ಟೆ! ಈ ದೇಹ ಮತ್ತು ಮನಸ್ಸುಗಳ ದಂಡನೆಯನ್ನು ಕನ್ನಡದ ವಚನಕಾರರು ಮತ್ತು ದಾಸರು ಈ ಮೊದಲೇ ವಿಡಂಬಿಸಿರುವುದು ನಮಗೆ ತಿಳಿದ ವಿಷಯವೇ ಆಗಿದೆ.

ಶ್ರೀ ರಾಮಕೃಷ್ಣರು ಸ್ವತಃ ಗೃಹಸ್ಥರು. ಗೃಹಸ್ಥರಾಗಿದ್ದೂ ಬ್ರಹ್ಮಚರ್ಯೆಯಂಥ ಕಠೋರ ನಿಯಮವನ್ನು ಪಾಲಿಸಿದವರು. (ಆದರೆ ತಮ್ಮ ಪತ್ನಿಯನ್ನೂ ಪಾಲಿಸುವಂತೆ ಸಾತ್ತ್ವಿಕ ಒತ್ತಡ ಹೇರಿ ಒಪ್ಪಿಸಿದ್ದು ಎಂದಿಗೂ ಪ್ರಶ್ನಾರ್ಹ ನಡೆಯಾಗೇ ಉಳಿಯುತ್ತದೆ. ಸಮನ್ವಯ - ಪೂರ್ಣದೃಷ್ಟಿ - ಸಮಾನತೆಗಳನ್ನು ಎತ್ತಿಹಿಡಿಯುವ ಮೌಲ್ಯಗಳ ಪ್ರತಿಪಾದಕರಾದ ಇವರು ಲಿಂಗಮೂಲ ಹಕ್ಕನ್ನು ಧಾರ್ಮಿಕ ಪ್ರಭಾವಳಿಗಳಿಂದ ಹತ್ತಿಕ್ಕುವ ಕೆಲಸ ಮಾಡಿದರೆಂದೇ ಹೇಳಬೇಕಾಗುತ್ತದೆ.) ಅದರ ಕಷ್ಟ ಎಂಥದ್ದೆಂಬ ಅರಿವು ಅವರಿಗಿತ್ತು. ಆ ಕಾರಣದಿಂದಲೇ ಗೃಹಸ್ಥರಿಗೆ ಅಂಥ ಕಠೋರ ನಿಯಮಗಳು ಸಲ್ಲದು ಎನ್ನುತ್ತಾರೆ. ಬಹುಶಃ ರಾಮಕೃಷ್ಣರ ಸಮಾಜ ಮುಖೀ ನಿಲುವು ಇದರಿಂದ ವ್ಯಕ್ತವಾಗುತ್ತದೆ. ಸನ್ಯಾಸಿಯಾದವನು ಕಠೋರ ನಿಯಮಗಳನ್ನು

ಪಾಲಿಸಬೇಕು. ಏಕೆಂದರೆ ಅವನು ಪರಿತ್ಯಾಗಿ - ಅವನ ಗುರಿ ಅಧ್ಯಾತ್ಮಸಾಧನೆ. ಆದರೆ ಸಂಸಾರದಲ್ಲಿರಬೇಕಾದವನಿಗೆ ಹೊಣೆಗಾರಿಕೆಗಳು ಅಧಿಕ. ಕುಟುಂಬ, ಗ್ರಾಮ ಮತ್ತು ಸಮಾಜಗಳ ವ್ಯಾಪ್ತಿಯಲ್ಲಿ ಅವನು ಜವಾಬ್ದಾರಿಯುತ ಪಾಲುದಾರಿಕೆಯನ್ನು ನಿರ್ವಹಿಸಬೇಕಾಗುತ್ತದೆ. ಅವನು ಪಾಲಕ. ಕುಟುಂಬದಿಂದ ಹಿಡಿದು ಸಂಸಾರತ್ಯಾಗ ಮಾಡಿರುವ ಸನ್ಯಾಸಿಗಳವರೆಗೆ ಅವನ ಪಾಲನೆಯ ವ್ಯಾಪ್ತಿಯಲ್ಲಿರಬೇಕಾಗುತ್ತದೆ. ಹೀಗಾಗಿ 'ಸಂಸಾರ'ದ ಬಗೆಗಿನ ನಿರಾಸಕ್ತಿ ಅವನಿಗೆ ಸಲ್ಲದು. ಈ 'ಸಂಸಾರ'ದ ಅಭ್ಯುದಯದ ಬಗೆಗೆ ಸದಾ ಅವನು ಆಸಕ್ತನಾಗಿರಬೇಕು.

ಸಮಾಜದಲ್ಲಿರುವ ಅಸಮಾನತೆಯನ್ನು, ಭೇದಭಾವವನ್ನು ಹೋಗಲಾಡಿಸಿ ಮನುಜ ಧರ್ಮವನ್ನು ಎತ್ತಿಹಿಡಿಯುವ ಅಮೂಲ್ಯ ಕಾಯಕದ ಗುರಿ ಸನ್ಯಾಸಿಯದಾಗಬೇಕು. ಕೇವಲ ತನ್ನ ಆತ್ಮೋನ್ನತಿಯೇ ಅಂತಿಮಗುರಿಯೆಂದು ಭಾವಿಸುವಾತ ಸನ್ಯಾಸಿಯೆನ್ನಿಸಿಕೊಳ್ಳಲಾರ. ನಮಗೆ ಈ ನಿಟ್ಟಿನಲ್ಲಿ ಶ್ರೇಷ್ಠ ಮಾದರಿಯೂ ನಿದರ್ಶನವೂ ಆಗಿ ನಿಂತಿರುವ ಧೀರ ಸಂನ್ಯಾಸಿಯೆಂದರೆ - ವಿವೇಕಾನಂದರು. ಅವರು ಸನ್ಯಾಸತ್ವಕ್ಕೆ ಹೊಸ ಭಾಷ್ಯ ಬರೆದವರು. ಅವರನ್ನು ಸಮಾಜಮುಖೀ, ನಿಸ್ವಾರ್ಥಮುಖೀ ಸನ್ಯಾಸಿಯೆಂದೇ ಕರೆಯಬೇಕು. ಅವರು ಗೃಹಸ್ಥ ಧರ್ಮದಷ್ಟೇ ಹೊಣೆಗಾರಿಕೆಯ ಸ್ವರೂಪವನ್ನು ಸನ್ಯಾಸಕ್ಕೆ ದೊರಕಿಸಿಕೊಟ್ಟರು. ಸನ್ಯಾಸವನ್ನು ಸ್ವೀಕರಿಸಿಯೂ ಪ್ರಪಂಚದಲ್ಲಿದ್ದರು. ಜನಪರವಾದ ಚಿಂತನೆಯನ್ನು ನಡೆಸಿದರು. ಜನಪರ ಚಿಂತನೆಯ ಹೋರಾಟದಲ್ಲಿ ಆತ್ಮೋದ್ಧಾರದ ದಾರಿಯಿದೆಯೆಂದು ಅರ್ಥ ಮಾಡಿಕೊಂಡಿದ್ದರು.

ಶ್ರೀ ರಾಮಕೃಷ್ಣರು ಗೃಹಸ್ಥರನ್ನು ಕುರಿತು 'ಪ್ರಪಂಚದಲ್ಲಿರಬೇಕು, ಆದರೆ ಪ್ರಾಪಂಚಿಕರಾಗಬಾರದು' ಎಂದು ಹೇಳಿರುವ ಮಾತಿನಲ್ಲಿ ಲೋಕದಲ್ಲಿ ವ್ಯಕ್ತಿಯು ಬದುಕಿ ಬಾಳಬೇಕಾದ ಪರಿಯ ಸೂಚನೆಯನ್ನು ಕಾಣಬಹುದು. ವ್ಯಕ್ತಿಯ ಅಸ್ತಿತ್ವ ಇರುವುದೇ ಈ ಪ್ರಪಂಚದಲ್ಲಿ! (ಇದು ಕೇವಲ ಗೃಹಸ್ಥನಿಗೆ ಮಾತ್ರ ಅನ್ವಯಿಸುವ ಮಾತಲ್ಲ. ಸನ್ಯಾಸಿಗೂ ಅನ್ವಯವಾಗುವ ಮಾತು) ಅದನ್ನು ಬಿಟ್ಟು ಬೇರೆ ಜಗತ್ತು ಅವನಿಗಿಲ್ಲ. ಅವನೆಲ್ಲಾ ಸುಖ ಸಂಪತ್ತುಗಳು, ಹೋರಾಟ ಸಾಧನೆಗಳು, ಅಭಿವ್ಯಕ್ತ ಸ್ವರೂಪಗಳು ಈ ನೆಲದ ಮೇಲೆಯೇ ನಡೆಯಬೇಕು. ಅವನ ತತ್ತ್ವಸಿದ್ಧಾಂತ ಜಿಜ್ಞಾಸೆಗಳು, ಮೇಲು ಕೀಳೆಂಬ ಹಾರಾಟಗಳು ಜನರ ನಡುವೆಯೇ ನಡೆಯಬೇಕು. ಈ ಎಲ್ಲ ಸಾಧನೆಗಳಿಗಾಗಿ ನಡೆಸುವ ಮನುಷ್ಯನ ಕ್ರಿಯೆಗಳು ಶುದ್ಧಾಂಗ ಶುದ್ಧ ಜನಪರವಾಗಿರಬೇಕು. ಅವು ಎಂದೂ ಸ್ವಾರ್ಥಮೂಲವಾಗಿರಬಾರದು ಎಂಬುದು ಶ್ರೀ ರಾಮಕೃಷ್ಣರ ಇಂಗಿತ. ಅದು ಬಿಟ್ಟು ವ್ಯಕ್ತಿ ಸ್ವಾರ್ಥಿಯಾದರೆ (ಪ್ರಾಪಂಚಿಕನಾದರೆ) ಸಮಾಜಕ್ಕೆ ಅಪಾರ ಹಾನಿ; ಅವನಿಗೇ ತಿಳಿಯದಂತೆ ಅವನೂ ನಾಶವಾಗುತ್ತಾನೆ.

ಶ್ರೀ ರಾಮಕೃಷ್ಣರು ಶ್ರೀಗಂಧವಿದ್ದ ಹಾಗೆ. ಅವರೊಡನೆ ಗುದ್ದಾಡುವುದರಲ್ಲಿ ಆನಂದವಿದೆ.

೦೧-೧೨-೨೦೧೧

# ನಾವು ಸುಳ್ಳನ್ನು ಪ್ರೀತಿಸುತ್ತೇವೆಯೇ?

ಇದು ನಿಜ. ನಾವು ಸುಳ್ಳನ್ನು ಪ್ರೀತಿಸುತ್ತೇವೆ. ಏಕೆಂದರೆ ಅದು ಪ್ರಿಯವಾಗಿ ಮಾತನಾಡುತ್ತದೆ. ತನ್ನ ತಳಕು ಬಳಕು ಒನಪು ವಯ್ಯಾರಗಳಿಂದ ನಮ್ಮನ್ನು ಮರುಳು ಮಾಡಿ ಒಪ್ಪಿಸುತ್ತದೆ. ಆದರೆ ಸತ್ಯ ಹಾಗಲ್ಲ. ಅದರ ಸ್ವರೂಪ ಒರಟು, ಜೀರ್ಣಿಸಿಕೊಳ್ಳಲು ಅಸಾಧ್ಯವಾದ ಸವಾಲು. ಆದ್ದರಿಂದಲೇ ಅದನ್ನು ಕಹಿ ಎಂದು ಕರೆಯುವುದು. ಆದರೆ ಕಹಿಯಾದದ್ದು ಯಾವಾಗಲೂ ಒಳಿತಿನ ಮುಖದ ಕಡೆ ನಮ್ಮನ್ನು ತಿರುಗುವಂತೆ ಪ್ರೇರೇಪಿಸುತ್ತಿರುತ್ತದೆ. ನಮ್ಮ ದೇಹದ ಮೇಲೆ ಆಕ್ರಮಣ ಮಾಡುವ ತೀವ್ರತರ ರೋಗಗಳ ಬಗ್ಗೆ ನಾವು ಹೆದರುತ್ತೇವೆ. ವೈದ್ಯರು ಶುಭವನ್ನೇ (ಅಥವಾ ಸುಳ್ಳನ್ನೇ) ನುಡಿಯಲೆಂದು ನಮ್ಮ ಮನ ಬಯಸುತ್ತಿರುತ್ತದೆ. ಸತ್ಯದ ಮುಖಾಮುಖಿಯಾಗಿ ಅದನ್ನು ಎದುರಿಸುವ ಧೈರ್ಯ ಬಹುಮಂದಿಗೆ ಇರುವುದಿಲ್ಲ. ಆದ್ದರಿಂದ ನಮಗೆ ಮಿಥ್ಯೆ ಪ್ರಿಯವಾಗುತ್ತದೆ. ಮಿಥ್ಯಾ ಪ್ರಪಂಚದಲ್ಲಿ ವಿಹರಿಸುವುದು ನಮಗೆ ತತ್ಕಾಲದ ಆನಂದವನ್ನು ತರುತ್ತದೆ. ಈ ಅಲ್ಪ ಆನಂದದಲ್ಲಿ ಮೈಮರೆತು ಅಲೆಯುವುದು ನಮಗೆ ಇಷ್ಟವಾಗುತ್ತದೆ.

ಕಲೆ ಸತ್ಯವನ್ನು ಅದರ ವಾಸ್ತವಿಕ ನೆಲೆಯಿಂದ ಭಿನ್ನವಾಗಿ ಬಣ್ಣ ಕಟ್ಟಿ ವೈಭವೀಕರಿಸಿ ಅಭಿವ್ಯಕ್ತಿಸುತ್ತದೆ ಎಂಬ ಹಳೆಯ ಮಾತಿದೆ. ಅದನ್ನೇ ಪ್ಲೇಟೋ ಪ್ರತಿಪಾದಿಸಿದ್ದು. ಸುಳ್ಳುಗಳ ಮಾಲೆಯನ್ನೇ ಅಲಂಕಾರಯುತವಾಗಿ ಬಗೆಬಗೆಯ ಲೇಪನಗಳಿಂದ ಹೆಣೆದು ಜನರನ್ನು ವಂಚಿಸುವುದರಿಂದ ಸತ್ಯವನ್ನು ಎದುರಿಸುವಲ್ಲಿ ಅವರನ್ನು ಅಧೀರಗೊಳಿಸುತ್ತದೆಯೆಂಬ ಮಾತು ಹುಸಿಯಲ್ಲ! ಇದ್ದುದನ್ನು ಇದ್ದ ಹಾಗೆ ಹೇಳುತ್ತದೆಯೆಂಬ ಛಾಯಾಗ್ರಹಣವು ಕೂಡ ಸತ್ಯದಿಂದ ಮಾರು ದೂರ ನಿಂತು ವೈಭವೀಕರಿಸುತ್ತದೆಯೆಂಬುದು ಸತ್ಯ! ಕಟು ವಾಸ್ತವವಾದಿ ನೆಲೆಯಲ್ಲಿ ಕಥೆ ಕಾದಂಬರಿ ನೇಯುತ್ತಿದ್ದೇವೆಂದು ಹೇಳುವ ನಮ್ಮ ಅನೇಕ ಲೇಖಕರು ಬವಣೆಬೇನೆಗಳನ್ನು ಅತಿಯಾಗಿ ಅಭಿವ್ಯಕ್ತಿಸಿರುವುದು ನಮಗೆ ತಿಳಿಯದ ವಿಷಯವಲ್ಲ. ಅಂದರೆ ಕೇವಲ ಆನಂದ ಅಥವಾ ಖುಷಿ ತರುವ ಅಂಶಗಳನ್ನು ಮಾತ್ರವಲ್ಲ, ಅತ್ಯಂತ ನೋವು ತರುವ ಬಡತನ, ಅವಮಾನ, ಅಸಮಾನತೆ ಮುಂತಾದ ಅಮಾನವೀಯ ಅಂಶಗಳನ್ನು ಸತ್ಯದಿಂದ ನಾಲ್ಕು ಮಾರು ದೂರ ಎಳೆದು ಚಿತ್ರಿಸಿ ಓದುಗರನ್ನು ಕ್ರೌರ್ಯದ ವಿವಿಧ ಮುಖಗಳತ್ತ ಸೆಳೆದು ಅಗತ್ಯಕ್ಕಿಂತ ಹೆಚ್ಚು ಮಗ್ನಗೊಳ್ಳುವಂತೆ ಮಾಡುವ ತಂತ್ರಗಾರಿಕೆಯಿದೆ. ಇಲ್ಲಿಯೂ ಎಲ್ಲೋ ಲೇಖಕ ಮತ್ತು ಓದುಗ ಸತ್ಯದಾಚೆಯ ಮುಖವನ್ನೇ ಬಯಸುತ್ತಾರೆಂದಾಯಿತು.

ಎಂದಿಗಿಂತ ಇಂದು ನಮ್ಮ ಸಾಮಾಜಿಕರು ಸುಳ್ಳನ್ನು ಪ್ರೀತಿಸುತ್ತಾರೆಂಬುದನ್ನು ನಮ್ಮ

ಆಧುನಿಕ ಮಾರುಕಟ್ಟೆ ಪ್ರಪಂಚ ಸಾಬೀತುಪಡಿಸಿದೆ. ಅದಕ್ಕೆ ತನ್ನ ಸರಕುಗಳನ್ನು ವಿವಿಧ ಬಗೆಯ ರೂಪಗಳಲ್ಲಿ - ಧ್ವನಿ ರೂಪ ಸಾಧ್ಯತೆಗಳಲ್ಲಿ - ಅಭಿವ್ಯಕ್ತಿಸಲು ಜ್ಞಾನ-ವಿಜ್ಞಾನ - ತಂತ್ರಜ್ಞಾನ ಮಾಧ್ಯಮಗಳು ಇಂದು ಲಭಿಸಿವೆ. ಅದರಲ್ಲೂ ವಿದ್ಯುನ್ಮಾನ ಮಾಧ್ಯಮವಂತೂ ಮಾರುಕಟ್ಟೆ ಸಂಸ್ಕೃತಿ ತನ್ನ ರೆಕ್ಕೆಪುಕ್ಕಗಳನ್ನು ಕೃತಕವಾಗಿ ಕಟ್ಟಿಕೊಂಡು ಕುಣಿಯಲು ಒಳ್ಳೆಯ ರಹದಾರಿ ಕಲ್ಪಿಸಿದೆ. ಕಪ್ಪು ಬಿಳಿಪು ಯುಗದಿಂದ ಚಿಮ್ಮಿ ಬಣ್ಣದ ದುನಿಯಾದಲ್ಲಿ ಅದು ಮಿಂದು ಹಾರಾಡಲು ಒಳ್ಳೆಯ ಅವಕಾಶ ಸಿಕ್ಕಿದೆ. ಮೊದಲೇ ಭಾರತೀಯ ಸಾಮಾಜಿಕರು - ಅದರಲ್ಲೂ ಮಧ್ಯಮ ವರ್ಗದವರು - ಕೊಳ್ಳುಬಾಕರು. ಅವರಿಗೆ ಬಾಳಿಕೆಗಿಂತ, ಅಗತ್ಯತೆಗಿಂತ ಅಲಂಕಾರ ಮುಖ್ಯ, ಸತ್ತ್ವಕ್ಕಿಂತ ನೋಟ ಮುಖ್ಯ. ಈ ದೌರ್ಬಲ್ಯವನ್ನು ಅರಿತಿರುವ ಮಾರುಕಟ್ಟೆಯ ಮಂದಿ ತಮ್ಮ ಸರಕುಗಳ ಗುಣಮಟ್ಟವನ್ನು ವೈಭವೀಕರಿಸಿ ಜಾಹಿರಾತು ನೀಡುತ್ತಾರೆ. ಆ ಜಾಹಿರಾತಿನ ಥಳುಕಿಗೆ ಮರುಳಾಗುವ ಸಾಮಾಜಿಕರು ಆ ಸರಕುಗಳನ್ನು ಕೊಂಡು ಅನಂತರ ಪೇಚಾಡುತ್ತಾರೆ.

ಕುಟುಂಬ ಜೀವನದಲ್ಲೂ ಅಷ್ಟೇ. ನಾವು ನಮಗೆ ಹತ್ತಿರದವರ ಬಗ್ಗೆ ಅಥವಾ ನಾವು ಹೆಚ್ಚು ಪ್ರೀತಿಸುವವರ ಬಗ್ಗೆ ಅತಿಯಾದ ಹುಸಿ ಭರವಸೆಗಳನ್ನು ಇಟ್ಟುಕೊಂಡಿರುತ್ತೇವೆ. ಅವರ ಜೀವನದ ಅತ್ಯಂತ ನಿಗೂಢತೆಯ ವಾಸ್ತವವನ್ನು ಅರಿಯಲು ನಾವು ಹಿಂದು ಮುಂದು ನೋಡುತ್ತೇವೆ. ನಮ್ಮ ತಂದೆ-ತಾಯಿ, ಮಕ್ಕಳು ಮತ್ತು ರಕ್ತ ಸಂಬಂಧಿಗಳ ಕತ್ತಲ ಬದುಕನ್ನು ನಾವು ಅರಿತು ಜೀರ್ಣಿಸಿಕೊಳ್ಳಲು ನಿರಾಕರಿಸುತ್ತೇವೆ. ತಾಯಿಗಂತು ಮಕ್ಕಳ ತಪ್ಪುಗಳು ತಪ್ಪುಗಳಾಗೇ ಕಾಣುವುದಿಲ್ಲ. ಅಥವಾ ಕಂಡರೂ ಆ ತಪ್ಪು ಮಾಡಲು ಅವನು ಕಾರಣನಲ್ಲ, ಇನ್ನ್ಯಾರೋ ಕಾರಣರು ಎಂದು ಸತ್ಯವನ್ನು ಧರಿಸಲು ನಿರಾಕರಿಸಿಬಿಡುತ್ತಾಳೆ. ಅನೇಕ ತಂದೆ-ತಾಯಿಗಳು ತಮ್ಮ ಮಕ್ಕಳಲ್ಲಿ ಇಲ್ಲದ ಗುಣಗಳನ್ನು ಇದೆ ಎಂದು ಬಣ್ಣಿಸಿ ಇತರರ ಮುಂದೆ ವೈಭವೀಕರಿಸಿ ಮಾತನಾಡುತ್ತಾರೆ. ತನ್ಮೂಲಕ ತಮ್ಮ ಮಕ್ಕಳ ಮನಸ್ಸಿನಲ್ಲಿ ಪೊಳ್ಳು ವ್ಯಕ್ತಿತ್ವ ಬೆಳೆಯಲು ಕಾರಣರಾಗುತ್ತಾರೆ.

ನಮ್ಮ ಸಾರ್ವಜನಿಕ ಜೀವನದಲ್ಲಿ ಅಥವಾ ವೃತ್ತಿ ಜೀವನದಲ್ಲೀ ಅನೇಕ ಬಾರಿ ಮಿಥ್ಯೆಯ ಬೆನ್ನು ಹತ್ತಿ ಸಾಗಲು ಬಯಸುತ್ತೇವೆ. ನಮ್ಮ ಆಲೋಚನಾ ವಿಧಾನ, ನಂಬಿದ ತತ್ತ್ವಸಿದ್ಧಾಂತಗಳ ಅನುಯಾಯಿಗಳು ನಮಗೆ ಪ್ರಿಯರಾಗುತ್ತಾರೆ. ಅವರು ತಪ್ಪು ಹೆಜ್ಜೆ ಇಡುತ್ತಿರುವಾಗಲೂ ನಾವು ಅವರನ್ನು ಸಮರ್ಥಿಸಿಕೊಂಡು ಅಸತ್ಯದ ಪರವಾಲುತ್ತೇವೆ. ಆದರೆ ಸತ್ಯ ಎಷ್ಟೇ ಕಹಿಯಾದರೂ ಅದನ್ನು ಸ್ವೀಕರಿಸಲು ನಾವು ಸಿದ್ಧರಾಗಬೇಕು. ಅದು ನಮ್ಮನ್ನು ಬದುಕಿನ ಕಠೋರತೆಯ ವಿರುದ್ಧ ಗಟ್ಟಿಗೊಳ್ಳಲು ಅಣಿಗೊಳಿಸುತ್ತದೆ.

೧೫-೧೨-೨೦೧೧

# ಮನೆಗೂ ಜೀವವಿದೆ

ನಾವು ಬಾಳಿಬದುಕುವ ಪರಿಸರ ನಮಗೆ ಪ್ರಿಯವಾಗುತ್ತದೆ. ಅದರೊಡನೆ ಆಡಿ ನಲಿದು ನಾವು ಬೆಳೆದಿರುತ್ತೇವೆ. ಅದು ನಮಗೆ ಸ್ನೇಹಿತನಾಗಿ, ತಂದೆತಾಯಿಯಾಗಿ ಹಾಗೂ ಗುರುವಾಗಿ ಕೈಹಿಡಿದು ನಡೆಸಿರುತ್ತದೆ. ಆದುದರಿಂದ ನನ್ನ ಮನೆ, ನನ್ನ ನೆಲ ಮತ್ತು ನನ್ನ ಜನವೆಂದರೆ ನಮಗೆ ಆತ್ಮೀಯವಾದ ಭಾವತರಂಗಗಳೇಳುತ್ತವೆ. ಅದು ವ್ಯಾವಹಾರಿಕ ಸಂಬಂಧಗಳಾಚೆಗೂ ಅಂತರಂಗ ಭಾವರಂಗ ವ್ಯಾಪಾರವಾಗಿರುತ್ತದೆ. ಅಲ್ಲಿ ಕೊಡುಕೊಳ್ಳುವ ಪರಿಭಾಷೆಯ ಲೆಕ್ಕಾಚಾರದ ಪ್ರಶ್ನೆಯೇ ಉದ್ಭವವಾಗುವುದಿಲ್ಲ. ಆ ಪರಿಸರ ಎಂಥ ಗಾಢವಾದ ಚುಂಬಕ ಶಕ್ತಿಯನ್ನು ಹೊಂದಿರುತ್ತದೆಯೆಂದರೆ - ಅದರಿಂದ ದೂರ ಸಿಡಿದಷ್ಟು ಅದರ ಸೆಳೆತ ಅಧಿಕವಾಗುತ್ತದೆ. ಅದರ ನೆನಪು ಆಹ್ಲಾದವನ್ನೂ ಪುಳಕವನ್ನೂ ಉಂಟುಮಾಡುತ್ತದೆ. ಈ ಕಾರಣದಿಂದಲೇ ದೂರದ ನೆಲದಲ್ಲಿ ಬದುಕುವ ಪಂಪನಿಗೆ ಬನವಾಸಿಯ ನೆನಪು ಕಾಡುವುದು; ಮಲೆನಾಡಿನಿಂದ ದೂರವಿದ್ದ ಕುವೆಂಪು ಅವರಿಗೆ ಸದಾ ಭಾವಲೋಕದಲ್ಲಾದರೂ ತಮ್ಮ ಮಲೆನಾಡಿನ ಗೂಡಿಗೆ ಹೋಗುವ ತವಕವುಂಟಾಗುತ್ತದೆ.

ನಾವು ಹುಟ್ಟಿದ, ಬೆಳೆದು ನಲಿದ ಮನೆ ಕೇವಲ ಕಲ್ಲು ಗಾರೆ ಇಟ್ಟಿಗೆಗಳಿಂದ ಕಟ್ಟಿದ ಅಜೀವ ಸಂಗತಿಯಲ್ಲ. ಅದಕ್ಕೊಂದು ಜೀವವಿರುತ್ತದೆ; ಅಲ್ಲಿ ಆಡಿ ಬೆಳೆದ ಜೀವಗಳ ಅಂತರಾಳದಲ್ಲಿ ಸದಾ ತುಡಿತಮಿಡಿತಗಳ ಮುಳ್ಳಾಡಿಸುವ ಉಸಿರಾಡುವ ಜೀವವೇ ಆಗಿರುತ್ತದೆ. ಗ್ರಾಮೀಣ ಪರಿಸರದ ಮನೆಗಳನ್ನು ನೋಡಿ ಅವಕ್ಕಿರುವ ಜೀವಲಕ್ಷಣ ಪ್ರಕೃತಿಯ ಪ್ರತಿರೂಪವಾಗಿರುತ್ತದೆ. ಅವು ಹೇಳಿಕೇಳಿ ಮರಗಿಡಗಳ ನಡುವೆ ಇರುತ್ತವೆ. ಮನೆಯ ಮುಂದೆ ಮರಗಳು; ಮನೆಯ ಹಿಂದೆ ಕಡ್ಡಾಯವಾಗಿ ಹಿತ್ತಲು, ಮನೆಯ ಒಳಗಡೆ ಮನುಷ್ಯರ ಜೊತೆ ಪ್ರಾಣಿಗಳೂ ಇರುತ್ತವೆ! ಅವುಗಳ ಕೊಟ್ಟಿಗೆಗಳು! ಮನೆಯೆಂದರೆ ಕೇವಲ ಮನುಷ್ಯರ ವಾಸಸ್ಥಳ ಮಾತ್ರವೆಂಬ ಪರಿಕಲ್ಪನೆಯೇ ಅಲ್ಲಿ ಮೂಡಲು ಸಾಧ್ಯವಿಲ್ಲ. ದನಕರು, ಆಡುಕುರಿ, ಕೋಳಿಕುಕ್ಕ - ಹೀಗೆ ಜೀವಸಂಕುಲವೇ ಅಲ್ಲಿ ಮನುಷ್ಯರ ಜೊತೆ ಬಾಳ್ವೆ ಮಾಡುತ್ತಿರುತ್ತವೆ. ಅವು ತಮ್ಮ ಸಹಜೀವಿಗಳನ್ನು ಪ್ರೀತಿಸುವ ಬಗೆಯನ್ನು ಅನುಭವಿಸಿದವರೇ ಬಲ್ಲರು. ತಮ್ಮನ್ನು ಸಾಕಿದ ಮನುಷ್ಯರನ್ನು ಮಾತ್ರವಲ್ಲದೆ ತಮ್ಮೊಡನೆ ಜೀವಿಸುವ ಇತರೆ ಜೀವಿಗಳನ್ನು ಸಹ ಪ್ರೀತಿಯಿಂದ ಜೋಪಾನ ಮಾಡಬಯಸುತ್ತವೆ. ಮನುಷ್ಯರೊಡನೆ ಬಾಳ್ವೆಮಾಡಿದ ಅವಕ್ಕೆ ಮನುಷ್ಯನ ಕುಟುಂಬದ ಮೌಲ್ಯಾಧಾರಿತ ಸಂಬಂಧಗಳು ಮೈಗೂಡಿರುತ್ತವೆಯೇನೋ! ಆದುದರಿಂದ ಮನೆಯೆಂದರೆ ಈ ಎಲ್ಲ ಜೀವಗಳು ಇರಲೇಬೇಕೆಂದು ನಮ್ಮ ಗ್ರಾಮೀಣ ಸಮಾಜ ನಂಬಿಕೊಂಡು

ಬಂದಿತ್ತು.

ಗ್ರಾಮಬದುಕಿನ ರಾತ್ರಿಗಳನ್ನು ಅನುಭವಿಸಬೇಕು. ಆ ಮನೆಯಲ್ಲಿ ಒಂದು ಪರಿಚಿತ ಜೀವತಂತು ಎದೆಯಿಂದ ಎದೆಗೆ ಹರಿಯುತ್ತಿರುತ್ತದೆ. ನಿಡಿದಾಗಿ ಉಸಿರುಬಿಡುವ ದನ ಎಮ್ಮೆ ಎತ್ತುಗಳು; ಆಗಿಂದಾಗ್ಗೆ ಸೊರ್ರನೆ ಬೀಳುವ ಗಂಜಲ; ತೊಪ್ಪನೆ ಬೀಳುವ ಸಗಣಿ; ಯಾವುದೋ ಮಾನವರಿಗೆ ಅಗೋಚರವಾದ ಸದ್ದು ಕೇಳಿ ಪ್ರತಿಕ್ರಿಯಿಸುವ ಕೋಳಿಗಳು, ಮೇಕೆ ಕುರಿಗಳು; ಯಾವುದೋ ಸುಳಿಹಿಡಿದು ಬೊಗಳುವ ನಾಯಿಗಳು; ಹೆಂಚುಗಳ ಸಂದುಗಳಲ್ಲಿ ನುಸುಳಿ ನೆಗೆದಾಡುವ ಬೆಕ್ಕುಗಳು; ಹಿತ್ತಲ ಮರಗಳ ಮೇಲೆ ಕುಳಿತು ಗಕ್ಕನೆ ಅಮೂರ್ತ ನಿಗೂಢತೆಯ ಮರ್ಮವನ್ನು ಭೇದಿಸುವಂತೆ ಕೂಗುವ ಗೂಬೆ - ಇವೆಲ್ಲವೂ ಆ ಮನೆಯ ಉಸಿರಾಟದ ಚಿಹ್ನೆಗಳು. ರಾತ್ರಿ ತಾಯಮಡಿಲಲ್ಲಿ ನಿದ್ರಿಸುವ ಮಗುವಿನಿಂದ ಹಿಡಿದು ಮುದುಕನವರೆಗೆ ಆ ಮನೆಯ ಉಸಿರಾಟವನ್ನು ಬಲ್ಲರು. ಆ ದನಿಗಳು ಅವರ ಜೋಗುಳದ ರಾಗಗಳಾಗಿ ಅವರನ್ನು ನೆಮ್ಮದಿಯ ನಿದ್ರೆಗೆ ಕರೆದೊಯ್ಯುತ್ತವೆ.

ನಗರಗಳ ಬದುಕು ಇದಕ್ಕಿಂತ ಭಿನ್ನವೇನಲ್ಲ. ನಗರಕ್ಕೆ ಅದರದೇ ಆದ ವಿಶೇಷ ಶಾಬ್ಧಿಕ ಸ್ವರೂಪದ ಚಿಹ್ನೆಗಳಿವೆ. ರಾತ್ರಿಯುದ್ದಕ್ಕೂ ನಿಲ್ಲದ ಲಾರಿ ಬಸ್ಸುಗಳ ಸದ್ದುಗಳು; ಎಲ್ಲೋ ದೂರದಲ್ಲಿ ಸರಿರಾತ್ರಿಯಲ್ಲೂ ಕೇಳಿಬರುವ ರೇಡೀಯೋ ಧ್ವನಿ; ಆಗಿಂದಾಗ್ಗೆ ಮನೆಯ ಕಿಟಕಿಗಳು ಅಲ್ಲಾಡುವಂತೆ ರಸ್ತೆಯಲ್ಲಿ ಸಾಗುವ ನಗರ ಸಾರಿಗೆ ವಾಹನದ ವೇಗ ಶಕ್ತಿ; ಕವಿ ಶಿವರುದ್ರಪ್ಪನವರಿಗೆ ಕೇಳಿಸುವ ಎಲ್ಲೋ ಅಳುವ ಮಗುವಿನ ರಾಗಾಲಾಪನೆ; ಕುಡಿದು ರಸ್ತೆಯಲ್ಲಿ ಕಿರುಚಾಡುತ್ತಾ ಸಾಗುವ ಐಟಿ ಬಿಟಿ ಹುಡುಗರ ಪಲ್ಸರ್ ಆರ್ಭಟ; ಇತ್ತ ಕೆಟ್ಟ ನಲ್ಲಿಗಳಿಂದ ತೊಟತೊಟನೆ ತೊಟ್ಟಿಕ್ಕುವ ನೀರಿನ ಸದ್ದು; ಇದ್ದಕ್ಕಿದಂತೆ ಅಪರಿಚಿತರನ್ನು ನೋಡಿ ಬೊಗಳುವ ನಾಯಿಗಳು - ಇವೆಲ್ಲವೂ ನಗರದ ಬದುಕಿಗೆ ಅಂಟಿಕೊಂಡೇ ಸುಪರಿಚಿತವಾದ ಜೀವಸಂಬಂಧಿ ಚಿಹ್ನೆಗಳು. ಈ ಚಿಹ್ನೆಗಳನ್ನು ಹೊರತಾದ ನಗರದ ಬದುಕನ್ನು ಕಲ್ಪಿಸಿಕೊಳ್ಳಲಾಗುವುದೇ ಇಲ್ಲ. ಜಗತ್ತಿನ ದೊಡ್ಡದೊಡ್ಡ ಶಹರಗಳು ನಿದ್ರೆಯನ್ನೇ ಮಾಡುವುದಿಲ್ಲ. ಸದಾ ದುಡಿಮೆ, ಸದಾ ಜಾಗೃತದ ನಡೆ, ಇಂಥ ಸದ್ದುಗದ್ದಲದ ನಡುವೆ ಬದುಕು ಮಾಡುವುದು ರೂಢಿಯಾಗಿಬಿಡುತ್ತದೆ. ಈ ಸದ್ದುಗದ್ದಲವಿಲ್ಲದಿದ್ದರೆ ತಾಳತಪ್ಪಿದ ಹಾಡಿನಂತೆ ಅದರಲ್ಲಿನ ಬದುಕು ಆತಂಕಪಡುತ್ತದೆ.

೨೯-೧೨-೨೦೧೧

## ಶಕ್ತಿಕೇಂದ್ರಗಳೂ ಅಹಂಕಾರವೂ....

ಜಗತ್ತಿನ ಶ್ರೇಷ್ಠ ಚಿಂತನೆಗಳು, ಸಿದ್ಧಾಂತಗಳು ಹಾಗೂ ಮತಧರ್ಮಗಳು - ಎಲ್ಲವೂ ಮೂಲತಃ ವ್ಯಕ್ತಿಮೂಲದಿಂದಲೇ ಸೃಷ್ಟಿಗೊಂಡಿರುವಂಥವು. ಆ ವ್ಯಕ್ತಿ ನಮ್ಮ ಹಾಗೆ ಸಾಮಾನ್ಯನಾಗಿಯೇ ಜನಿಸಿ ಬೆಳೆದಿರುತ್ತಾನೆ. ಆದರೆ ಅವನು ಸಮಾಜವನ್ನು ಗ್ರಹಿಸುವ, ಸಂವೇದಿಸುವ ಮತ್ತು ವಿಶ್ಲೇಷಿಸುವ ಮನೋಸ್ಥಿತಿ ನಮಗಿಂಥ ಭಿನ್ನವಾಗಿರುತ್ತದೆ. ಈ ಗುಣವನ್ನು ವ್ಯಕ್ತಿವಿಶಿಷ್ಟತೆಯೆಂದು ಕರೆಯಬೇಕು. ಈ ವ್ಯಕ್ತಿವಿಶಿಷ್ಟತೆಯೆಂಬುದು ಬುದ್ಧಿಮತ್ತೆ ಮತ್ತು ಗ್ರಹಿಕೆಯ ಶಕ್ತಿಯ ಆಧಾರದ ಮೇಲೆ ನಿಂತಿದ್ದು, ಅದೊಂದು ಶಕ್ತಿಯಾಗಿ ಅವನಲ್ಲಿ ಕೆಲಸ ಮಾಡುತ್ತದೆ. ಇತರರಲ್ಲಿ ಇಲ್ಲದ, ಇತರರಿಗಿಂತ ವಿಶೇಷವಾದ ಈ ಶಕ್ತಿಯಿಂದಾಗಿ ಅವನು ಸಹಜವಾಗಿ ಎಲ್ಲರ ಗಮನ ಸೆಳೆಯುವ ವ್ಯಕ್ತಿತ್ವವನ್ನು ರೂಪಿಸಿಕೊಂಡುಬಿಡುತ್ತಾನೆ. ಸಮಾಜದ ಅಗತ್ಯಗಳನ್ನು, ಅದರ ಜೀವನಕ್ರಮವನ್ನು ವಿಶ್ಲೇಷಿಸುವ ಮತ್ತು ಮರು ಮಂಡಿಸುವ ಅವನ ಶಕ್ತಿಯಿಂದಾಗಿ ಅವನ ಸುತ್ತ ಜನಸಮುದಾಯ ಸೇರತೊಡಗುತ್ತದೆ. ಅವನ ಮಾತು, ಸಲಹೆಗಳು ಆ ಸಮುದಾಯಕ್ಕೆ ಆಗಿಂದಾಗ್ಗೆ ಬೇಕಾಗುತ್ತವೆ. ಹೀಗಾಗಿ ಅವನು ಸಮುದಾಯದ ನಡುವೆ ಶಕ್ತಿಕೇಂದ್ರವಾಗಿ ಬೆಳೆದುಬಿಡುತ್ತಾನೆ.

ಏಸು, ಬಸವ, ಪೈಗಂಬರ್, ಬುದ್ಧ ಮುಂತಾದವರು ತಮಗಿದ್ದ ಈ ವ್ಯಕ್ತಿ ವಿಶಿಷ್ಟ ಗುಣದಿಂದಲೇ ಮಹಾನ್ ವ್ಯಕ್ತಿಶಕ್ತಿಗಳಾಗಿ ರೂಪುಗೊಂಡಿದ್ದು! ತಮ್ಮ ಮಾತುಗಳಿಗೆ ತಲುಪುವ ಶಕ್ತಿಯಿದೆಯೆಂಬುದನ್ನು ಅವರು ಅರ್ಥ ಮಾಡಿಕೊಂಡಿದ್ದರು. ಸಮಾಜವನ್ನು ತಿದ್ದುವ, ಪರಿವರ್ತಿಸುವ, ಸಮಾನತಾ ರೂಪವೊಂದನ್ನು ತರುವ ಆಲೋಚನಾ ವಿಧಾನಗಳು ಅಲ್ಲಿರುತ್ತಿದ್ದವು. ಮುಖ್ಯವಾಗಿ ಇದ್ದ ವ್ಯವಸ್ಥೆಯ ಅಸಮಾನತೆ ಮತ್ತು ಅದರಿಂದಾಗುವ ಕ್ರೌರ್ಯಗಳಿಂದ ರೋಸಿಹೋದ ಜನರಿಗೆ ಇಂಥವರ ಮಾತುಗಳು ನಾಳಿನ ಬದುಕಿನ ಆಶಾಕಿರಣಗಳಾಗಿ ಕಂಡಿದ್ದವು. ಆದ್ದರಿಂದ ಅವರನ್ನು ತಮ್ಮ ಸಾಂಸ್ಕೃತಿಕ/ ಧಾರ್ಮಿಕ ನಾಯಕರನ್ನಾಗಿ ಸ್ವೀಕರಿಸಲು ಸಿದ್ಧರಾದರು. ಈ ವ್ಯಕ್ತಿಗಳು ಅಂತರಂಗದಲ್ಲಿ ಅಪಾರ ಕರುಣೆ ಮತ್ತು ಮಾನವ ಪ್ರೇಮವನ್ನು ಹೊಂದಿದ್ದರಿಂದ ತಮಗಿದ್ದ ಸಮುದಾಯ ಬೆಂಬಲವನ್ನು ಸ್ವಾರ್ಥಕ್ಕೆ ಬಳಸಿಕೊಳ್ಳಲಿಲ್ಲ. ಅದರ ಬದಲು ತಮ್ಮತನವನ್ನು ಸಮುದಾಯದ ಹಿತದಲ್ಲಿ ಐಕ್ಯಗೊಳಿಸಿಕೊಂಡರು. ಒಂದು ಸಮುದಾಯದ ಒಳಿತಿಗೆ ಬೇಕಾದ ತಿಳಿವು ಮತ್ತು ನಡೆಯನ್ನು ಬೋಧಿಸಿದರು. ಸಮುದಾಯ ಪ್ರಜ್ಞೆಯನ್ನು ಜಾಗೃತಗೊಳಿಸುವುದರ ಮೂಲಕ ಒಂದು ಹೊಸ ಆಲೋಚನಾ ವಿಧಾನ ಮತ್ತು ಜೀವನ ಕ್ರಮವನ್ನು ಹುಟ್ಟುಹಾಕಿದರು. ಮುಂದಿನವರು ಅವರ ಬೋಧನೆಯನ್ನು ಮತದ

ಹೆಸರಿನಲ್ಲಿ ಕರೆದು ಮಾನ್ಯ ಮಾಡಿದರು. ಅವರು ಮಾತ್ರ ಬದುಕಿನುದ್ದಕ್ಕೂ ಸಾಮಾನ್ಯರ ರೀತಿಯಲ್ಲಿ ಬದುಕು ಸಾಗಿಸಿ, ಅಸಾಮಾನ್ಯ ಚಿಂತನೆಯನ್ನು ನೀಡಿ ಅಸಾಮಾನ್ಯ ವ್ಯಕ್ತಿಗಳಾದರು.

ಈ ಮಹಾನ್ ಶಕ್ತಿವಿಶೇಷಗಳು ಮರೆಯಾದ ಎಷ್ಟೋ ವರ್ಷಗಳ ನಂತರ ಅವರು ನೀಡಿದ ಸಿದ್ಧಾಂತಗಳು ಸಾಂಸ್ಥಿಕ ರೂಪ ಪಡೆದು, ಆ ಸಂಸ್ಥೆಗಳಿಗೆ ಯಜಮಾನರುಗಳು ಸೃಷ್ಟಿಯಾಗುತ್ತಾರೆ. ತಮ್ಮ ಸಾಂಸ್ಥಿಕ ರೂಪದ ಸಿದ್ಧಾಂತವೇ ಸರ್ವಶ್ರೇಷ್ಠ, ಅದರಿಂದ ಜಗತ್ತಿನ ಎಲ್ಲ ಸಮಸ್ಯೆಗಳಿಗೂ ಪರಿಹಾರವಿದೆಯೆಂಬ ಹಠಮಾರಿ ಧೋರಣೆಯನ್ನು ಹೊಂದುತ್ತಾರೆ. ಅನ್ಯಸಿದ್ಧಾಂತ ಮತ್ತು ಆಲೋಚನಾ ವಿಧಾನಗಳನ್ನು ನಿಕೃಷ್ಟವಾಗಿ ಕಾಣತೊಡಗುತ್ತಾರೆ. ಏಕೆಂದರೆ ಅವರು ಪ್ರತಿನಿಧಿಸುವ ಸಿದ್ಧಾಂತವು, ಅದರ ಮೂಲ ಪುರುಷನಲ್ಲಿ ಇದ್ದ ವ್ಯಕ್ತಿವಿಶೇಷತೆಯಾಗಲೀ, ಅಪಾರವಾದ ಮಾನವಪ್ರೀತಿಯಾಗಲೀ ಇರುವುದಿಲ್ಲ. ಅದರ ಬದಲು ಸಾಂಸ್ಥಿಕ ಸ್ವರೂಪ ತಂದುಕೊಟ್ಟಿರುವ ಸ್ಥಾನಬಲದ ಅಹಂಕಾರವಿರುತ್ತದೆ. ಈ ಅಹಂಕಾರವೇ ಮುಂದಿನ ಎಲ್ಲ ಅನಾಹುತ ಪರಂಪರೆಗೆ ನಾಂದಿಯಾಗುತ್ತದೆ.

ಆಧುನಿಕ ಯುಗದಲ್ಲೂ ಇಂಥ ಶಕ್ತಿವಿಶೇಷಗಳು ಅಪಾರವಾಗಿವೆ. ನಮ್ಮಲ್ಲಿಯೇ ಧಾರವಾಡದಲ್ಲಿ ಬೇಂದ್ರೆ, ಕರಾವಳಿಯಲ್ಲಿ ಶಿವರಾಮ ಕಾರಂತರು, ದಕ್ಷಿಣದಲ್ಲಿ ಕುವೆಂಪು ನಮ್ಮ ಸಾಂಸ್ಕೃತಿಕ ಲೋಕದ ಶಕ್ತಿಕೇಂದ್ರಗಳಾಗಿ ಕಾರ್ಯ ನಿರ್ವಹಿಸಿದ್ದು ಈಗ ಚರಿತ್ರೆ. ಸ್ವತಂತ್ರ ಪೂರ್ವದಲ್ಲಿ ಗಾಂಧೀಜಿ, ಸ್ವತಂತ್ರ ಭಾರತದಲ್ಲಿ ಲೋಹಿಯಾ, ಅಂಬೇಡ್ಕರ್, ಜಿಡ್ಡು, ರಜನೀಶ್ ಇಂಥವರೆಲ್ಲ ಶಕ್ತಿಕೇಂದ್ರಗಳಾಗಿ ಕೆಲಸ ಮಾಡಿ ನಮ್ಮ ಬೌದ್ಧಿಕ ವಿಕಾಸಕ್ಕೆ ಕಾರಣರಾಗಿದ್ದಾರೆ. ಇವರೆಲ್ಲರೂ ಆತ್ಮಾಭಿಮಾನಿಗಳೂ ಮಾನವಪ್ರೇಮಿಗಳೂ ನಿಗರ್ವಿಗಳೂ ಆಗಿದ್ದರು. ಅವರಲ್ಲಿದ್ದ ನಿಗರ್ವವೇ ಅವರ ಅಪಾರ ಶಕ್ತಿಯೆಂಬುದನ್ನು ಮರೆಯುವಂತಿಲ್ಲ.

ಇಂದು ಈ ನಿಗರ್ವದ ವ್ಯಕ್ತಿಗಳು ವಿರಳರಾಗುತ್ತಿದ್ದಾರೆ. ಅದರಲ್ಲೂ ಪ್ರತಿಯೊಂದು ಜಾತಿ/ಧರ್ಮವೂ ಶಕ್ತಿಕೇಂದ್ರಗಳೆಂದು ತಮ್ಮನ್ನು ತಾವು ಕರೆದುಕೊಂಡು ಅಹಂಕಾರ ಕೇಂದ್ರಗಳಾಗಿ, ಸ್ವಾರ್ಥದ ಗುಂಪುಗಳಾಗಿ ರೂಪುಗೊಳ್ಳುತ್ತಿವೆ. ಹಾಗಾದರೆ ಚರಿತ್ರೆಯಿಂದ ನಾವೇನು ಕಲಿತೇ ಇಲ್ಲವೆ?!

೧೨-೦೧-೨೦೧೨

## ನದಿಯೊಳಗೆ ನದಿ ಬೆರೆಸಿದಂತಾಗದನ್ನಕ್ಕ!

ಬುದ್ಧನ ಅನಂತರ ಭಾರತೀಯ ಸಮಾಜದಲ್ಲಿ ಸಮಾನತೆಯ ಬಗ್ಗೆ ಚಿಂತಿಸಿ ಹೋರಾಡಿದವರಲ್ಲಿ ಬಸವಣ್ಣ ಅಗ್ರಗಣ್ಯನೆಂಬುದರ ಬಗ್ಗೆ ಎರಡು ಮಾತಿಲ್ಲ. ಅವನ ಹೋರಾಟ ಸಾಮಾಜಿಕ ಸಮಾನತೆಯನ್ನು ತರುವುದರ ಜೊತೆಗೆ ಲಿಂಗ ಸಮಾನತೆಯನ್ನು ಮೂಡಿಸುವ ನಿಟ್ಟಿನಲ್ಲಿ ಗುರಿಯನ್ನು ಹೊಂದಿತ್ತು. ಆ ಕಾರಣದಿಂದ ಭಾರತೀಯ ಸಾಮಾಜಿಕ ಚರಿತ್ರೆಯಲ್ಲಿ - ಕರ್ನಾಟಕದಲ್ಲಿ - ಹನ್ನೆರಡನೆಯ ಶತಮಾನದಲ್ಲಿ ಮಹಿಳೆಯರು ಪ್ರಧಾನವಾಗಿ ಎದ್ದು ಕಾಣುತ್ತಾರೆ. ಗಂಡಿನ ಪ್ರಾಧಾನ್ಯತೆಯನ್ನು ಪ್ರಶ್ನಿಸಿ ಸತಿಪತಿಗಳು ಒಂದಾದ ಭಾವದಲ್ಲಿ ಬೆರೆತಾಗ ಮಾತ್ರ ಜೀವನದಲ್ಲಿ ಸಮಾನತೆಯ ತತ್ತ್ವವನ್ನು ಕಾಣಬಹುದೆಂದು ತಿಳಿಸಿದರು. ಇಂಥ ಆಲೋಚನಾ ಕ್ರಮದ ಹಿಂದೆ ಬಸವಣ್ಣನು ಆ ಕಾಲಘಟ್ಟದಲ್ಲಿ ಮೂಡಿಸಿದ ಸಮಾನತಾ ಸ್ವಾತಂತ್ರ್ಯದ ಬೆಳಕು ಕಾರಣವಾಗಿತ್ತೆಂಬುದರಲ್ಲಿ ಸಂಶಯವಿಲ್ಲ. ಅವನು ಸಮಾಜ ವಿಜ್ಞಾನಿಯಾಗಿದ್ದಂತೆ ಮನೋವಿಜ್ಞಾನಿಯೂ ಆಗಿದ್ದನು. ವ್ಯಕ್ತಿಗೆ ಮನೋಪ್ರಪಂಚವಿರುವ ಹಾಗೆ ಒಂದು ಸಮಾಜಕ್ಕೂ ಒಂದು ಮನೋವ್ಯಾಪಾರ ಪ್ರಪಂಚವಿರುತ್ತದೆ. ಇವೆರಡರ ನಡುವೆ ತಾರತಮ್ಯ ಬೆಸುಗೆ ಮತ್ತು ಭಾವ ಸಂಚಾರ ಸದಾ ನಡೆಯುತ್ತಿರುತ್ತದೆ. ಈ ಸಂಕೀರ್ಣ ಸಂಬಂಧಗಳನ್ನು ಬಸವಣ್ಣ ಅರಿತಿದ್ದವನಾದ್ದರಿಂದಲೇ 'ಅಂತರಂಗ ಬಹಿರಂಗ'ಗಳೆರಡರ ಶುದ್ಧಿಗಾಗಿ ಹೋರಾಡಿದ. ಅವನ ವಚನವೊಂದರಲ್ಲಿ ವ್ಯಕ್ತಿ ತನ್ನ ಸ್ವಂತ ನೆಲೆಯಲ್ಲಿ ಸಾಧಿಸಬೇಕಾದ ಸಮಾನತೆಯ ಬಗ್ಗೆ ಹೀಗೆ ನುಡಿಯುತ್ತಾನೆ :

**ಲಿಂಗವ ಪೂಜಿಸಿ ಫಲವೇನಯ್ಯಾ,**
**ಸಮರತಿ, ಸಮಕಳೆ, ಸಮಸುಖವನರಿಯದನ್ನಕ್ಕ?**
**ಕೂಡಲ ಸಂಗಮದೇವರ ಪೂಜಿಸಿ ಫಲವೇನಯ್ಯಾ,**
**ನದಿಯೊಳಗೆ ನದಿ ಬೆರೆಸಿದಂತಾಗದನ್ನಕ್ಕ?**

ಸ್ತ್ರೀ ಪುರುಷ ಸಂಬಂಧಗಳಲ್ಲಿ ಸಮಾನತೆಯಿರಬೇಕು. ಯಾರೂ ಮತ್ತೊಬ್ಬರ ಮೇಲೆ ಆಕ್ರಮಣ ಮಾಡಬಾರದು. ಪ್ರೀತಿಯೆಂಬುದು ನೀಡಬಹುದಾದ - ಅರ್ಪಿಸಿಕೊಳ್ಳಬಹುದಾದ ಸಾತ್ತ್ವಿಕ ಭಾವನೆಯೇ ಹೊರತು ಆಕ್ರಮಣದಿಂದ ಕಬಳಿಸಬಹುದಾದ ವಸ್ತುವಲ್ಲ. ಭಾರತೀಯ ಸಮಾಜದಲ್ಲಿ ಪ್ರೀತಿ ಮದುವೆಗಳು ಇರಲಿಲ್ಲವೆಂಬುದು ನಿಜ. (ಅಪವಾದಗಳನ್ನು ಸಾಧಾರಣೀಕರಣಗೊಳಿಸುವುದು ಸಲ್ಲ) ಬಹುಪಾಲು ಸಂದರ್ಭದಲ್ಲಿ 'ರತಿ'ಯೆಂಬುದರಲ್ಲಿ ಕೊಡುವುದರ ಬದಲು ಕಿತ್ತುಕೊಳ್ಳುವುದೇ ಇರುತ್ತಿತ್ತು. ಬೇರೆ ಲಿಂಗವೊಂದರಿಂದ

ಆಕ್ರಮಣಕ್ಕೊಳಗಾಗಿ ಕ್ರೌರ್ಯಕ್ಕೆ ತುತ್ತಾಗುತ್ತಿದ್ದಾಗ 'ಸುಖ'ವೆಂಬುದು ಎಲ್ಲಿಂದ ಬರಲು ಸಾಧ್ಯ? ಅಲ್ಲಿ 'ಸಮಸುಖ' ಸಾಧ್ಯವಾಗುವುದಾದರೂ ಹೇಗೆ? ಬಸವಣ್ಣನವರ ಈ ಮಾತುಗಳಲ್ಲಿ ಸಾಮಾಜಿಕ ಪದ್ಧತಿಯಿಂದ ಉಂಟಾಗುತ್ತಿರುವ ವಿಷಮ ದಾಂಪತ್ಯದ ಅಸಮ ಬದುಕಿನ ಹೊಳಹುಗಳಿವೆ. ಬಸವಣ್ಣನ ಅವಲೋಕನಾ ದೃಷ್ಟಿ ಮತ್ತು ಗ್ರಹಿಕೆಗಳು ಅಸಾಧಾರಣವಾಗಿದ್ದವು ಎಂಬುದರ ಮೇಲೆ ಈ ವಚನ ಬೆಳಕು ಚೆಲ್ಲುತ್ತದೆ. ಈ ಬಗೆಯ ಅಸಮ ಸಂಬಂಧಗಳಲ್ಲಿ - ಅಂದರೆ ಸಮರತಿ ಮತ್ತು ಸಮಸುಖಗಳು ಸಾಧ್ಯವಾಗದಿರುವ ಸಂದರ್ಭದಲ್ಲಿ - ಲಿಂಗವ ಪೂಜಿಸಿ ದೈವಭಕ್ತರೆನ್ನಿಸಿಕೊಂಡರೆ ಏನು ಪ್ರಯೋಜನ? ಸಮರತಿ - ಸಮಸುಖಗಳನ್ನು ಸಾಧಿಸಲಾಗದವರು ಲಿಂಗವ ಪೂಜಿಸುವುದು ಆತ್ಮವಂಚನೆ ಆಗುತ್ತದೆ. ಅದು ಲೋಕ ಮೆಚ್ಚಿಸಲು ಆಡುವ ಡಾಂಬಿಕತೆಯ ಮತ್ತೊಂದು ಆಟ. ಅದು ಸಲ್ಲದು. ಅಂತರಂಗ ಶುದ್ಧಿಯಾಗದೆ, ಬಹಿರಂಗ ಶುದ್ಧಿ ಸಾಧ್ಯವಿಲ್ಲ. ಬಸವಣ್ಣ ಭಾವನೆಗಳಿಗೆ - ಆತ್ಮಚಿಂತನೆಗೆ ಹೆಚ್ಚು ಆದ್ಯತೆ ನೀಡಿದವನು. ಆದುದರಿಂದ ಅವನು ಬಾಹ್ಯ ಪೂಜೆಯನ್ನು - ಅವನು ಭಕ್ತನಾದರೂ - ಎರಡನೆಯ ಸ್ಥಾನಕ್ಕಿಳಿಸುತ್ತಾನೆ. ಅವನಿಗೆ ಗೊತ್ತು, ಕೇವಲ ಪೂಜೆಯಿಂದ ಲಿಂಗನೊಲಿಯನೆಂದು. ಹೆಣ್ಣು ಗಂಡುಗಳು ಸಮಸಮವಾಗಿ ರತಿಸುಖವನ್ನು ಅರ್ಪಿಸಿಕೊಂಡಾಗ ಮಾತ್ರ ಸಮಸುಖ ಪ್ರಾಪ್ತವಾಗುತ್ತದೆ. ಈ ಅರ್ಪಣೆಯ ನೆಲೆ ಲಿಂಗನಿಗೂ ಪ್ರಿಯ. ಈ ರೀತಿ ದೇಹ ಮನಸ್ಸುಗಳು ಕೂಡಿದಾಗ ಮಾತ್ರ ಸಮಾಗಮಕ್ಕೊಂದು ತೇಜಸ್ಸು ಬರುತ್ತದೆ. ಅದು ಗಂಡಿನದೂ ಅಲ್ಲ, ಹೆಣ್ಣಿನದೂ ಅಲ್ಲ. ಸಮಾನ ಸಮಾಗಮದಿಂದ ಉದ್ಭವವಾಗುವ 'ಸಮಕಳೆ'. ದೈಹಿಕ ನೆಲೆಯನ್ನು ಮೀರಿ ಪ್ರಾಪ್ತವಾಗುವ ಸುಖವಿದು. ಇದರಲ್ಲಿ ಸ್ವಾಭಿಮಾನದ ರಕ್ಷಣೆಯಿದೆ. ಸ್ವಾಭಿಮಾನ ಪೂರಕವಾಗಿ ಸಮತೆಯನ್ನು ಅನುಭವಿಸುವ ಸುಖವಿದು.

ಸಮಾನತೆಯ ಸುಖವೆಂಬುದು ಪ್ರಾಪ್ತವಾಗುವುದು 'ನನ್ನದು' ಎಂಬ ಅಹಂಕಾರವನ್ನು ಇಲ್ಲವಾಗಿಸಿಕೊಂಡ ಸ್ಥಿತಿಯಲ್ಲಿ ಮಾತ್ರ. ನಮ್ಮತನದ ಗುರುತು ಸಿಗದಂತೆ ಒಬ್ಬರಲ್ಲೊಬ್ಬರು ಬೆರೆಯಬೇಕು. ಆ ಸ್ಥಿತಿಯನ್ನು ಬಸವಣ್ಣ ಅದ್ಭುತವಾದ ಉಪಮಾತೀತ ರೂಪಕದಲ್ಲಿ ಹೀಗೆ ನುಡಿದಿದ್ದಾನೆ : 'ನದಿಯಲ್ಲಿ ನದಿ ಬೆರೆಸಿದಂತಾಗಬೇಕು' ಇದು ನಿಜವಾದ ಸಮತೆಯ ಸ್ಥಿತಿ. ಹೆಣ್ಣು ಗಂಡಿನ ಸಂಬಂಧದ ನೈಜ ಸ್ವರೂಪ ಇರಬೇಕಾದದ್ದು ಹೀಗೆ.

ಈ ವಚನ ತುಂಬ ಸಂಕೀರ್ಣವಾದುದು. ಇದು ಕೇವಲ ಲಿಂಗ ಸಂಬಂಧವನ್ನು ಕುರಿತು ಮಾತನಾಡುತ್ತಿಲ್ಲ. ತನ್ನ ಆಂತರ್ಯದಲ್ಲಿ ವರ್ಣ - ವರ್ಗಭೇದ ಕುರಿತು - ಅಲ್ಲಿ ಸಾಧಿತವಾಗಬೇಕಾದ ಸಮಾನತೆಯನ್ನು ಕುರಿತು ಮಾತನಾಡುತ್ತದೆ. ಮಾನವರೆಲ್ಲರೂ ಸಹಜ ಪ್ರೀತಿಯಿಂದ ಸಮಾನ ಮನೋಧರ್ಮದಿಂದ ನದಿಯಲ್ಲಿ ನದಿ ಬೆರೆತಂತೆ ಬದುಕು ಸಾಗಿಸಬೇಕು. ಇಲ್ಲದಿದ್ದಲ್ಲಿ ಪೂಜೆ ನಿರರ್ಥಕವೆಂದು ತಿಳಿಸುತ್ತದೆ.

೨೬-೦೧-೨೦೧೨

# ಅಧ್ಯಾತ್ಮ

ಮತ್ತೆ ಇತ್ತೀಚಿನ ದಿನಗಳಲ್ಲಿ ಬಹು ಚಾಲ್ತಿಯ ವಿಷಯವಾಗಿರುವ ಅಧ್ಯಾತ್ಮವಾದವು ಒಂದು ಸೈದ್ಧಾಂತಿಕ ಸ್ವರೂಪದಲ್ಲಿ ಚರ್ಚಿತವಾಗುತ್ತಿಲ್ಲ. ಅಲ್ಲದೆ, ಅದು ಸಾಧಾರಣ ಮಟ್ಟದ ಭಕ್ತಿ - ಆರಾಧನೆಯ ಆಚರಣೆಯ ಸ್ವರೂಪದಲ್ಲಿ ಅಭಿವ್ಯಕ್ತವಾಗುತ್ತಿದೆ. ದೇಶದ ಜನಜೀವನದಲ್ಲಿ ಅರ್ಥಸಮೃದ್ಧಿಯು ಅಧಿಕಗೊಂಡಂತೆಲ್ಲಾ, ಸುಖದ ಅನ್ವೇಷಣೆಯ ಅಂತಿಮ ಸಾಧನವಾಗಿ 'ಅಧ್ಯಾತ್ಮ' ಕೆಲಸ ಮಾಡುತ್ತದೆಯೆಂದು ಎಲ್ಲ ಬಗೆಯ ಮಾಧ್ಯಮಗಳು ಸಾರ ಹೊರಟಿವೆ. ಅಧ್ಯಾತ್ಮದ ಮಹಿಮೆಯನ್ನು ಮಾಧ್ಯಮಗಳ ಜೊತೆಗೆ; ಗಲ್ಲಿಗಲ್ಲಿಗಳಲ್ಲಿ ಸದಾ ನಡೆಯುತ್ತಿರುವ ಧಾರ್ಮಿಕ ಗೋಷ್ಠಿಗಳು, ಪ್ರವಚನಗಳು, ದೈವಾರಾಧನೆಗಳು ನಿರಂತರ ಕರ್ಮವೆಂಬಂತೆ ಹೇಳಹೊರಟಿವೆ. ಅಧ್ಯಾತ್ಮ ತಿಳಿವಳಿಕೆಯಿಂದ ಸಮಾಜದಲ್ಲಿ ಧಾರ್ಮಿಕ ವಾತಾವರಣ ಮೂಡಿ, ನಮ್ಮ ಪುರಾತನ - ಸನಾತನ ಸಂಸ್ಕೃತಿಯು ಮತ್ತಷ್ಟು ಗಟ್ಟಿಯಾಗಿ, ಜನಜೀವನದಲ್ಲಿ ನೈತಿಕತೆ ಮೂಡುತ್ತದೆಯೆಂದು ಭಾವಿಸಲಾಗಿದೆ.

ಈ ಅಧ್ಯಾತ್ಮವಾದವನ್ನು ನಮ್ಮ ಸಾಂಪ್ರದಾಯಿಕ ದೇವಾಲಯಗಳೂ ಮಠಮಾನ್ಯಗಳೂ ಸಂರಕ್ಷಿಸುತ್ತಿವೆ. ಸಾಲದೆಂಬಂತೆ, ಆಧುನಿಕ ಅಧ್ಯಾತ್ಮ ಗುರುಗಳು ಸೃಷ್ಟಿಗೊಂಡು, ಅವರಿಂದ ಆಧುನಿಕ ತಂತ್ರಜ್ಞಾನದ ಮೂಲಕ ಆಧ್ಯಾತ್ಮಿಕ ಜ್ಞಾನ ನಿತ್ಯ ಪ್ರಸರಣಗೊಳ್ಳುತ್ತಿದೆ. ಸಾಂಪ್ರದಾಯಿಕ ಮಠಮಾನ್ಯಗಳಿಗಿಂತ ಇಂಥ ಗುರುಗಳು ವಿಶೇಷ ಶ್ರೀಮಂತ ಶೋಭೆಯಿಂದ ಕಂಗೊಳಿಸುತ್ತಾರೆ. ದೇಶವಿದೇಶಗಳಲ್ಲಿ ಶಾಖೆಗಳನ್ನು ಸ್ಥಾಪಿಸಿ ಜಗತ್ತಿನ ಪ್ರಕ್ಷುಬ್ಧ ಮನಸ್ಸುಗಳನ್ನು ಶಾಂತತೆಯತ್ತ ನೇರ್ಪುಗೊಳಿಸಲು ಇವರು ಅಗಾಧವಾಗಿ ಶ್ರಮಿಸುತ್ತಿದ್ದಾರೆ! ಮನುಷ್ಯಮನುಷ್ಯರ ನಡುವಿನ ಅಂತರ - ಅಸಮಾನತೆ; ಅವರನ್ನು ಕಿತ್ತು ತಿನ್ನುತ್ತಿರುವ ಬಡತನ; ಮೌಢ್ಯಾದಿ ಅವೈಜ್ಞಾನಿಕ ನಡವಳಿಕೆಗಳು ಮತ್ತು ಯುದ್ಧ ಭಯೋತ್ಪಾದನೆಯಂಥ ಕ್ರೌರ್ಯಗಳು ಇಂಥ ಅಧ್ಯಾತ್ಮ ಗುರುಗಳಿಂದ ಮಾಯವಾಗುತ್ತದೆಯೆಂದು ಅವರ ಶಿಷ್ಯರು ಪ್ರಚಾರ ಮಾಡುತ್ತಿದ್ದಾರೆ.

ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿ 'ಅಧ್ಯಾತ್ಮ'ವನ್ನು ಆತ್ಮಕ್ಕೆ ಸಂಬಂಧಿಸಿದ ಜ್ಞಾನವೆಂದು ಬಗೆದಿದ್ದಾರೆ. ಅದು ಭೌತಿಕವಾದುದಲ್ಲ. ಜೀವಾತ್ಮ ಪರಮಾತ್ಮಗಳ ಸಂಬಂಧಗಳನ್ನು ಅರಿಯುವ ಒಂದು ಪರಿಕ್ರಮ, ತಿಳಿವಳಿಕೆ. ಅದು ಮುಖ್ಯವಾಗಿ ಬ್ರಹ್ಮಜ್ಞಾನವನ್ನು ಕುರಿತು ಮಾತನಾಡುತ್ತದೆ. ಆದ್ದರಿಂದ ಅಧ್ಯಾತ್ಮದ ತಿಳಿವಳಿಕೆಯನ್ನು ಬ್ರಹ್ಮವಿದ್ಯೆಯೆಂದು ಸಹ ಕರೆಯಲಾಗಿದೆ. ಇಹದ ಜೀವನ ಮುಖ್ಯವಲ್ಲ. ಪರಸತ್ಯವನ್ನು ಅರಿಯುವ ಸಾಧನೆಯ ಮಾರ್ಗವೇ ಅಧ್ಯಾತ್ಮ, ಆತ್ಮೋನ್ನತಿಯೇ ಜೀವನದ ಅಂತಿಮ ಗುರಿ, ಅದೇ ಜೀವದ ಸಾಧನೆ. ಆತ್ಮ ಪರಮಾತ್ಮನನ್ನು

ಕೂಡಿದಾಗ ಅಥವಾ ಭಕ್ತ ಭಗವಂತನ ಸಾನ್ನಿಧ್ಯ ಪಡೆದಾಗ ಐಕ್ಯಸ್ಥಿತಿ ಸಾಧ್ಯವಾಗುತ್ತದೆ. ಆಗ ಪಡೆಯುವ ಸುಖವನ್ನು ಬ್ರಹ್ಮಾನಂದವೆಂದೂ ಆನಂದ ರಸವೆಂದೂ ಪರಿಗಣಿಸಲಾಗುತ್ತದೆ. ಅಧ್ಯಾತ್ಮ ತಿಳಿವಳಿಕೆಯನ್ನು ಮನುಷ್ಯ ಪಡೆಯಬಹುದಾದ ಅತ್ಯಂತ ಎತ್ತರದ ಮತ್ತು ಕಟ್ಟಕಡೆಯ ಜ್ಞಾನವೆಂದು ವ್ಯಾಖ್ಯಾನಿಸಲಾಗಿದೆ. ಕುವೆಂಪು ಅವರು ಕೂಡ ಅಧ್ಯಾತ್ಮದ ನಿಲುವನ್ನು ಅಂತಿಮ ಸತ್ಯವೆಂದು ಹೇಳುತ್ತಾರೆ. ಆಧ್ಯಾತ್ಮಿಕತೆಯು ತಂದು ಕೊಡುವ ಈ ಬ್ರಹ್ಮಾನಂದದ ಅನುಭೂತಿಯನ್ನು ನಮ್ಮ ಋಷಿಮುನಿಗಳು ಕಂಡಿದ್ದಾರೆಂದೂ ಅದು ಅವರು ಕಂಡಿರಿಸಿದ ಅನುಭವವೆಂದೂ ತಿಳಿಯಲಾಗಿದೆ.

ಪ್ರಶ್ನೆ ಮೂಡುವುದು ಇಲ್ಲಿಯೇ. ಬ್ರಹ್ಮಾನಂದವೆಂದರೇನು? ಈ ಆನಂದಾನುಭಾವ ಹೇಗಿರುತ್ತದೆ? ಅದರ ಮೂರ್ತ ಅನುಭವ ಸ್ವರೂಪವೆಂಥದು? ಅದರ ಅನುಭಾವದ ನಂತರದ ಸ್ಥಿತಿಯೇನು? ಅದರಿಂದ ಜೀವಕ್ಕಾಗುವ ಅಂತಿಮ ಸತ್ಯದ ತಿಳಿವಳಿಕೆ ಎಂಥದು? - ಈ ಬಗೆಯ ಪ್ರಶ್ನೆಗಳಿಗೆ ನಿಖರವಾದ ಉತ್ತರಗಳು ದೊರಕುವುದಿಲ್ಲ. ಕೆಲವು ಪಾಶ್ಚಾತ್ಯ ವಿದ್ವಾಂಸರುಗಳ ಪ್ರಕಾರ ಇಂಥ ಅನುಭವಗಳೆಲ್ಲವೂ ಭ್ರಮಾಜನ್ಯವಾದವು. ಪೂರ್ವಕಲ್ಪಿತ ತಿಳಿವಳಿಕೆಯ ಮನೋವಿಕಲ್ಪತೆಯ ಸ್ಥಿತಿಯನ್ನು ಬ್ರಹ್ಮಾನಂದವೆಂದು ಬರೆಯಲಾಗಿದೆಯೆಂದು ಕೂಡ ಹೇಳುವವರಿದ್ದಾರೆ.

ಇಂದು ಅಧ್ಯಾತ್ಮವೆಂಬುದು ಮತಧರ್ಮಾದಿಗಳ ಆಚರಣೆಯ ಮಟ್ಟಕ್ಕೆ ಬಂದು ಮುಟ್ಟಿದೆ. ಧಾರ್ಮಿಕ ಆಚರಣೆಗಳೆಲ್ಲವನ್ನೂ - ಜ್ಯೋತಿಷ್ಯ, ಯಜ್ಞ, ಯಾಗ, ಮಾಟ, ಮಂತ್ರಗಳನ್ನು ಕೂಡ - ಅಧ್ಯಾತ್ಮದಡಿಯಲ್ಲಿ ತಂದು ಮಾತನಾಡುತ್ತಿರುವುದನ್ನು ಕಾಣುತ್ತಿದ್ದೇವೆ.

ಅಧ್ಯಾತ್ಮವನ್ನು ಪಾಶ್ಚಾತ್ಯರು 'ಸ್ಪಿರಿಚುಯಾಲಿಟಿ' ಎಂದು ಕರೆಯುತ್ತಾರೆ. ಅಲ್ಲಿ ನಮ್ಮ ಪರಿಭಾಷೆಯ ವ್ಯಾಪ್ತಿ, ವಿಸ್ತಾರಗಳಿಲ್ಲ. ಅದು ಧಾರ್ಮಿಕ ನಂಬಿಕೆ ಮತ್ತು ಆಚರಣೆಗಳನ್ನು ಕುರಿತು ಹೇಳುತ್ತದೆ. ಸತ್ತವರ ಪ್ರೇತಾತ್ಮಗಳನ್ನು ಕರೆದು, ಅವುಗಳೊಡನೆ ಮಾತನಾಡುವವನನ್ನು 'ಸ್ಪಿರಿಚುಯಲಿಸ್ಟ್' ಎಂದು ಕರೆಯುತ್ತಾರೆ.

೦೯-೦೨-೨೦೧೨

## ಅಯ್ಯೋ ದೇವರೆ....!

ಇದು ಆಸ್ತಿಕರು ಸುಖದುಃಖ ಸಂದರ್ಭಗಳೆರಡರಲ್ಲೂ ಸಮಾನವಾಗಿ ತೆಗೆಯುವ ಉದ್ಗಾರ. ಸಂತೋಷದಲ್ಲೂ ದೇವರನ್ನು ನೆನೆಯುತ್ತಾರೆ; ದುಃಖದಲ್ಲೂ ನೆನೆಯುತ್ತಾರೆ. ಈ ನೆನೆಯುವಿಕೆಯ ಉದ್ಗಾರ ಅಂತರಾಳದಿಂದ ಪ್ರಜ್ಞಾಪೂರ್ವಕವಾಗಿ ಚಿಮ್ಮಿದ ಆರ್ತ ಸ್ಫೋಟವೆಂದು ಬಗೆಯುವುದು ತುಸು ಕಷ್ಟವಾಗುತ್ತದೆ. 'ಅಯ್ಯೋ ದೇವರೆ' ಎಂಬ ಮಾತು ವ್ಯಕ್ತಿಯ ವೈಯಕ್ತಿಕ ಅಭಿವ್ಯಕ್ತಿಯೆಂದು ಬಗೆಯುವುದಕ್ಕಿಂತ ಅದು ಸಮುದಾಯದ ಸಾಂಪ್ರದಾಯಿಕ ನಂಬಿಕೆ. ಅಪ್ರಜ್ಞಾಪೂರ್ವಕವಾಗಿ ಅವನಲ್ಲಿ ನೆಟ್ಟಿರುವ ಉದ್ಗಾರ! ಸುಖದುಃಖಗಳಲ್ಲಿ ಈ ಬಗೆಯ ಉದ್ಗಾರ ತೆಗೆಯಬೇಕೆಂದು ತಲೆತಲಾಂತರದಿಂದ ವಂಶವಾಹಿಗಳಲ್ಲಿ ಬೆರೆತುಹೋಗಿರುವ ಆಸ್ತಿಕ ನೆಲೆಯ ಶಿಕ್ಷಣ ಕಲಿಸಿರುವ ಒಂದು ಅಭಿವ್ಯಕ್ತಿ ಇದೆಂದು ಭಾವಿಸಬೇಕು. ಏಕೆಂದರೆ ಹೀಗೆ ಉದ್ಗಾರ ತೆಗೆಯುವ ವ್ಯಕ್ತಿಯ ಸ್ಥಿತಿ ಸಂದರ್ಭಗಳನ್ನು ಗಮನಿಸಿದಾಗ ಅವನು ಉದ್ದೇಶ ರಹಿತವಾಗಿ, ಆವಶ್ಯಕತೆ ಇಲ್ಲದೆಯೂ ಈ ಬಗೆಯ ಸ್ವರ ಹೊರಡಿಸುವುದನ್ನು ಗಮನಿಸಬಹುದು. ಅಂದರೆ ಇದನ್ನು ಒಂದು ಸಮುದಾಯದ ಸಾಂಪ್ರದಾಯಿಕ ಆಚರಣೆ ಸ್ವರೂಪದ ಉಕ್ತಿ ಎಂದೇ ತಿಳಿಯಬೇಕು.

ಈ ಬಗೆಯ ಉದ್ಗಾರ ಎಲ್ಲ ಮತ ಸಮುದಾಯಗಳಲ್ಲೂ ಇದೆ. ಆ ಸಮುದಾಯ ನಂಬಿದ 'ದೇವರು' ಈ ಉದ್ಗಾರದ ಹಿನ್ನೆಲೆಯಲ್ಲಿ ಮೂರ್ತಗೊಂಡಿರುತ್ತಾನೆ. 'ನಂಬಿ ಕರೆದರೆ ಓ ಎನ್ನನೇ.....' ಎಂಬ ನಂಬಿಕೆಯೇ ಎಲ್ಲ ಕಡೆ ಮುಖ್ಯವಾಗಿ ಕೆಲಸ ಮಾಡುತ್ತಿರುತ್ತದೆ. 'ಓ ಮೈ ಕ್ರೈಸ್ಟ್....' ಅಥವಾ 'ಅಲ್ಲಾ ಹೋ.......' ಎಂಬ ಉದ್ಗಾರಗಳು ಹಿಂದೂಗಳ ಈ ಬಗೆಯ ಉದ್ಗಾರಗಳಿಗೆ ಸಮಾನಾಂತರ ಪದಗಳು. ಬೇರೆಯವರು ಮಾನಸಿಕ ಅಥವಾ ದೈಹಿಕ ಹಿಂಸೆಯನ್ನು ನೀಡುತ್ತಿರುವಾಗ ಅದನ್ನು ಅನುಭವಿಸುತ್ತಿರುವವರ ಬಾಯಲ್ಲಿ ಈ ಉದ್ಗಾರ ಸಹಜವಾಗಿ ಬರುತ್ತದೆ. ಈ ಬಗೆಯ ಕ್ರೌರ್ಯವನ್ನು ನೋಡುತ್ತಿರುವ ಹೃದಯವಂತರು ಕೂಡ ಮರುಗಿ ಈ ಉದ್ಗಾರವನ್ನು ಹೊರಡಿಸುತ್ತಾರೆ. ಇಂಥ ಸಂದರ್ಭದಲ್ಲಿ ನಂಬಿಕೆಯ ಈ ಆರ್ತತೆಯು ಅಸಹಾಯಕತನದಿಂದ ಬರುವಂಥದು. ಗಂಡ-ಹೆಂಡತಿ ಮಕ್ಕಳ ಮೇಲೆ, ಯಜಮಾನ-ದಾಸರ ಮೇಲೆ, ಪ್ರಭುತ್ವ - ಜನಸಾಮಾನ್ಯರ ಮೇಲೆ ನಡೆಸುವ ಇಂಥ ಕ್ರೌರ್ಯಗಳು ಚರಿತ್ರೆಯುದ್ದಕ್ಕೂ ಸಾಗಿ ವರ್ತಮಾನದ ಸತ್ಯವಾಗಿವೆ. ಆದರೆ ಆಸ್ತಿಕ ಹೃದಯಗಳು ನಂಬಿ ಕರೆಯುವುದನ್ನು ಮಾತ್ರ ನಿಲ್ಲಿಸಿಲ್ಲ.

ಈ ಉದ್ಗಾರ ಕೇವಲ ಆಸ್ತಿಕರನ್ನು ಮಾತ್ರ ಆವರಿಸಿಕೊಂಡಿಲ್ಲ. ಈ ಆಸ್ತಿಕ ಸಮುದಾಯದಲ್ಲಿಯೇ ಹುಟ್ಟಿ, ಅಲ್ಲೇ ಬೆಳೆದು, ಅಲ್ಲಿನ ಭಾಷಿಕ ಪರಿಕಲ್ಪನೆಗಳನ್ನೇ ತನ್ನ

ಸಂವಹನ ಸಾಧ್ಯತೆಗೆ ಬಳಸಿಕೊಂಡು, ಸ್ಥಾಪಿತ ಮೌಲ್ಯಗಳನ್ನು ದೇವರನ್ನು ಮತ ಮೌಢ್ಯಗಳನ್ನು ಪ್ರಶ್ನೆ ಮಾಡಿ ವೈಚಾರಿಕ ಜಾಗೃತಿ ಮೂಡಿಸಲು ಯತ್ನಿಸುವ ವಿಚಾರವಾದಿಯೂ ಕೂಡ ತನಗರಿವಿಲ್ಲದಂತೆ ಈ ಉದ್ಗಾರವನ್ನು ಒಮ್ಮೊಮ್ಮೆ ತೆಗೆದುಬಿಡುತ್ತಾನೆ. ಅಂದಮಾತ್ರಕ್ಕೆ ಅವನಿಗೆ ದೇವರಲ್ಲಿ ನಂಬಿಕೆಯಿದೆ ಎಂದರ್ಥವಲ್ಲ. ಆ ಉದ್ಗಾರ ಅವನಲ್ಲಿ ಸಮುದಾಯ ನಡೆಸಿಕೊಡುವ ಕ್ರಿಯೆಯಷ್ಟೆ. ನಮ್ಮ ನಡುವಿನ ಮಹಾನ್ ವಿಚಾರವಾದಿಯಾಗಿದ್ದ ಎಚ್. ನರಸಿಂಹಯ್ಯನವರು ಈ ಬಗೆಯ ಉದ್ಗಾರವನ್ನು ಮಾಡುತ್ತಿದ್ದರು - ವಾದ ವಿವಾದಗಳನ್ನು ಮಾಡುವಾಗ, ಸಂವಾದ ನಡೆಸುವಾಗ ಮತ್ತು ಭಾವೋದ್ವೇಗಕ್ಕೆ ಒಳಗಾದಾಗ, 'ದೇವರು' ಎಂಬ ಮಹತ್ತ್ವದ ಗ್ರಂಥವನ್ನು ಬರೆದ ಎ.ಎನ್. ಮೂರ್ತಿರಾಯರು ದೇವರನ್ನು ನಂಬದವರು, ನಾಸ್ತಿಕರು. ಅವರು ಕೂಡ ದೇವರನ್ನು ನಂಬಿ ಆ ಸುಳಿಯಲ್ಲಿ ಸಿಲುಕಿ ನರಳುತ್ತಿರುವ ಆಸ್ತಿಕರಿಗೆ 'ನೀನು ಇದ್ದುದ್ದೇ ಆದರೆ ಅವರಿಗೆ ಆ ಬಗ್ಗೆ ತಿಳಿವಳಿಕೆ ನೀಡು' ಎಂದು ನಿರ್ದೇಶನ ಮಾಡಿದ್ದರು.

ಮತಪೂರ್ವ ದಿನಗಳ ಮಾನವನು ಅತೀತ ಶಕ್ತಿಗಳಲ್ಲಿ ನಂಬಿಕೆಯಿಟ್ಟಿದ್ದನು. ಅವನ ನಿಗೂಢ ಶಕ್ತಿಗಳ ನಂಬಿಕೆ ಈಗಿನಂತೆ ಮೂರ್ತಸ್ವರೂಪದ ವ್ಯಕ್ತಿಶಕ್ತಿಗಳಲ್ಲಿ ಆರೋಪಿತವಾಗಿರಲಿಲ್ಲ. ಅವನು ಇಂದಿನವರಿಗಿಂತ ಪ್ರಕೃತಿಗೆ ಹತ್ತಿರದವನಾಗಿದ್ದುದರಿಂದ ಅವನ ಗ್ರಹಿಕೆ ಸೂಕ್ಷ್ಮವಾಗಿತ್ತು. ಆದುದರಿಂದ ನಿಗೂಢ ಶಕ್ತಿಗಳನ್ನು ಪ್ರಕೃತಿಶಕ್ತಿಗಳಲ್ಲಿ ಗುರುತಿಸಲು ಪ್ರಯತ್ನಿಸಿದ. ಅವನು ಆ ಶಕ್ತಿಗಳನ್ನು ಗಾಳಿ, ಬೆಳಕು, ನೀರು, ನೆಲಗಳಲ್ಲಿ ಕಂಡುಕೊಳ್ಳುವ ತಿಳಿವಳಿಕೆಯನ್ನು ಹೊಂದಿದ್ದ. ಈ ಮೂಲಭೂತ ಪ್ರಕೃತಿ - ಅನುಭವಗಮ್ಯ ಶಕ್ತಿಗಳನ್ನು ಸೀಮಿತ ಆಕಾರಕ್ಕೆ ಇಳಿಸಿ ಮತಲೇಪನ ಮಾಡಿ ಹೆಸರು ನೀಡಿದ ನಂತರ ಈ ಎಲ್ಲ ಅನರ್ಥ ನಂಬಿಕೆಗಳು ಪ್ರಾರಂಭಗೊಂಡವು.

ಇಂದು ದೇವರು ಆಸ್ತಿಕರ ಮೌಢ್ಯದಲ್ಲಿ ಸಿಲುಕಿ ಪಡುತ್ತಿರುವ ಪರಿಪಾಟಲುಗಳನ್ನು ನೋಡಿದಾಗ ಅವನ ಬಗ್ಗೆ ಕನಿಕರ ಮೂಡಿ, ಸಹಜವಾಗಿಯೇ 'ಅಯ್ಯೋ ದೇವರೇ' ಎಂಬ ಉದ್ಗಾರ ಹೊರಹೊಮ್ಮುತ್ತದೆ!

೨೩-೦೨-೨೦೧೨

## ಸರ್ವಜ್ಞ ಗರ್ವದಿಂದಾದವನೆ.....?

ಸಾಗರದ ಅಪಾರತೆಯನ್ನು ಮತ್ತು ಅದು ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡಿರುವ ಅಸಂಖ್ಯಾತ ಜೀವರಾಶಿಯನ್ನು ಗಮನಿಸಿದಾಗ : ಆಕಾಶದ ಅನಂತತೆಯಲ್ಲಿರುವ ಕೋಟ್ಯನುಕೋಟಿ ನಕ್ಷತ್ರಾದಿ ಆಕಾಶಕಾಯಗಳನ್ನು ನೋಡಿದಾಗ; ಅಷ್ಟೇ ಏಕೆ, ನಮ್ಮೀ ವಸುಂಧರೆಯ ವೈವಿಧ್ಯಮಯ ಜೀವಸಂಕುಲಗಳನ್ನು, ಅದರ ಮೇಲೆ ಸೃಷ್ಟಿಗೊಂಡಿರುವ ಪ್ರಕೃತಿ ವಿಶಿಷ್ಟತೆಗಳನ್ನು, ಅದರ ಅಂತ್ಯದಲ್ಲಿರುವ ನಿಗೂಢಗಳನ್ನು ಅರಿಯಲೆತ್ನಿಸಿದಾಗ ಮಾನವನ ತಿಳಿವಿನ ಅಲ್ಪತೆ ಅರಿವಿಗೆ ಬರುತ್ತದೆ. ಎಲ್ಲವನ್ನು ಬಲ್ಲೆನೆಂಬ ಅಹಂಕಾರದ ರಸ ಪಂಪಕವಿ ಹೇಳುವ ಹಾಗೆ ತೊಟತೊಟನೆ ಸೋರಿ ಹೋಗುತ್ತದೆ. ನಾವು ತಿಳಿಯಬೇಕಾದುದು, ಕಲಿಯಬೇಕಾದುದು, ಅನಂತವಾದುದು. ಈ ಜಗತ್ತು, ಈ ವಿಶ್ವ, ನಿನ್ನೆಮೊನ್ನೆಯ ಸೃಷ್ಟಿಯಲ್ಲ. ಅದರ ರಚನೆ ಪ್ರಾರಂಭಗೊಂಡೇ ಅನಂತ ಲಕ್ಷ ವರ್ಷಗಳಾಗಿದ್ದು, ಅದು ಸದಾ ಚಲನಶೀಲವಾಗಿದ್ದು, ಪರಿವರ್ತನಾಶೀಲವಾಗಿದ್ದು, ಅಮೂರ್ತತೆಯ ಅನಂತ ಸ್ವರೂಪಗಳಲ್ಲಿ ಸಾಗುತ್ತಲೇ ಇದೆ. ಅಂದಿನಿಂದ ವರ್ತಮಾನದವರೆಗೆ ಪ್ರಕೃತಿ ಸೃಷ್ಟಿಸಿದ ವೈಶಿಷ್ಟ್ಯ-ವೈಚಿತ್ರ್ಯಗಳ ಜೊತೆ ಇಲ್ಲಿನ ಅಪಾರ ಜೀವಸಂಕುಲ ತನ್ನ ಅನಂತ ಜೀವನ ಯಾತ್ರೆಯಲ್ಲಿ ಬರೆದ - ಸಂಸ್ಕೃತಿ ನಾಗರಿಕತೆಗಳು ಚರಿತ್ರೆಯಾಗಿ ವರ್ತಮಾನಕ್ಕೆ ಚಾಚಿಕೊಂಡಿವೆ. ಇಂಥ ಅಪಾರ ಜ್ಞಾನರಾಶಿಯನ್ನು ಅರಿತಿದ್ದೇನೆಂದು ಪರಿಕಲ್ಪಿಸಿಕೊಳ್ಳುವುದು ಕೇವಲ ಅಹಂಕಾರದ ವಿಷಯವಾಗುವುದಿಲ್ಲ; ಅದು ಅವನ ಅಜ್ಞಾನದ, ಅಲ್ಪತೆಯ ಮತ್ತು ಮುಗ್ಧತೆಯ ವಿಷಯವಾಗುತ್ತದೆ. ಜ್ಞಾನದ ಅಪಾರತೆಯ ಮುಂದೆ ವ್ಯಕ್ತಿ ತನ್ನ ಮಿತಿಯನ್ನು ಅರಿತುಕೊಂಡಾಗ ವಿನಯವೆಂಬುದು ತನಗೆ ತಾನೇ ಮೂಡುತ್ತದೆ. 'ಶರಣು' ಎಂದವರಿಗೆ 'ಶರಣು ಶರಣು' ಎಂದು ಮಾರ್ನುಡಿದ ಬಸವಣ್ಣನಿಗೆ ಇದು ಚೆನ್ನಾಗಿ ತಿಳಿದಿದ್ದರಿಂದಲೇ ಅವನು ಮಹಾಮಾನವನಾದನು.

ಹಾಗಾದರೆ 'ಸರ್ವಜ್ಞ'ನೆಂಬ ಪದ ನಮ್ಮ ಸಂಸ್ಕೃತಿ ಮೀಮಾಂಸೆಯಲ್ಲಿ ಏಕೆ ಸೇರಿಕೊಂಡಿತು? 'ಓಮ್ನಿಸ್ಯೆಂಟ್' ಎಂಬ ಉಕ್ತಿಯೂ ಪಾಶ್ಚಿಮಾತ್ಯರಲ್ಲಿದೆ. ವರ್ತಮಾನದ ಒಂದು ಬಿಂದುವಿನಲ್ಲಿ ನಿಂತುಕೊಂಡು ಅರಿವನ್ನು ಶೋಧಿಸಹೊರಡುವ ವ್ಯಕ್ತಿ ಅಪಾರತೆಯನ್ನು ಅರಿಯುವುದಾದರು ಹೇಗೆ ಸಾಧ್ಯ? ಅವನ ಅರಿವು, ಶ್ರದ್ಧೆ, ಗ್ರಹಿಕೆ, ಅಧ್ಯಯನ, ಅನುಭವಗಳ ಮಿತಿಯ ವ್ಯಾಪ್ತಿಯಲ್ಲಿ ಲಭ್ಯವಾಗುತ್ತದೆ. ಅದು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುತ್ತಾ ಜ್ಞಾನದ ಮೇಲು ಕೀಳುಗಳನ್ನು ಸೃಷ್ಟಿಸುತ್ತದೆ. ಈ ತಿಳಿವು ನಮ್ಮ ಮೀಮಾಂಸಕಾರರಿಗೆ ಇದ್ದುದರಿಂದಲೇ ಬಹುಶಃ ಅವರು 'ಸರ್ವಜ್ಞ'ನೆಂದರೆ ವ್ಯಕ್ತಿಯಲ್ಲ, ಅದೊಂದು ತತ್ತ್ವ ಅಥವಾ ಅರಿವಿನ ಸಂಕೇತವೆಂದು ಕರೆದರು.

ಈ ಬಗೆಯಲ್ಲಿ ಪರಿಭಾವಿಸಲು ವಿಫಲರಾದ ಧಾರ್ಮಿಕ ಬುದ್ಧಿಯುಳ್ಳವರು 'ಸರ್ವಜ್ಞ'ನೆಂದರೆ 'ಪರಮಾತ್ಮ', 'ಪರಬ್ರಹ್ಮ', 'ಜಿನ', 'ಬುದ್ಧ', 'ಏಸು', 'ಪೈಗಂಬರ್' ಎಂದೆಲ್ಲಾ ಗುರುತಿಸಲು ಪ್ರಯತ್ನಿಸಿದರು. ಈ ಪ್ರಯತ್ನ ಮಾನವಾತೀತವಾದ ಸರ್ವವನ್ನು ಸೃಷ್ಟಿಸಬಲ್ಲ, ನಿರ್ವಹಿಸಬಲ್ಲ ಸರ್ವಶಕ್ತನೊಬ್ಬನಿದ್ದಾನೆ ಎಂಬ ನಂಬಿಕೆಯ ಆಧಾರದ ಮೇಲೆ ಮೂಡಿರುವಂಥದು. ಆದುದರಿಂದಲೇ ಸರ್ವಶಕ್ತನೆಂದು ಪರಿಭಾವಿಸಲಾದ 'ದೇವರು' ಸೃಷ್ಟಿಯಾದ. ಅವನು ಮತ್ತು ಅವನ ದೂತರು ಸರ್ವಜ್ಞಾನಿಗಳೆಂದು ತೀರ್ಮಾನವಾಗಿಬಿಟ್ಟರು!

ಅನುಭವಿಗಳು ಬದುಕಿನ ಸಾರ ಬಲ್ಲವನನ್ನು ಸರ್ವಜ್ಞನಿರಬಹುದೆಂದು ಗುರುತಿಸುತ್ತಾರೆ. ಇದೊಂದು ಜಿಜ್ಞಾಸೆಗೆ - ತರ್ಕಕ್ಕೆ ಹತ್ತಿರವಾದ ಸತ್ಯ. ಬದುಕಿನ ಸಾರವೆಂದರೆ ಅದರಲ್ಲಿರುವ ರುಚಿ, ಸತ್ತ್ವ, ಬದುಕುವ ಆರೋಗ್ಯಕರ ಮನಸ್ಥಿತಿಯ ನೈತಿಕನೆಲೆಯ ವ್ಯಕ್ತಿಗೆ ಆ ಕಲೆ ಅರ್ಥವಾಗುತ್ತದೆ. ಅವನ ಹೃದಯ ವಿನಯ, ಬದುಕಿನ ಸವಿಯ ರಹಸ್ಯವನ್ನು ಅರಿವ ವಿಶಾಲತೆಯನ್ನು ರೂಢಿಸಿಕೊಳ್ಳುತ್ತದೆ. ತಾನೆಂದರೆ ತಾನಲ್ಲ, ತನ್ನನ್ನೊಳಗೊಂಡ ಸಮಾಜವೆಂಬ ಅರಿವು ಜಾಗೃತಗೊಳ್ಳುತ್ತದೆ. ತಾನು ಕಂಡ 'ಸಾರ'ದ ರುಚಿಯನ್ನು ತನ್ನ ಸುತ್ತ ಪಸರಿಸಲು ಅಪ್ರಯತ್ನ ಪೂರ್ವಕವಾಗಿ ಹರಡುತ್ತಾನೆ. 'ಸರ್ವಜ್ಞತ್ವ'ವೆನ್ನುವುದು ಸರ್ವಜ್ಞ ಕವಿ ತಿಳಿಸುವಂತೆ 'ಸತ್ಯವ ನುಡಿವುದು ಮತ್ತು ತನ್ನಂತೆ ಪರರ ಕಾಣುವುದು.'

ನಮ್ಮ ಸರ್ವಜ್ಞ ಕವಿಯ ಹೆಸರು ಅವನು ಇಟ್ಟುಕೊಂಡ ಹೆಸರಲ್ಲ. ಜನರು ಅವನ ವಿಶಾಲವಾದ ಜೀವನಾನುಭವದ ಮಾತುಗಳನ್ನು ಕೇಳಿ ಮೆಚ್ಚಿ ಕೊಟ್ಟ ಹೆಸರು. ಅವನು ತನ್ನನೆಂದೂ ಸರ್ವಜ್ಞನೆಂದು ಕರೆದುಕೊಂಡಿಲ್ಲ. ಹಾಗೆ ಕರೆದುಕೊಳ್ಳುವುದು ಗರ್ವದ ನಡೆಯಾಗುತ್ತದೆಯೆಂದು ಅವನು ತಿಳಿದುಕೊಂಡಿದ್ದನು.

**ಸರ್ವಜ್ಞನೆಂಬುವನು ಗರ್ವದಿಂದಾದವನೆ**
**ಸರ್ವರೊಳಗೊಂದೊಂದು ನುಡಿ ಕಲಿತು| ವಿದ್ಯೆಯ**
**ಪರ್ವತವಾದ ಸರ್ವಜ್ಞ**

ಈ ತ್ರಿಪದಿಯನ್ನು ಸಹ ಸರ್ವಜ್ಞ ಬರೆದಿರಲಾರ. ಬರೆದಿಲ್ಲವೆಂದು ಕೆಲ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸರ್ವಜ್ಞನ ಲೋಕಾನುಭವದ ಸಾರವೆಂಬುದು ಬದುಕನ್ನು ಅವನು ನಲುಮೆಯಿಂದ ಸ್ವೀಕರಿಸಿ ತಿಳಿವಳಿಕೆ ಹೊಂದಿದುದರಿಂದ ಬಂದಿರುವಂಥದು. ಅವನ ಸಾಮಾನ್ಯಾತೀತವಾದ ತಿಳಿವನ್ನು ಕಂಡ ಕವಿಯೊಬ್ಬ ಈ ತ್ರಿಪದಿ ಬರೆದು ಮೆಚ್ಚಿರಬಹುದು.

೦೮-೦೩-೨೦೧೨

# ದೇಶ ಪ್ರೇಮ - ಮತ ಪ್ರೇಮ

ಪಾಶ್ಚಾತ್ಯ ಜನಪ್ರಿಯ ಕಥಾ ಸಾಹಿತ್ಯದಲ್ಲಿ ಸಾಧಾರಣ ಕಳ್ಳ ಖದೀಮರು ಕೂಡ ದೇಶಪ್ರೇಮಿಗಳಂತೆ ಚಿತ್ರಿತವಾಗಿದ್ದಾರೆ! ಅವರು ತಮ್ಮ ದೇಶದಲ್ಲಿ ತಮ್ಮ ಹೊಟ್ಟೆಪಾಡಿಗೆ ದರೋಡೆ ಕಳ್ಳತನದಂತಹ ವೃತ್ತಿಯನ್ನು ಮಾಡಿ ಜೈಲು ಸೇರಿ ಶಿಕ್ಷೆ ಅನುಭವಿಸುತ್ತಾರೆ. ಕಳ್ಳತನ ಅವರಿಗೊಂದು ವೃತ್ತಿ. ಆದರೆ ದೇಶದ ಸಂರಕ್ಷಣೆಯ ವಿಷಯ ಬಂದಾಗ ಅಸೀಮ ದೇಶಭಕ್ತರಂತೆ ಹೋರಾಡುತ್ತಾರೆ; ತಮ್ಮ ಪ್ರಾಣ ತ್ಯಾಗ ಮಾಡಲು ಸಿದ್ಧರಾಗುತ್ತಾರೆ. ಅಲ್ಲಿನ ಗೃಹಿಣಿಯರು ತಾವು ಪ್ರೀತಿಸುತ್ತಿರುವ ವ್ಯಕ್ತಿ ದೇಶದ್ರೋಹಿ ಎಂದೋ ವಿದೇಶಿ ಗೂಢಚಾರನೆಂದೋ ತಿಳಿದುಬಂದಾಗ ಪ್ರೀತಿಯನ್ನು ಮೀರಿ ಅವನನ್ನು ಸಾಯಿಸುವ ಹಂತಕ್ಕೆ ಬೆಳೆಯುತ್ತಾರೆ. ಏಕೆಂದರೆ ಅವರಿಗೆ ಪ್ರೀತಿಗಿಂತ ದೇಶ ದೊಡ್ಡದು.

ನಮ್ಮ ರಾಜಕೀಯ ಮೀಮಾಂಸೆಯಲ್ಲಿ ಧರ್ಮ ಮತ್ತು ರಾಜಕಾರಣಗಳ ಸಂಬಂಧ ಮತ್ತು ಸ್ಥಾನಮಾನಗಳ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಗಾಂಧೀಜಿ ಮೂಲತಃ ಧಾರ್ಮಿಕ ಪ್ರೀತಿಯುಳ್ಳವರಾಗಿದ್ದರು. ಸನಾತನ ಮೌಲ್ಯಗಳನ್ನು ವರ್ತಮಾನ ಬದುಕಿನಲ್ಲಿ ಅನ್ವಯಿಸಿಕೊಳ್ಳಬೇಕೆಂದು ಹೇಳುತ್ತಿದ್ದರು. ಒಟ್ಟಾರೆಯಾಗಿ ಅವರದು ನೈತಿಕ ನೆಲೆಯ ಪ್ರಜ್ಞೆಯ ಬದುಕಾಗಿತ್ತು. ಆದುದರಿಂದ ಅವರು ಶುದ್ಧ ನಡೆನುಡಿಗಳನ್ನು ಆದರ್ಶವೆಂದು ತಿಳಿದು ಮಾದರಿಯಂತೆ ಬದುಕಿದರು. ಅವರಿಗೆ 'ಧರ್ಮವು' ರಾಜಕಾರಣದ ಹಿನ್ನೆಲೆಯಲ್ಲಿ ನಿಂತು ಕೆಲಸ ಮಾಡುವ ನೈತಿಕ ಸ್ಥೈರ್ಯದಂತಿರಬೇಕು. ಅದು ರಾಜಕಾರಣ ನಡೆಯನ್ನು ಸಲಹೆ, ಸೂಕ್ತ ಮಾರ್ಗದರ್ಶನದ ಮೂಲಕ ಮುನ್ನಡೆಸುವ ಗುರುವಿನಂತಿರಬೇಕೆ ಹೊರತು, ಅದೇ ಸ್ವಯಂ ನಿಯಂತ್ರಣ ಶಕ್ತಿಯಾಗಿರಬಾರದು; ಹಿನ್ನೆಲೆಯಲ್ಲಿ ನಿಂತು ಅಧಿಕಾರ ನಡೆಸುವ ಕಾವೀ ರೂಪದ ರಾಜಕಾರಣಿಯಾಗಬಾರದು. ಸ್ಥೂಲರೂಪದಲ್ಲಿ ಅಂಬೇಡ್ಕರ್ ಮತ್ತು ಡಾ. ಲೋಹಿಯಾ ಅವರ ಅಭಿಮತವೂ ಇದೇ ಆಗಿತ್ತು. ಏಕೆಂದರೆ ಚರಿತ್ರೆಯಲ್ಲಿ ಮತಧರ್ಮಗಳ ಆಳ್ವಿಕೆಯಿಂದ ಸಮಾಜದಲ್ಲಿ ಸೃಷ್ಟಿಯಾಗಿರುವ ಅಸಮಾನತೆಗಳು ಕಣ್ಣ ಮುಂದೆ ರಾಚಿದ್ದವು.

ವರ್ತಮಾನದ ಜಾಗತಿಕ ಸ್ವರೂಪವೇ ಇಂದು ಮತಶ್ರದ್ಧೆಯಿಂದ ಕೂಡಿದ್ದು - ಮಾನವ ಸಂಬಂಧಗಳ ನಡುವಿನ ಉದಾರವಾದಿ ಧೋರಣೆಯೇ ಮಾಯವಾಗುವಂತೆ ಮಾಡಿದೆ. ಇಪ್ಪತ್ತನೇ ಶತಮಾನದಲ್ಲಿ ಮೂಡಿಬಂದ ಮಾನವತಾವಾದ ಆಧಾರಿತ ಸಿದ್ಧಾಂತಗಳು ಧರ್ಮ ಮತಗಳಿಗಿಂತ ಸಮಾನತೆ ಸ್ವಾತಂತ್ರ್ಯಗಳು ಮುಖ್ಯವೆಂದು 'ಮನುಜ ಮತ'ವೇ ಬದುಕಿನ ಮಂತ್ರವಾಗಬೇಕೆಂದು ಘೋಷಿಸಿದ್ದವು. ಆ ಹಿನ್ನೆಲೆಯಲ್ಲಿ ಮತಧರ್ಮ ಶ್ರದ್ಧೆಗಳು ಹಿನ್ನೆಲೆಗೆ ಸರಿದು ಮಾನವಪರತೆ

- ಜೀವಪರತೆಯನ್ನು ಕಾಯ್ದುಕೊಳ್ಳುವುದು ಪ್ರತಿಯೊಂದು ಸರ್ಕಾರದ ರಾಜಕೀಯ ಸಿದ್ಧಾಂತದ - ಮುಖ್ಯ ಆಶಯವಾಗಿತ್ತು. ಮತಧರ್ಮಗಳಲ್ಲಿರುವ ಮೂಢನಂಬಿಕೆ ಅಂಧಶ್ರದ್ಧೆಗಳನ್ನು ಪರೀಕ್ಷಿಸಿ, ಬೇಡವಾದುದನ್ನು ತಿರಸ್ಕರಿಸಿ ತಿರುಳನ್ನು ಮಾತ್ರ ಸ್ವೀಕರಿಸುವ ಮನೋನೆಲೆ ಪ್ರಾಪ್ತವಾಯಿತು. ಕೆಲವು ರಾಜಕೀಯ ಸಿದ್ಧಾಂತಗಳು ಮತ್ತು ಧರ್ಮಗಳು ಬಿತ್ತುತ್ತಿರುವ ಮೌಢ್ಯಗಳು ಮತ್ತು ಅಸಮಾನತೆಗಳನ್ನು ಕಂಡು ಹೇಸಿ, ಬಹಿರಂಗವಾಗಿ ಮತಾಚರಣೆಗಳನ್ನು ಪಾಲಿಸುವ, ಪ್ರಚಾರ ಮಾಡುವ ಪ್ರಕ್ರಿಯೆಯನ್ನೇ ಕಾನೂನಾತ್ಮಕವಾಗಿ ರದ್ದುಗೊಳಿಸಿದವು. ಇಂಥ ತೀರ್ಮಾನಗಳು ಕೋಮುವಾದಿಗಳ ಕಣ್ಣುಗಳನ್ನು ಕಡು ಕೆಂಪಗೆ ಮಾಡಿದವು. ಆಧುನಿಕ ಶಿಕ್ಷಣ ಮತ್ತು ವಿಚಾರಧಾರೆಗಳು ಸಾಮಾಜಿಕ ಸ್ವಾಸ್ಥ್ಯವನ್ನು, ಒಂದು ಧಾರ್ಮಿಕ ನಂಬಿಕೆಯ ಜನರನ್ನು ಛಿದ್ರಗೊಳಿಸುತ್ತಿವೆಯೆಂದೂ ಅವರು ಅನೈತಿಕ ಪಥದಲ್ಲಿ, ಅಧಾರ್ಮಿಕವಾದ ಜೀವನ ಶೈಲಿಯಲ್ಲಿ, ದೈವವಿರೋಧಿ ಧೋರಣೆಯಲ್ಲಿ ಬೆಳೆಯುವಂತೆ ಮಾಡುತ್ತಿವೆಯೆಂದೂ ಸನಾತನವಾದಿಗಳು ಪ್ರಚಾರ ಮಾಡಿ ಮತ್ತಷ್ಟು ಬಿಗಿಯಾಗಿ ಮತಸಂಘಟನೆ ಮಾಡತೊಡಗಿದರು.

ಇದರ ಪರಿಣಾಮವನ್ನು ಜಗತ್ತಿನ ಬಹುಭಾಗದಲ್ಲಿಂದು ಕಾಣುತ್ತಿದ್ದೇವೆ. ಮೂಲ ಭೂತವಾದ ವೇಗವಾಗಿ ಸಮಾಜವನ್ನು ವ್ಯಾಪಿಸಿಕೊಳ್ಳುತ್ತಿದೆ. ಅತಾರ್ಕಿಕವಾದ ಸ್ವರ್ಗ ನರಕಗಳು, ದೇವರು - ದೆವ್ವಗಳ ನಂಬಿಕೆಗಳು ಮತ್ತು ಅವುಗಳನ್ನು ಒಲಿಸಿಕೊಳ್ಳಲು ನಿತ್ಯ ಮಾಡುತ್ತಿರುವ ಪೂಜೆ ವಾಮಾಚಾರಗಳು, ವಾಸ್ತವದ ಅರಿವನ್ನು ನಿರಾಕರಿಸುತ್ತ ಭವಿಷ್ಯವನ್ನು ಜೋತಿಷ್ಯದ ಮೂಲಕ ಅರಿಯಲು ಯತ್ನಿಸುವ ಪಲಾಯನವಾದಗಳು - ಮುಂತಾದವುಗಳ ನಂಬಿಕೆಗಳು ಅಧಿಕವಾಗುತ್ತಿರುವುದು ಒಂದು ಕಡೆಯಾದರೆ, ಇವುಗಳೆಲ್ಲವನ್ನು ಸಮರ್ಥಿಸುವಂಥ ಪರೋಕ್ಷ ಮತ್ತು ನೇರ ಧಾರ್ಮಿಕ ಆಳ್ವಿಕೆಗಳು ಪ್ರಜಾಪ್ರಭುತ್ವ ಮೌಲ್ಯಗಳನ್ನು ಬಲಿ ತೆಗೆದುಕೊಳ್ಳುತ್ತಿವೆ.

ಇದರಿಂದಾಗಿ ಖಂಡ ಖಂಡಗಳನ್ನೇ ತಮ್ಮ ಮತಧರ್ಮಾಳ್ವಿಕೆಗೆ ತರಬೇಕೆಂಬ ಆಲೋಚನಾ ವಿಧಾನವೊಂದು ಬಲಗೊಳ್ಳುತ್ತಿರುವುದನ್ನು ಇಂದು ಜಾಗತಿಕ ಮಟ್ಟದಲ್ಲಿ ಗುರುತಿಸಬಹುದಾಗಿದೆ. ಇದರಿಂದ ಅನೇಕತೆಯ ವೈಭವಕ್ಕೆ, ಬಾಳ್ವಿಕೆಗೆ ಭಂಗಬರುವ ಅಪಾಯವಿದೆ. ವೈವಿಧ್ಯತೆಯ ಸೌಂದರ್ಯ ಸಹಬಾಳ್ವೆಗಳು ನಾಶವಾಗಿ ದೇಶಪ್ರೇಮ-ನಾಡ ಪ್ರೇಮಗಳು ಕಣ್ಮರೆಯಾಗುತ್ತವೆ. ದೇಶಕ್ಕಿಂತ ಜಾತಿ ಮತಗಳೇ ಮುಖ್ಯವೆಂದು ಹೋರಾಡುವಂಥ ದಿನಗಳು ಬರುತ್ತಿವೆಯೆಂಬ ಆತಂಕವಾಗುತ್ತದೆ.

೨೨-೦೩-೨೦೧೨

## ಯಜ್ಞಯಾಗ - ಮಾಟ ಮಂತ್ರ

ಮಾಟ ಮಂತ್ರ ಮಾಡುವ ಮತ್ತು ಮಾಡಿಸುವ ಪದ್ಧತಿ ನಾಗರಿಕಪೂರ್ವ ಪದ್ಧತಿಯಾಗಿದೆ. ಅತೀತ ಶಕ್ತಿಗಳ ಬಗ್ಗೆ ಪ್ರಬಲವಾದ ನಂಬಿಕೆ ಜಾಗೃತವಾದ ನಂತರ ಆ ಶಕ್ತಿಯನ್ನು ಒಲಿಸಿಕೊಂಡು ತನ್ನ ಕೆಲಸ ಸಾಧಿಸಿಕೊಳ್ಳುವ ಮನುಷ್ಯನ ಆಕಾಂಕ್ಷೆಯೇ ಇಂಥ ಪದ್ಧತಿಗಳ ಉಗಮಕ್ಕೆ ಕಾರಣವಿರಬೇಕು. ಈ ಅತೀತ ಶಕ್ತಿಗಳು ಪ್ರಾರಂಭದಲ್ಲಿ ಪ್ರಕೃತಿಯ ಅನುಭವಗೋಚರ ಸ್ವರೂಪಗಳಾದ ಕತ್ತಲು ಬೆಳಕು - ಗಾಳಿ ಬೆಂಕಿ - ನೀರು ಪರ್ವತ ಶ್ರೇಣಿ - ಸೂರ್ಯಚಂದ್ರ - ಇಂಥವೇ ಆಗಿದ್ದವು. ಅನಂತರದ ದಿನಮಾನಗಳಲ್ಲಿ ಪ್ರಕೃತಿಯ ವಿಸ್ಮಯ ಸೃಷ್ಟಿಗಳಾದ ಹೂ ಹಣ್ಣು, ಪ್ರಾಣಿ ಪಕ್ಷಿಗಳ ಜನನವೇ ಮುಂತಾದವು ಅತೀತ ಶಕ್ತಿಯ ಕರುಣೆಯ ಫಲವೆಂಬ ನಂಬಿಕೆಯನ್ನು ರೂಢಿಸಿಕೊಳ್ಳಲಾಯಿತು. ಇಲ್ಲಿಯವರೆಗೆ ಈ ಅತೀತ ಶಕ್ತಿಯ ನಂಬಿಕೆಯ ಬಗ್ಗೆ ಭಯವಾಗಲೀ ಹೆದರಿಕೆಯಾಗಲೀ ಇದ್ದಂತೆ ತೋರುವುದಿಲ್ಲ.

ಆದರೆ ಮನುಷ್ಯ ಸತ್ತನಂತರ ಏನಾಗುತ್ತಾನೆ? ಅವನ ಉಸಿರು ಆತ್ಮ ಎಲ್ಲಿಗೆ ಹೋಗುತ್ತದೆ ಎಂಬ ಚಿಂತನೆ ಆರಂಭವಾದ ನಂತರ ಈ ಲೋಕಕ್ಕಿಂತ ಭಿನ್ನವಾದ ಮತ್ತೊಂದು ಲೋಕವಿದೆಯೆಂದೂ, ಅಲ್ಲಿಗೆ ಈ ಆತ್ಮ ಪಯಣಿಸುತ್ತದೆಯೆಂದೂ, ಅಲ್ಲಿ ಮನುಷ್ಯರನ್ನು ಆಳುವ - ನಿಯಂತ್ರಿಸುವ ಶಕ್ತಿ ರೂಪಗಳಿವೆಯೆಂದೂ, ಅವು ಭೂಮಿ ಮತ್ತು ಅಲ್ಲಿನ ಸಕಲೆಂಟು ಜೀವರಾಶಿಯನ್ನು ನಿಯಂತ್ರಿಸಿ ನಡೆಸುತ್ತವೆಯೆಂಬ ಕಲ್ಪನೆ - ನಂಬಿಕೆ ಆರಂಭಗೊಂಡಿತು. ಇಂಥ ಪರಲೋಕ ಶಕ್ತಿಗಳನ್ನು - ಅಲ್ಲಿಗೆ ಹೋಗುವ ಆತ್ಮಗಳನ್ನು ತಮಗನುಕೂಲವಾಗಿ ಪರಿವರ್ತಿಸಿಕೊಂಡು ತಮ್ಮ ಕೆಲಸ ಕಾರ್ಯಗಳನ್ನು ಮಾಡಿಸಿಕೊಳ್ಳುವ ಪ್ರವೃತ್ತಿ ಪ್ರಾರಂಭವಾಯಿತು. ಈ ಕ್ರಿಯೆಗಳನ್ನೇ ಮಾಟ ಮಂತ್ರಗಳೆರಡೂ ಮಾಂತ್ರಿಕ ಶಕ್ತಿಯೆಂದೂ ಕರೆಯಲಾಯಿತು. ಈ ಕ್ರಿಯೆಗಳನ್ನು ನಡೆಸುವ ವ್ಯಕ್ತಿ ಮಂತ್ರವಾದಿಯೆಂದೂ ಮಾಟಗಾರನೆಂದೂ ಕರೆಸಿಕೊಂಡು ಸಮುದಾಯದಲ್ಲಿ ನಿಗೂಢ ವ್ಯಕ್ತಿಯಾಗಿ, ಶಕ್ತಿಗಳು ಮತ್ತು ಮನುಷ್ಯರ ನಡುವೆ ಸಂವಹನ ಕ್ರಿಯೆ ಜಾಗೃತಗೊಳಿಸುವ ಶಕ್ತಿವಂತನೆಂದು ಮಾನ್ಯನಾದನು.

ಈ ಅತೀತ ಶಕ್ತಿಗಳೆಂದು ಪರಿಭಾವಿಸಿದ ನಂತರದ ಕಾಲದಲ್ಲಿ ಅವುಗಳನ್ನು ಒಲಿಸಿಕೊಳ್ಳುವ ಕ್ರಿಯಾ ವಿಧಾನಗಳಲ್ಲಿ ಸಾತ್ವಿಕ ರೂಪವೆಂದು - ತಾಮಸ ರೂಪವೆಂದು ಎರಡು ಕವಲುಗಳಾಗಿ ಹೊರ ಹೊಮ್ಮಿದೆ. ಸಾತ್ವಿಕ ರೂಪದ ಕ್ರಿಯೆಗಳನ್ನು ಯಜ್ಞಯಾಗಗಳೆಂದೂ ಅವನ್ನು ನಡೆಸಿಕೊಡುವವರು ಬ್ರಾಹ್ಮಣ ವರ್ಗದ ಯಜ್ಞಪಿತೃಗಳೆಂತಲೂ, ತಾಮಸ ರೂಪದ ಕ್ರಿಯೆಗಳನ್ನು ಮಾಟ ಮಂತ್ರಗಳೆಂದೂ ಅವನ್ನು ನಡೆಸಿಕೊಡುವವರು ಮಂತ್ರವಾದಿಗಳೆಂದೂ ಕರೆಸಿಕೊಂಡರು.

ಈ ಮಂತ್ರವಾದಿಗಳು ಸಾಮಾನ್ಯವಾಗಿ ಕೆಳವರ್ಗದವರೂ ಜಾತಿಯವರೂ ಆಗಿರುವುದು ಮುಖ್ಯ. ಈ ಎರಡು ಕ್ರಿಯೆಗಳಲ್ಲೂ ಅತೀತ ಶಕ್ತಿಗಳನ್ನು ಒಲಿಸಿಕೊಳ್ಳುವುದೇ ಮುಖ್ಯ ಗುರಿ. ಆ ಗುರಿ ಸಾಧನೆಗೆ ಈ ಶಕ್ತಿಗಳಿಗೆ ಪ್ರಕೃತಿಜನ್ಯವಾದ ನಾನಾ ಜೀವಿಗಳನ್ನು (ಸಸ್ಯ-ಪ್ರಾಣಿಗಳ ಜೊತೆ-ಅವುಗಳ ಜನ್ಯ) ಬಲಿ ಕೊಡುವ ಪದ್ಧತಿ ರೂಢಿಗೆ ಬಂತು. ಮಂತ್ರವಾದಿ ತಾಮಸ ರೂಪದ ಆಚರಣೆ ನಡೆಸಿದರೆ, ಯಜ್ಞಪಿತೃ ಸಾತ್ವಿಕ ರೂಪದ ಸಸ್ಯ ಮತ್ತು ಸಸ್ಯ ಪ್ರಾಣಿಜನ್ಯ ವಸ್ತುಗಳನ್ನು ಬಲಿಕೊಡುತ್ತಾನೆ. (ಆರಂಭದಲ್ಲಿ ಪ್ರಾಣಿಗಳನ್ನೂ ಸಾತ್ವಿಕರೆಂದು ಕರೆಸಿಕೊಳ್ಳುವವರು ಬಲಿ ಕೊಡುತ್ತಿದ್ದರೆಂಬುದನ್ನು ಮರೆಯಬಾರದು.) ಮಾಟ ಮಂತ್ರಗಳನ್ನು ಸಾಮಾನ್ಯವಾಗಿ ಕತ್ತಲ ಕ್ರಿಯೆಗಳನ್ನಾಗಿ ನೆರವೇರಿಸಲಾಗುತ್ತದೆ.

ಈ ಮಾಟ ಮಂತ್ರಗಳು ಸಂಪೂರ್ಣ ನಂಬಿಕೆಯಾಧಾರಿತ ಕ್ರಿಯೆಗಳು. ಸಮಾಜದಲ್ಲಿ ಮೌಢ್ಯ ತುಂಬಿದ್ದಾಗ, ವೈಚಾರಿಕ - ವೈಜ್ಞಾನಿಕ ಜಾಗೃತಿ ಮೂಡದಿದ್ದಾಗ ಅವು ಆಳ್ವಿಕೆ ನಡೆಸಿದ್ದೂ ನಿಜ. ಶತಮಾನಗಳುದ್ದಕ್ಕೂ ವೈಚಾರಿಕ ಮನಸ್ಸು ಇಂಥ ಕ್ರಿಯೆಗಳನ್ನು ತೀಕ್ಷ್ಣವಾಗಿ ವಿಡಂಬಿಸಿದ್ದಾರೆ. ಆದರೆ ಇಂದು ವಿಜ್ಞಾನ ಮತ್ತು ವೈಚಾರಿಕ ಅರಿವುಗಳು ವಿಸ್ತರಿಸಿವೆ; ನಮ್ಮ ಶೋಧಗಳು ನಮ್ಮ ಅರಿವನ್ನು ವಿಜ್ಞಾನದ ಬೆಳಕಲ್ಲಿ ವಿಕಾಸಗೊಳಿಸಿ ಅತೀತ ಶಕ್ತಿ ಮತ್ತು ಪರಲೋಕಗಳ ಬಗ್ಗೆ ಸ್ಪಷ್ಟ ಜ್ಞಾನವನ್ನು ನೀಡುತ್ತಿವೆ. ದುಷ್ಟ ಶಕ್ತಿಗಳು ಅಥವಾ ಶಿಷ್ಟ ಶಕ್ತಿಗಳು ನಮ್ಮ ಅಜ್ಞಾನದ ಸೃಷ್ಟಿಗಳು. ಆ ಬಗೆಗಿನ ಸಾಹಿತ್ಯ ಕಲ್ಪನೆಯ ಸೃಷ್ಟಿ; ನಮ್ಮ ಧೀಶಕ್ತಿಯ ಅಲ್ಪತೆಯನ್ನು ತೃಪ್ತಿಪಡಿಸಿಕೊಳ್ಳಲು ಮಾಡಿಕೊಂಡಿರುವ ವ್ಯವಸ್ಥೆ.

ಅಧುನಿಕ ಶಿಕ್ಷಣ ಭಾರತೀಯ ಬದುಕನ್ನು ಪ್ರವೇಶಿಸಿದ ನಂತರ, ಉದಾರವಾದೀ ಗಾಳಿ ಬೀಸಿ, ಹೊಸ ಆಲೋಚನಾ ಕ್ರಮ, ವೈಜ್ಞಾನಿಕ ಮನೋಧರ್ಮ ಪಸರಿಸಿ ಇಂಥ ಮೌಢ್ಯ ಪದ್ಧತಿಗಳು ಕಡಿಮೆಯಾಗಿದ್ದವು. ಆದರೆ ಇಂದು ಜಗತ್ತಿನಾದ್ಯಂತ ಮತ್ತೆ ಪಿಡುಗಾಗಿ ಹರಡುತ್ತಿರುವ ಮೂಲಭೂತವಾದದ ಪೂರಕ ವಿಧಾನಗಳಾಗಿ ಯಜ್ಞ ಯಾಗ - ಮಾಟ ಮಂತ್ರವಾದಿಗಳು ಅಧಿಕವಾಗುತ್ತಿರುವುದು ಮತ್ತು ಮೂಲಭೂತವಾದಿ ತತ್ವ-ನಂಬಿಕೆಗಳನ್ನೇ ಬಂಡವಾಳವನ್ನಾಗಿ ಮಾಡಿಕೊಂಡಿರುವ ರಾಜಕಾರಣಿಗಳು ಇಂಥವುಗಳನ್ನು ಆಚರಿಸಿ ಪ್ರೋತ್ಸಾಹಿಸಿ ಸಾಮಾನ್ಯರಿಗೆ ಮಾದರಿಯಾಗುತ್ತಿರುವುದು ಆತಂಕವನ್ನುಂಟುಮಾಡುತ್ತಿದೆ.

೦೫-೦೪-೨೦೧೨

# ಭುವಿಯ ಒಡಲ ಬಗೆದು......

'ನಾವು ಭೂಮಿಯ ಮೇಲ್ಮೈಯನ್ನು ಕೆರೆದು ಐದು ಸಾವಿರ ವರ್ಷಗಳಿಂದ ಬದುಕಿದ್ದೇವೆ; ಕೆಲ ಧನದಾಹಿಗಳು ಭೂಮಿಯ ಅಂತರಾಳವನ್ನು ಬಗೆದು ಕೆಲವೇ ವರ್ಷಗಳಲ್ಲಿ ಜಗತ್ತನ್ನು ನಾಶಮಾಡುತ್ತಿದ್ದಾರೆ.'

ವಿಜ್ಞಾನದ ಸಿದ್ಧಿಯಾದ ಉಪಗ್ರಹಗಳು ಕಳುಹಿಸುವ ಚಿತ್ರಗಳನ್ನು ನೋಡಿದಾಗ ಭೂಮಿ ಅತ್ಯಂತ ಸುಂದರವಾಗಿ ಕಾಣುತ್ತದೆ. ಈ ಸುಂದರ ಭುವಿಯ ಮೇಲೆ ವಾಸಿಸುವ ನಾವು ಅದೃಷ್ಟವಂತರು. ಅದಕ್ಕೆ ನಾವು ಅದೆಷ್ಟು ಋಣಿಗಳಾಗಿದ್ದರೂ ಸಾಲದು. ಅದು ತನ್ನ ಜಲ ನೆಲಗಳಲ್ಲಿ ಜೀವಿಸುವ ದೃಶ್ಯ-ಅದೃಶ್ಯ ಜೀವಿಗಳನ್ನು ಲಕ್ಷಾಂತರ ವರ್ಷಗಳಿಂದ ಸಾಕುತ್ತಾ ಬಂದಿದೆ. ದೃಶ್ಯ ಜೀವಿಗಳು ಭುವಿಯ ಋಣವನ್ನು ಕೃತಜ್ಞತೆಯಿಂದ ನೆನೆಯುತ್ತಾ ತಮ್ಮ ಮಿತಿಯ ಒಳಗೆ ಜೀವಿಸುತ್ತಾ ಬಂದಿವೆ - ಮಾನವ ಜೀವಿಯೊಂದನ್ನು ಹೊರತುಪಡಿಸಿ. ಅದೃಶ್ಯ ಜೀವಿಗಳಂತು ತಮ್ಮ ನಿಶ್ಶಬ್ದ ದುಡಿಮೆಯಿಂದ ಭುವಿಗೆ ಮತ್ತು ಅದರ ಸಹ ಜೀವಿಗಳಿಗೆ ಉಪಕರಿಸುತ್ತಾ ಬಂದಿವೆ. ಬಹುಪಾಲು ಭುವಿಯ ಜೀವಿಗಳು ಇತರ ಜೀವಿಗಳ ಬದುಕನ್ನು ಹತ್ತಿಕ್ಕುವಂಥ ಕೆಲಸವನ್ನು ಮಾಡುತ್ತಿಲ್ಲ. ಆದರೆ ಮಾನವ ಜೀವಿ?

ಮಾನವ ಜೀವಿಯೂ ಮೊನ್ನೆ ಮೊನ್ನೆಯವರೆಗೂ ಇತರೆ ಸಹಜೀವಿಗಳ ಜೊತೆ ಸಹಬಾಳ್ವೆ ಮಾಡುತ್ತಲೇ ಬಂದಿದ್ದ. ಏಕೆಂದರೆ ಅವನ ಆಸೆಗಳು ಮಿತವಾಗಿದ್ದವು. ಇತರೆ ಸಹಜೀವಿಗಳೊಡನೆ ಸಹಜೀವನ ನಡೆಸುತ್ತಾ ತನ್ನ ಮಿತಿಯರಿತು ಅವನು ಬದುಕಿದ್ದ. ಬುದ್ಧನಂಥ ಜೀವಪರ ಚಿಂತಕರು ಮಾನವನ ಜೀವಿತದ ಉದ್ದೇಶದ ಗುರಿ ಮತ್ತು ಸಾಫಲ್ಯ ಈಡೇರಿಕೆಯಲ್ಲಿ ಆಸೆಯ ಸ್ಥಾನವೆಂಥದ್ದೆಂಬುದನ್ನು ನಿರೂಪಿಸಿ ಅವನ ದುರಾಸೆಯನ್ನು ಅಂಕೆಯಲ್ಲಿಟ್ಟಿದ್ದರು. ಬದುಕಿನ ರುಚಿಯನ್ನು ಅನುಭವಿಸಲು ಸಾಧ್ಯವಾಗುವುದು ಇತರರೊಡನೆ ಹಂಚಿಕೊಂಡು ತಿಂದಾಗ ಮಾತ್ರ. ಇತರರು ಪಡುವ ಆನಂದವನ್ನು ಕಂಡಾಗ ಮತ್ತು ಆ ಆನಂದಕ್ಕೆ ಕಿಂಚಿತ್ತಾದರೂ ತಾನು ಕಾರಣನೆಂಬ ಅನುಭವವಾದಾಗ ಬದುಕಿನ ಅರ್ಥವಾಗುತ್ತದೆ. ಆದರೆ ಮಿತಿ ಮೀರಿದ ಆಸೆ ಕಬಳಿಸುತ್ತಾ ಸಾಗುತ್ತದೆ. ಕೇವಲ ಮಾನವಜೀವಿಗಳನ್ನು ಮಾತ್ರವಲ್ಲ. ಇತರ ಸಹಜೀವಿಗಳ ಬಾಳನ್ನು ಸಹ ನುಂಗಲು ಯತ್ನಿಸುತ್ತದೆ. ಈಗ ಆಗಿರುವುದು ಹಾಗೆಯೇ. ಅದರ ಪರಿಣಾಮವಾಗಿ ಭುವಿಯ ಮೇಲೆ ಇಂದು ಅವನು ನಡೆಸಿರುವ ಅತ್ಯಾಚಾರ; ಇತರ ಸಹಜೀವಿಗಳ ಬದುಕಿನೊಡನೆ ನಡೆಸಿರುವ ಕ್ರೌರ್ಯಗಳು ಕಾಣತೊಡಗಿವೆ.

ನಮ್ಮ ಪೂರ್ವಿಕರು ನಮಗಿಂತ ತುಸು ಹೆಚ್ಚಾಗಿಯೇ ಪ್ರಕೃತಿಯ ಲಯವನ್ನು ಅರ್ಥ

ಮಾಡಿಕೊಂಡಿದ್ದರೆಂದು ತೋರುತ್ತದೆ. ಏಕೆಂದರೆ, ಅವರು ಪ್ರಕೃತಿಗೆ ತೀರ ಹತ್ತಿರವಾಗಿದ್ದು, ಅದರ ಋತುಲಯ ಚಕ್ರ ಗತಿಗಳನ್ನು ಗ್ರಹಿಸಿದ್ದರು. ಅದರ ಚಕ್ರಗತಿಗೆ ಭಂಗ ಬಾರದಂತೆ ತಾವು ನಡೆದುಕೊಂಡರೆ ಅದು ನಮ್ಮನ್ನು ಸಾಕಿ ಬೆಳೆಸುತ್ತದೆ ಎಂಬ ಅನುಭವ ಅವರಿಗಾಗಿತ್ತು. ತಮಗೆ ಅಗೋಚರವಾದ ಭುವಿಯ ಅಂತರಾಳಕ್ಕೆ ಲಗ್ಗೆ ಇಡುವ ಸಾಹಸಕ್ಕೆ ಅವರು ಹೋಗಲಿಲ್ಲ. ಅವರಿಗೆ ಅದು ತಾಯಿ, ಅವಳ ಹಾಲು ಕುಡಿದು ಬೆಳೆದವರು. ಹಾಲು ಕುಡಿದ ಅಮ್ಮನ ಕೆಚ್ಚಲಿಗೆ ಕೈ ಹಾಕಬಾರದೆನ್ನುವ ವಿವೇಕ ಅವರಲ್ಲಿತ್ತು. ಆದರೆ ಇಂದಿನ ದುರಾಸೆಯ ಮಾನವ ಹಾಲು ನೀಡುವ ಕೆಚ್ಚಲನ್ನೇ ಕೊಚ್ಚಿಹಾಕಿ, ಮುಂದೆ ಹಾಲೇ ಇಲ್ಲದಂಥ ಸ್ಥಿತಿ ನಿರ್ಮಾಣ ಮಾಡ ಹೊರಟಿರುವುದು ದುರಂತವಲ್ಲದೆ ಮತ್ತೇನು?

ಈ ಭೂಮಿಯ ಮೇಲ್ಪದರವನ್ನೇ ನಂಬಿ ಅಸಂಖ್ಯಾತ ಜೀವಿಗಳು ಲಕ್ಷಾಂತರ ವರ್ಷಗಳಿಂದ ಬದುಕಿ ಬಾಳಿವೆ. ಈ ಮೇಲ್ಪದರದಲ್ಲಿ ಅಂಥ ಸತ್ವವಿದೆ. ಈ ಸತ್ವ ನಿರ್ಮಾಣ ನೂರಿನ್ನೂರು ವರ್ಷಗಳಲ್ಲಿ ಆಗಿರುವಂಥದ್ದಲ್ಲ; ಆಗುವಂಥದ್ದೂ ಅಲ್ಲ. ಈ ಸತ್ವ ಸೃಷ್ಟಿಯಾಗಲು ಲಕ್ಷಾಂತರ ವರ್ಷಗಳೇ ಹಿಡಿದಿವೆ. ಈ ನಿರ್ಮಾಣ ಕ್ರಿಯೆಯಲ್ಲಿ ಮರಗಿಡಗಳ ಜೊತೆಗೆ ಸೂಕ್ಷ್ಮಾತಿ ಸೂಕ್ಷ್ಮ ಕ್ರಿಮಿಕೀಟಾದಿ ಜೀವಾಣುಗಳು ಅವಿರತವಾಗಿ ದುಡಿದಿವೆ. ಇಂಥ ದುಡಿಮೆಯ ಸತ್ವವನ್ನು ಮಾನವ ತನ್ನ ಬದುಕಿಗೆ ಆಶ್ರಯಿಸಿ ಸಾವಿರಾರು ವರ್ಷಗಳಿಂದ ಬದುಕು ಮಾಡಿದ್ದಾನೆ.

ಆದರೆ ನೂರಿನ್ನೂರು ವರ್ಷಗಳ ಮಾನವನ ದುರಾಸೆ ಭೋಗಲಾಲಸೆಗಳು ಮಿತಿ ಮೀರಿವೆ. ಅದರಿಂದಾಗಿ ಅವನು ಭುವಿಯ ಅಂತರಾಳವನ್ನು ಬಗೆದು ಅದರ ಅಮೂಲ್ಯ ಸಂಪತ್ತನ್ನು ಸ್ವಾರ್ಥಕ್ಕಾಗಿ ಕಬಳಿಸುತ್ತಿದ್ದಾನೆ. ಇದರಿಂದ ಭೂಮಿಯ ಮೇಲ್ಮೈ ಸಂಪತ್ತು ನಾಶವಾಗಿ ಬಂಜರಾಗುತ್ತಿದೆ. ಮುಂದಿನ ಅನೇಕ ತಲೆಮಾರುಗಳು ಅನ್ನ ಆಹಾರಗಳನ್ನು ಬೆಳೆಯಲಾಗದಂಥ ಸ್ಥಿತಿ ನಿರ್ಮಾಣವಾಗುತ್ತದೆ. ಜೊತೆಗೆ ಸಸ್ಯ ಪ್ರಾಣಿ ಸಂಕುಲಗಳು ನಾಶವಾಗಿ ಭುವಿಯ ಸಮತೋಲನ ತಪ್ಪುವಂತಾಗುತ್ತದೆ.

೧೯-೦೪-೨೦೧೨

# ಬ್ರಹ್ಮಚರ್ಯೆ ಎಂಬ ಭ್ರಮೆಯ ಬಗ್ಗೆ

ಭಾರತೀಯ ತತ್ತ್ವ ಮೀಮಾಂಸೆಯಲ್ಲಿ ಹೇಳಲಾಗಿರುವ ನಾಲ್ಕು ಆಶ್ರಮಗಳಲ್ಲಿ ಬ್ರಹ್ಮಚರ್ಯ ಮೊದಲನೆಯದು. ಈ ಚತುರ್ವಿದ ಆಶ್ರಮಗಳ ಮೂಲ ಸ್ವರೂಪವು ವೈಜ್ಞಾನಿಕವಾದ ನೆಲೆಯ ಮೇಲೆ ಕಟ್ಟಲ್ಪಟ್ಟಿದೆ. ಅದರಲ್ಲಿರುವ ಜೀವನ ಮೌಲ್ಯಗಳನ್ನು ಪಾಲಿಸುವುದರಿಂದ ಜೀವನ ಪರಿಶುದ್ಧ ನಡೆಯನ್ನು ಸಾಧಿಸಿದಂತಾಗಿ ಸುಖೀ ಕುಟುಂಬ ಮತ್ತು ತನ್ಮೂಲಕ ಸುಖೀ ಸಮಾಜ ನಿರ್ಮಾಣವಾಗುತ್ತದೆಂಬ ಆದರ್ಶದ ಆಶಯ ಇಲ್ಲಿ ಕೆಲಸ ಮಾಡಿದೆ. ಈ ಚತುರ್ವಿಧ ಆಶ್ರಮಗಳು ಕೂಡ ಪುರುಷಪ್ರಾಧಾನ್ಯ ನೆಲೆಯಲ್ಲಿ ರೂಪಿತವಾಗಿರುವುದನ್ನು ಗಮನಿಸಬಹುದು. ಬಹುಶಃ ಸ್ತ್ರೀ ದಾಸಿಯಾಗಿಯೋ ಪರಿಚಾರಿಕೆಯಾಗಿಯೋ ಅಥವಾ ಸಂತಾನವನ್ನು ಮುಂದುವರಿಸಲು ಬೇಕಾದ ಸಾಧನವಾಗಿಯೋ ಪರಿಗಣಿತವಾಗಿದ್ದುದರಿಂದ ಅವಳ ಆಸೆ ಮತ್ತು ದೃಷ್ಟಿಧೋರಣೆಗಳು ಅಪ್ರಸ್ತುತವಾದವು. ಇಂಥ ಮಾತುಗಳನ್ನು ವಿರೋಧಿಸಲೆಂದೇ ಅಲ್ಲೊಂದು ಇಲ್ಲೊಂದು ಅಪವಾದವಾಗಿ ಬರುವ ಸ್ತ್ರೀಯರನ್ನು ಉದಾಹರಣೆಯಾಗಿ ನೀಡಿ ವ್ಯವಸ್ಥೆಯನ್ನು ಸಮರ್ಥಿಸಿ ಕೊಳ್ಳುವವರು ಕಡಿಮೆಯೇನಿಲ್ಲ. ಇಷ್ಟಾದರೂ ಈ ಚತುರ್ವಿಧ ಆಶ್ರಮಗಳನ್ನು ಆಯಾ ಅವಸ್ಥೆಗಳ ನಿಯಮಕ್ಕನುಗುಣವಾಗಿ ಜೀವಿಸುವುದರಿಂದ ಜೀವಿಗಳಲ್ಲಿ ಸಾಮರಸ್ಯ ಹಾಗೂ ಬದುಕಿನ ಎಲ್ಲ ಅವಸ್ಥೆ-ಮಜಲಿನ ಅನುಭವ ಉಂಟಾಗಿ ಜೀವನ ಪರಿಪಕ್ವತೆಯ ಕಡೆ ಸಾಗುತ್ತದೆ. ನಮ್ಮ ವೇದಕಾಲೀನ ಜೀವನ ವ್ಯವಸ್ಥೆ ಬಹುಶಃ ಇದೇ ರೀತಿ ಬದುಕು ಮಾಡುತ್ತಿತ್ತೆಂದು ತೋರುತ್ತದೆ.

ಆಶ್ರಮ ಧರ್ಮದ ಮೂಲ ಉದ್ದೇಶವೇ ಆಯಾಯ ವಯೋಮಾನದಲ್ಲಿ ಪ್ರಕೃತಿ ಸಹಜವಾದ ಸಹಜಕ್ರಿಯೆ ಮತ್ತು ಪ್ರವೃತ್ತಿಗಳನ್ನು ರುಜು ಮಾರ್ಗದಲ್ಲಿ ಅನುಭವಿಸಲೆಂಬುದೇ ಆಗಿದೆ. ಆದುದರಿಂದ ಆಶ್ರಮ ಧರ್ಮವು ಯಾವುದನ್ನೂ ನಿರಾಕರಿಸಿಯೂ ಇಲ್ಲ, ತುಚ್ಛೀಕರಿಸಿಯೂ ಇಲ್ಲ. ಈ ಆಶಯವು ಜೀವನ ಮಾರ್ಗದಲ್ಲಿ ಚಾಲ್ತಿಯಲ್ಲಿದ್ದ ಕಾರಣದಿಂದಾಗಿ ಪ್ರಕೃತಿ ನಿಯತಿಯು ಪಾಲಿತವಾಗುತ್ತಿತ್ತು. ಜೀವಿತದ ಅವಧಿಯು ವಾನಪ್ರಸ್ಥ ಅಥವಾ ಸಂನ್ಯಾಸತ್ವದ ನೆಲೆಗೆ ಬರುವ ಹೊತ್ತಿಗೆ ಅನುಭವದ ಮಾಗುತನ ಪ್ರಾಪ್ತವಾಗಿ ವ್ಯಕ್ತಿ ಬದುಕನ್ನು ಸಮಗ್ರವಾಗಿ ಪರಿಭಾವಿಸುವ, ವಿವೇಚಿಸುವ, ಕಿರಿಯರಿಗೆ ಮಾರ್ಗದರ್ಶನ ನೀಡುವ ಆದರ್ಶವಾಗಿಬಿಡುತ್ತಿದ್ದ. ಆ ಬಗೆಯ ಆದರ್ಶ ನಾಗರಿಕರು ರೂಪಿತವಾಗುತ್ತಿದ್ದುದರಿಂದಲೇ ನಾಗರಿಕ, ನೈತಿಕ ಸಮಾಜ ಚಲನೆಯಲ್ಲಿರುತ್ತಿತ್ತು.

ಸಮಸ್ಯೆ ಪ್ರಾರಂಭವಾಗಿದ್ದೇ ಕಾಮವನ್ನು ತುಚ್ಛವೆಂದು ಪರಿಭಾವಿಸತೊಡಗಿದಾಗಿನಿಂದ. ಆ ಭಾವನೆ ಭಾರತೀಯ ಪುರಾತನ ತತ್ತ್ವಮೀಮಾಂಸೆಯ ಹಿನ್ನೆಲೆಯಲ್ಲಿ ಬರಲೇಬಾರದಾಗಿತ್ತು.

ಕಾಮವೆಂಬುದು ಪಾಪದ ಕ್ರಿಯೆಯಲ್ಲ. ಅದು ಅನೈತಿಕ ಮಾರ್ಗದಲ್ಲಿ, ಬಲವಂತ ಮತ್ತು ಕ್ರೌರ್ಯದ ಮಾರ್ಗದಲ್ಲಿ ಆಚರಣೆಗೊಂಡಾಗ ಮಾತ್ರ ಪಾಪವಾಗುತ್ತದೆ. ಕಾಮ ಸಂಕುಲದ ಮುಂದುವರಿಕೆಗಾಗಿ ಪ್ರಕೃತಿ ನೀಡಿರುವ ವರದಾನ, ಸಸ್ಯ ಕೀಟಾದಿ ಸಕಲೆಂಟು ಜೀವರಾಶಿಗಳ ಸಂತತಿ ಮುಂದುವರಿಕೆಯ ಅನಿವಾರ್ಯ ಸಾಧನ. ಇದನ್ನು ಪಾಪವೆಂದು ಕರೆದು ನಿರಾಕರಿಸುವ ಮನಸ್ಥಿತಿಯೇ ಆರೋಗ್ಯಕರವಾದುದಲ್ಲ ಮತ್ತು ನಿಯತಿ ವಿರೋಧಿಯಾದುದು. ಆಶ್ರಮ ಧರ್ಮದಲ್ಲಿ ಬ್ರಹ್ಮಚರ್ಯವೆಂಬುದು ಶಿಸ್ತು ಸಂಯಮ ಬದ್ಧ ಅಧ್ಯಯನದಲ್ಲಿ ಅನುಸರಿಸಬೇಕಾದ ಕಟ್ಟುನಿಟ್ಟಾದ ಜೀವನ ಮಾರ್ಗವನ್ನು ತಿಳಿಸುತ್ತದೆ. ವಿದ್ಯೆ ಕಲಿಯುವಾಗ ಮನಸ್ಸು ಚಂಚಲಗೊಳ್ಳಬಾರದು. ಬಾಲ್ಯದಿಂದ ಇಪ್ಪತ್ತೈದನೆಯ ವಯಸ್ಸಿನವರೆಗೆ ಇಂದ್ರಿಯವನ್ನು ನಿಗ್ರಹಿಸಿದರೆ ವಿದ್ಯೆ ತಲೆಗೆ ಹೋಗುತ್ತದೆ. ಗೃಹಸ್ಥ ಜೀವನಕ್ಕೆ ಕಾಲಿಟ್ಟ ಮೇಲೆ ಕಾಮದ ಅನುಭವ ಕೇವಲ ಸಂತಾನ ಮುಂದುವರಿಕೆಯ ಸಾಧನ ಮಾತ್ರವಾಗದೆ ಸಹಜ ಸುಖದ ಕಲೆಯೂ ಆಗಿ ಅರಳುತ್ತದೆ ಎಂಬ ಅರಿವು ನಮ್ಮವರಿಗಿತ್ತು. ಅದನ್ನು ನಮ್ಮ ಪೂರ್ವಿಕರು ಮನಗಂಡಿದ್ದರು. ಆದುದರಿಂದಲೇ ಇಂದಿಗೂ ಜಗತ್ತೇ ಅಚ್ಚರಿಯಿಂದ ಪರಿಗಣಿಸುತ್ತಿರುವ ವಾತ್ಸಾಯನನ ಕಾಮಸೂತ್ರ ಕ್ರಿಸ್ತಪೂರ್ವದಲ್ಲೇ ನಮ್ಮಲ್ಲಿ ರಚಿತಗೊಂಡಿದೆ.

ಬ್ರಹ್ಮಚರ್ಯವೆಂಬುದು ಅತ್ಯಂತ ಪವಿತ್ರ ಜೀವನ ವಿಧಾನವೆಂಬ ಭಾವನೆ ಬರಲು ಕ್ರಿಯೆಯನ್ನು ಮಾಯೆಯೆಂದು ಪರಿಗಣಿಸಿದ್ದು ಒಂದು ಕಾರಣವಾದರೆ, ಇಂದ್ರಿಯ ನಿಗ್ರಹವನ್ನು ಮಾಡುವ ಸಂಯಮ ಸಾಧಿಸಲಾಗದ ವಿಫಲತೆಯ ಕಾರಣವೂ ಮತ್ತೊಂದಾಗಿರಬೇಕು. ಬ್ರಹ್ಮಚರ್ಯೆಯಿಂದ ಅದ್ಭುತವಾದ ಸಿದ್ಧಿಗಳು ಪ್ರಾಪ್ತವಾಗುತ್ತವೆಯೆಂಬ ಭ್ರಮೆಯೂ ಕೆಲಸ ಮಾಡಿದೆ. ವೀರ್ಯನಾಶದಿಂದ ದೇಹ ಮನಸ್ಸುಗಳು ದುರ್ಬಲವಾಗುತ್ತವೆ; ಅದರ ನಿಗ್ರಹದಿಂದ ವಜ್ರಕಾಯ ಪ್ರಾಪ್ತವಾಗುತ್ತದೆಯೆಂಬ ಹುಸಿ ನಂಬಿಕೆಯ ದಾಸರಾದ ದುರ್ಬಲ ಮನಸ್ಥಿತಿಯೂ ಕೆಲಸ ಮಾಡಿದೆ. ಈ ಹುಸಿ ನಂಬಿಕೆ ಮತ್ತು ಭ್ರಮೆಗಳಿಂದಾಗಿ ಅತ್ಯಮೂಲ್ಯವಾದ ಗೃಹಸ್ಥ ಧರ್ಮವನ್ನು ನಿರಾಕರಿಸಿ ಸಂನ್ಯಾಸಾಶ್ರಮಕ್ಕೆ ನೇರವಾಗಿ ಜಿಗಿಯುವ ಪರಿಕ್ರಮ ಧಾರ್ಮಿಕ ವಲಯಗಳಲ್ಲಿ ಪ್ರಾರಂಭವಾಯಿತು. ಇದರಿಂದ ಪ್ರಕೃತಿ ನಿಯತಿಗೆ ವಿರುದ್ಧವಾದ ಋತುಸತ್ಯವನ್ನು ಮೀರುವ ಪ್ರಯತ್ನವಾದಂತಾಯಿತು. ಇದಕ್ಕೆ ಸಾಧಕನಿಗೆ ಅಗಾಧವಾದ ಆತ್ಮಸಂಯಮ, ಇಂದ್ರಿಯ ನಿಗ್ರಹ, ನಿರ್ಮೋಹ ಮನಸ್ಥಿತಿಗಳು ಬೇಕಾಗುತ್ತವೆ. ಆಧುನಿಕ ಯುಗದಲ್ಲಿ ವಿವೇಕರಂಥವರು ಅಪರೂಪಕ್ಕೆ ಮಾದರಿಯಾಗಿ ನಿಲ್ಲುತ್ತಾರೆ. ಅವರ ನಡೆಯನ್ನು ಸಹ ಸಹಜ ಮಾರ್ಗವೆಂದು ಕರೆಯಲಾಗದು.

ಸಂನ್ಯಾಸ ಜೀವನಕ್ಕೆ ಬ್ರಹ್ಮಚರ್ಯವೆಂಬುದು ಅನಿವಾರ್ಯವೆಂದು ಧಾರ್ಮಿಕ ಸಂಸ್ಥೆಗಳು ತೀರ್ಮಾನಿಸಿ ಬಾಲಕರನ್ನೇ ವಟುಗಳನ್ನಾಗಿ ಬೆಳೆಸಿ, ಮುಂದೆ ಅವರನ್ನೇ ಪೀಠಾಧೀಶರನ್ನಾಗಿಸುವ ಪರಿಪಾಠ ಬೆಳೆಯಿತು. ಅದೇ ಸಂಪ್ರದಾಯವಾಯಿತು. ಆಗ ಬೆಕ್ಕು ಕದ್ದು ಹಾಲು ಕುಡಿಯುವ ಪ್ರಕೃತಿಕ್ರಿಯೆ ಸಲೀಸಾಗಿ ನಡೆಯತೊಡಗಿತು.

೨೬-೦೪-೨೦೧೨

# ಶ್ರಮಿಕರ ಕಣ್ಣೀರು

ಭಾರತದ ಮಾಜಿ ಪ್ರಧಾನಿಗಳೂ 'ಚಾಚಾ' ಎಂದು ಮಕ್ಕಳಿಂದ ಪ್ರೀತಿಯಿಂದ ಕರೆಸಿಕೊಂಡವರೂ ಆದ ಜವಹರಲಾಲ ನೆಹರೂ ಅವರು 'ದುಡಿಮೆಯಿಂದ ಯಾರೂ ಶ್ರೀಮಂತರಾಗುವುದಿಲ್ಲ; ಉಳಿತಾಯದಿಂದ ಮಾತ್ರ ಶ್ರೀಮಂತರಾಗುತ್ತಾರೆ' ಎಂದು ಲೌಕಿಕ ಶ್ರೀಮಂತರಾಗುವ ಬಗ್ಗೆ ಅಭಿಪ್ರಾಯಪಟ್ಟಿದ್ದಾರೆ. ಅವರ ಈ ಮಾತನ್ನು ಉಳಿತಾಯ ಮನೋಧರ್ಮವನ್ನು ಬೆಳಿಸಿಕೊಳ್ಳುವ ದಿಸೆಯಲ್ಲಿ ಅರ್ಥಪೂರ್ಣವೆಂದು ಒಪ್ಪಬಹುದು. ಇಂದಿನ ಅಮೇರಿಕಾದ ಆರ್ಥಿಕ ಕುಸಿತದ ಹಿಂದೆ ಅಲ್ಲಿನ ಜನರ ಭೋಗಮುಖತೆಯ ಜೊತೆಗೆ ಅವರ ಉಳಿತಾಯ ಮಾಡದ ಪ್ರವೃತ್ತಿಯ ಕಾರಣವೂ ಒಂದು ಎಂದು ತಜ್ಞರು ಅಭಿಪ್ರಾಯಪಡುತ್ತಾರೆ. ಇದೇ ಕಾರಣಕ್ಕೆ ಜಗತ್ತು ತಲ್ಲಣಗೊಳ್ಳುತ್ತಿದ್ದ ಸಂದರ್ಭದಲ್ಲಿ ಭಾರತೀಯ ಬದುಕಿನ ಸ್ಥಿರತೆಗೆ ಅದರಲ್ಲಿದ್ದ ಉಳಿತಾಯ ಮನೋಧರ್ಮವೇ ಅಡಿಪಾಯವಾಗಿತ್ತೆಂದು ಸಮರ್ಥನೆಯನ್ನೂ ನೀಡುತ್ತಾರೆ.

ನಿಜ, ಭಾರತೀಯ ಬದುಕಿನಲ್ಲಿ ಭವಿಷ್ಯದ ಚಿಂತೆ ವಿವೇಚನೆಯ ಮಟ್ಟದಲ್ಲಿ ಸದಾ ಕೆಲಸ ಮಾಡುತ್ತಿರುತ್ತದೆ. ತನಗಾಗಿ, ತನ್ನ ಕುಟುಂಬದ ಸೌಖ್ಯಕ್ಕಾಗಿ ಹಾಗೂ ಸಮುದಾಯ ಹಿತಕ್ಕಾಗಿ ತನ್ನ ದುಡಿಮೆಯಲ್ಲಿ ತುಸು ಪಾಲನ್ನು ಕಾಯ್ದಿರಿಸಬೇಕೆಂದು ಕೌಟಿಲ್ಯನು ಹೇಳುತ್ತಾನೆ. ಆ ಚಿಂತನಾ ಕ್ರಮವೇ ಚರಿತ್ರೆಯುದ್ದಕ್ಕೂ ಭಾರತೀಯ ಬದುಕಿನ ಮೌಲ್ಯವಾಗಿ ಹರಿಯುತ್ತಾ ಬಂದಿದೆ. ಆದರೆ ಅದು ಸಂಪೂರ್ಣ ವಾಸ್ತವ ಚಿತ್ರವಲ್ಲ; ಅದೊಂದು ಆದರ್ಶವಾಗಿ ಹಲವರ ಬದುಕಿನಲ್ಲಿ ಕನಸಾಗಿಯೇ ಉಳಿದುಬಿಡುತ್ತದೆ. ಏಕೆಂದರೆ ದುಡಿಮೆಗೂ ಸುಖಕ್ಕೂ ಆಗಿಬರದಿರುವ ಸಂಭ್ರಮವೇ ಹೆಚ್ಚು. ದೈಹಿಕ ದುಡಿಮೆಯನ್ನು ಬೌದ್ಧಿಕ ಶಕ್ತಿ ಚರಿತ್ರೆಯುದ್ದಕ್ಕೂ ನಿಕೃಷ್ಟವೂ ಕನಿಷ್ಠವೂ ಆದುದೆಂದು ತೀರ್ಪು ನೀಡಿ ಬಹುಸಂಖ್ಯಾತ ಶ್ರಮಜೀವಿಗಳನ್ನು ದಾಸರನ್ನಾಗಿಸಿಕೊಂಡು ಅತ್ಯಂತ ಕಡಿಮೆ ವೇತನದಲ್ಲಿ ದುಡಿಸಿಕೊಂಡಿದೆ. ಆಧುನಿಕ ಚಿಂತನೆಗಳ ಗಾಳಿ ಬೀಸಿ ಸಮಾನತೆಯ ಮಾತುಗಳನ್ನಾಡುತ್ತಿರುವ ಈ ಸಂದರ್ಭದಲ್ಲೂ ದುಡಿಸಿಕೊಳ್ಳುವ ಯಜಮಾನಿಕೆಯೇನೂ ಕಡಿಮೆಯಾಗಿಲ್ಲ. ಪ್ರಕೃತಿಯಲ್ಲಿ ಲಭ್ಯವಾಗುವುದನ್ನು ಮತ್ತು ಬೆಳೆದುದನ್ನು ತಿಂದು ಜೀವಿಸುತ್ತಿದ್ದ ಕಾಲದಿಂದ, ವರ್ತಮಾನದ ಯಂತ್ರ ನಾಗರಿಕತೆಯ ನಿರ್ಮಿತಿಯನ್ನು ಬಳಸುವ ಕಾಲಘಟ್ಟದಲ್ಲೂ ಮೂಲಭೂತ ಆವಶ್ಯಕತೆಗಳು ಅವೇ ಆಗಿವೆ; ಅವುಗಳಲ್ಲಿ ಅಂತಹ ಬದಲಾವಣೆ ಕಂಡುಬಂದಿಲ್ಲ. ಆದರೆ ಬೌದ್ಧಿಕ ಶಕ್ತಿಯಿಂದ ಬದುಕುತ್ತಿರುವ ಅಲ್ಪಸಂಖ್ಯಾತ ಜನರ ಬೇಡಿಕೆಗಳ ಬಾಯಾರಿಕೆಯು ವಿವಿಧ ಸ್ವರೂಪಗಳಲ್ಲಿ ಹೆಚ್ಚುತ್ತಲೇ ಇದೆ. ಈ ಬೇಡಿಕೆ ತೀರದ ಸುಖದ

ಹುಡುಕಾಟದಲ್ಲಿರುವಂಥದ್ದು. ಇಂಥ ಹುಚ್ಚು ಸುಖದ ತೃಪ್ತಿಗಾಗಿ ಜಗತ್ತಿನಲ್ಲಿ ಚರಿತ್ರೆಯುದ್ದಕ್ಕೂ ಶ್ರಮಿಕರ ಬೆವರನ್ನು ಕುಡಿಯಲಾಗಿದೆ; ಅವರ ಬದುಕನ್ನು ಕದಿಯಲಾಗಿದೆ.

ನಾವು ಇಂದು 'ನಮ್ಮ ಸಂಸ್ಕೃತಿ', 'ನಮ್ಮ ನಾಗರಿಕತೆ' ಎಂದು ತೋರಿಸಿ ಹೆಮ್ಮೆಪಡುವ ಬೃಹತ್ ಕಲಾಕೃತಿಗಳನ್ನು ದೇವಸ್ಥಾನ ರೂಪಗಳನ್ನು ಕಟ್ಟಲು ಪ್ರತಿ ಶತಮಾನದಲ್ಲೂ ಅಸಂಖ್ಯಾತ ಜನರು ಹಸಿವು ನೀರಡಿಕೆಗಳಿಂದ ಪ್ರಾಣತ್ಯಾಗ ಮಾಡಿದ್ದಾರೆ. ಪ್ರಭುತ್ವ ಮತ್ತು ಪುರೋಹಿತಶಾಹಿ ವರ್ಗಗಳು ಒಗ್ಗೂಡಿ, ಧರ್ಮ ಕರ್ಮ ಪುಣ್ಯ ಎಂಬ ಪ್ರಲೋಭನೆಯನ್ನೊಡ್ಡಿ ಮುಗ್ಧರನ್ನು ದುಡಿಸಿಕೊಂಡಿದ್ದಾರೆ. ಇಲ್ಲವೇ, ಯುದ್ಧದಲ್ಲಿ ಸೆರೆಹಿಡಿದು ಖೈದಿಗಳನ್ನಾಗಿ ಎಳೆತಂದು, ಹೊಡೆದು ಬಡಿದು ತಮ್ಮ ಸಂಸ್ಕೃತಿ ನಾಗರಿಕತೆಗಳ 'ಬೆಳೆ'ಯನ್ನು ಬೆಳೆದಿದ್ದಾರೆ! ಇದು ನೇರವಾಗಿ ರಕ್ತ ಹೀರಿ ನಗುವ ಕ್ರೌರ್ಯದ ಪರಿ. ಚರಿತ್ರೆ ದುಡಿಯುವ ವರ್ಗವನ್ನು ನಡೆಸಿಕೊಂಡಿರುವುದೇ ಹೀಗೆ! ಅಂಥದ್ದರಲ್ಲಿ ದುಡಿಯುವವನು ಬಾಳಿಯಾನು, ಬೆಳೆದಾನು ಎಂಬ ಮಾತುಗಳು ಧರ್ಮದ ಮುಖವಾಡದ ಮಾತುಗಳಾಗಿ ಶೋಷಣೆಯ ಸಾಧನಗಳಾಗಿವೆ. ಈ ಶೋಷಣೆಯ ಪ್ರಕ್ರಿಯೆಯಲ್ಲಿ ಪ್ರಭುತ್ವದ ಭೋಗಲಾಲಸೆಗಿಂತ ಭಯಾನಕವಾದುದು ಧರ್ಮದ ನಡೆ! ಅದು 'ದುಡಿಯುವುದು ಪುಣ್ಯದ ಕೆಲಸ; ಸ್ವರ್ಗ ಪ್ರಾಪ್ತಿಯ ಮೆಟ್ಟಿಲು. ಇಲ್ಲಿ ಈ ದುಡಿಮೆಯಿಂದ ನಿಷ್ಕಾಮ ಮನಸ್ಕನಾಗಿದ್ದರೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ಇಲ್ಲಿ ನಿಮಗೆ ಅಪರಿಮಿತ ಸುಖ ಲಭ್ಯವಾಗುತ್ತದೆ' ಎಂಬ ಬಣ್ಣದ ಮಾತುಗಳನ್ನಾಡಿ ಶ್ರಮಸಂಸ್ಕೃತಿಯನ್ನು ವಂಚಿಸಿದೆ.

ಚರಿತ್ರೆಯುದ್ದಕ್ಕೂ ಬಹುಪಾಲು ಶ್ರಮಿಕವರ್ಗ ಹಗಲಿರುಳು ದುಡಿದು ಕಂಗಾಲಾಗಿದೆಯೇ ಹೊರತು ಅದರ ಕೈಯಲ್ಲಿ ಉಳಿತಾಯ ಮಾಡಲು ಸಾಧ್ಯವಾಗಿಲ್ಲ, ತನ್ನ ಮತ್ತು ಮನೆಯವರ ದುಡಿಮೆ ಅವರ ಅರೆಹೊಟ್ಟೆ ತುಂಬಿಸಲು ಸಾಧ್ಯವಾಗಿಲ್ಲ; ಮಾನವಿರಲಿ, ಚಳಿಗಾಳಿ ಬಿಸಿಲುಗಳಿಂದ ರಕ್ಷಿಸುವಂಥ ಬಟ್ಟೆ ಖರೀದಿಸಲು ಸಾಧ್ಯವಾಗಿಲ್ಲ, ಅಂಥವರಲ್ಲಿ ಉಳಿಸುವುದೆಂತು? ಈ ಶ್ರಮ ಸಂಸ್ಕೃತಿಯ ವರ್ಗದ ಬೆವರ ಫಲವನ್ನು ಉಣ್ಣುತ್ತಿರುವ ಶ್ರೀಮಂತರಿಗೆ ಉಳಿಸುವುದು ಸುಲಭ; ಉಳಿತಾಯದ ಮಾತುಗಳನ್ನಾಡುವುದೂ ಸುಲಭ. ಜಗತ್ತಿನಲ್ಲಿ ಕೈಗಾರಿಕಾ ಕ್ರಾಂತಿಯಾದ ನಂತರ ಕಾರ್ಮಿಕರ ಸಂಘಟನೆಗಳು ಒಂದು ತಾತ್ತ್ವಿಕ ಚಿಂತನೆಯ ಆಧಾರದ ಮೇಲೆ ತಮ್ಮ ಹಕ್ಕುಗಳಿಗಾಗಿ ಹೋರಾಡಲು ಪ್ರಾರಂಭವಾದ ಮೇಲೆ ಶ್ರಮಿಕರ ಬದುಕಿನಲ್ಲಿ ಬದುಕನ್ನು ಅನುಭವಿಸುವ ಆಶಾಕಿರಣವೊಂದು ಮೂಡಿತ್ತು. ಆದರೆ ಜ್ಞಾನ - ವಿಜ್ಞಾನ - ತಂತ್ರಜ್ಞಾನಗಳ ಅಭಿವೃದ್ಧಿಯ ಜೊತೆಗೆ ಆ ಆಶಾಕಿರಣಕ್ಕೂ ಮಂಕು ಕವಿಯುತ್ತಿದೆ. ಜಗತ್ತಿನ ಬಹುಪಾಲು ದೇಶಗಳು ಮತ್ತೆ ಮತ್ತೆ ಬಂಡವಾಳಶಾಹಿ ಸಂಸ್ಕೃತಿಯ ಗುಲಾಮರಾಗಹೊರಟಿರುವುದು ಶ್ರಮಿಕರ ಬಾಳಿನ ಅರೆಬರೆ ಬೆಳಕು ಮತ್ತಷ್ಟು ಮಂದವಾಗತೊಡಗಲು ಕಾರಣವಾಗಿದೆ.

೧೦-೦೫-೨೦೧೨

# ಬಾ ಮುಂಗಾರೆ, ಬಾ

ಬೇಸಿಗೆಯೇ ಹಾಗೆ. ಅದು ಸುಡುತ್ತದೆ. ಜೀವಿಗಳ ಜೀವವನ್ನು ತಲ್ಲಣಗೊಳಿಸುತ್ತದೆ. ನಿಂತಲ್ಲಿ ನಿಲ್ಲಗೊಡದೆ, ಕೂತಲ್ಲಿ ಕೂರಗೊಡದೆ, ಮಲಗಲು ಆಸ್ಪದಗೊಡದೆ ಜೀವಿಯನ್ನು ವಿಹ್ವಲಗೊಳಿಸುತ್ತದೆ. ಕೆರೆ ಕಟ್ಟೆಗಳು ಬತ್ತಿಹೋಗುತ್ತವೆ. ನದಿಗಳು ಸುಂಡಿಹೋಗಿ ಕಾದ ಮರಳ ಕಾವಲಿಗಳಾಗುತ್ತವೆ. ಬೇಸಿಗೆ ದಿವಸದಲ್ಲಿ ಬೇವಿನ ಮರ ತಂಪು ಎಂಬ ಮಾತು ಕೂಡ ಈಗ ಅರ್ಥ ಕಳೆದುಕೊಳ್ಳುತ್ತಿದೆ. ಬೇವು ಹೊಂಗೆಗಳು ಬಿಸಿಲಿನ ಹೊಡೆತಕ್ಕೆ ತಮ್ಮ ಸಹಜ ತಂಪನ್ನು ಕಳೆದುಕೊಂಡು ಬೀಸುವ ಬಿಸಿ ಗಾಳಿಗೆ ನಿಟ್ಟುಸಿರು ಬಿಡುವಂತೆ ಭಾಸವಾಗುತ್ತದೆ. ನೀರಿಗಾಗಿ ಹಪಹಪಿಸುವ ಪ್ರಾಣಿ ಪಕ್ಷಿಗಳು ತಮ್ಮ ದನಿಯ ಸಹಜತೆಯನ್ನು ಕಳೆದುಕೊಂಡು ಬೇಯುತ್ತಿರುವ ಸ್ಥಿತಿ ಅನುಭವಕ್ಕೆ ಬರುತ್ತದೆ. ನೀರಿಲ್ಲದ ಕೆರೆಗೆ ನೀರು ಕುಡಿಯಲು ಬರುವ ಪಶುಪಕ್ಷಿಗಳ ನಿರಾಸೆಯ ದುಃಖವನ್ನು ಅವು ಇಡುವ ಹೆಜ್ಜೆಯ ಭಾರ ವ್ಯಕ್ತಪಡಿಸುತ್ತದೆ.

ಬಾವಿಗಳ ಆಳದಲ್ಲಿ ನೀರಿನ ಸೆಲೆ ಬತ್ತಿದೆ. ಬಾವಿಯ ತಳಕ್ಕೇ ಬೋರು ಹೊಡೆದು ನೀರು ಒರತೆಯನ್ನು ಚಿಮ್ಮಿಸುವ ವಿಫಲಯತ್ನ ನಡೆಯುತ್ತಿದೆ. ಮೊದಲೆಲ್ಲಾ ನೂರು ಇನ್ನೂರು ಅಡಿಗಳಿಗೆಲ್ಲ ದಿನವೆಲ್ಲಾ ಬಳಸಿದರೂ ಚಿಮ್ಮುತ್ತಿದ್ದ ಕೊಳವೆಬಾವಿ ನೀರು ಮಾಯವಾಗಿದೆ. ರಾಜ್ಯದ ಕೆಲವೆಡೆಯಂತೂ ಸಾವಿರಾರು ಅಡಿ ಕೊರೆದು ರೈತ ಬೆವೆತು ಸುಸ್ತಾಗಿದ್ದಾನೆ. ನೀರಿಗಾಗಿ ಹಂಬಲಿಸಿ 'ಯಾತಕ್ಕೆ ಮಳೆ ಹೋದವೋ' ಎಂದು ಪರಿತಪಿಸುತ್ತಿದ್ದಾನೆ. ರೈತನಿರಲಿ, ಅವನು ಸಾಕಿರುವ - ಅವನ ಜೀವನದ ಅನಿವಾರ್ಯ ಅಂಗವಾಗಿಯೇ ಆಗಿರುವ - ದನಕರು ಎಮ್ಮೆ ಇತ್ಯಾದಿ ಪಶುಗಳು ಪಡುವ ಯಾತನೆ ಹೃದಯವಿದ್ರಾವಕವಾಗಿದೆ. ಕನ್ನಡನಾಡಿನ ಉತ್ತರ ಭಾಗವಂತು ನೀರಿಲ್ಲದೆ ಸಂತ್ರಸ್ತವಾಗಿದೆ. ತಾನು ಸಾಕಿರುವ ಪಶುಗಳು ನೀರು-ಮೇವಿಗಾಗಿ ಪರಿತಪಿಸುವ ಪರಿಯನ್ನು ನೋಡಲಾರದೆ ಅವುಗಳನ್ನು ಒಮ್ಮೆಗೇ ಜೀವಮುಕ್ತಗೊಳಿಸಲು ತೀರ್ಮಾನಿಸುತ್ತಾನೆ. ಅದೊಂದು ಬಗೆಯ ದಯಾಮರಣವೆಂಬುದು ಹೃದಯವಿರುವವರ ಅನಿಸಿಕೆ.

ಈ ಬರಹ ಕಡು ಬೇಸಿಗೆ ಕವಿಯ ಬರಹವನ್ನು ಕೂಡ ಅಣಕಿಸುತ್ತದೆ. ಅಥವಾ ಬೇಸಿಗೆಯ ಕವಿಯ ಗ್ರಹಿಕೆ ಕೂಡ ಈಗಿನ ಸ್ಥಿತಿಯಲ್ಲಿ ಮೇಲ್ಪದರದ್ದು ಅನಿಸಿಬಿಡುತ್ತದೆ : 'ಕೆರೆಯಾಗಿದೆ, ಕೆಸರಾಗಿದೆ; ಕೆಂಗೆಟ್ಟಿವೆ ಮೀನು; ಮಾತಾಡದೆ ನೋಡುತಿದೆ ತುಟಿಯಿಲ್ಲದ ಬಾನು...... ಗಿಳಿ ಕೋಗಿಲೆ ಹಾಡಿದರೂ ತಲೆದೂಗದ ಬಾಳು;' (ಕೆ.ಎಸ್.ನ.) ಕೊನೆ ಪಕ್ಷ ಕೆರೆ ಕೆಸರಾಗಿ ತೇವಾಂಶ ಭರಿತ ಬಗ್ಗಡದಲ್ಲಿ ಕಂಗೆಡುವ ಮೀನಿಗೆ ಬದುಕುವ ಆಸೆ ಅಂತರಾಳದಲ್ಲಿ ಎಲ್ಲೋ ಉಸಿರಾಡುತ್ತಿರುತ್ತದೆ. ಬೇಸಿಗೆಯ ಝಳಕ್ಕೆ ಮರದ ಮೇಲೆ ಕೂತು ಹಾಡುವ ಕೋಗಿಲೆಗೆ

ವರ್ಷಾಗಮನದ ಸೂಚನೆಯಾದರೂ ಸಿಕ್ಕಿರುತ್ತದೆ. ಆದರೆ ವರ್ತಮಾನದ 'ಬರದ' ಬೇಸಿಗೆಯ ತಾಪ ಕಾದ ಬಾಣಲೆಯಲ್ಲ; ಅದು ಕೊತಕೊತನೆ ಕುದಿವ ಲಾವಾ! ಇಂಥ ಬಿರು ಬೇಸಿಗೆಯ ಹಸಿವು ದಾಹಗಳಿಗೆ ಸರ್ಕಾರ, ದಯಾ ಸಂಸ್ಥೆಗಳು ನೀಡುವ ಪರಿಹಾರ ಮಾತ್ರ ಕಾದ ಕಲ್ಲಿನ ಮೇಲೆ ಬಿದ್ದ ಚೂರು ಹನಿ! ಅದು ಬಿದ್ದಕೂಡಲೇ ಕಣ್ಣಿಗೆ ಕಾಣದಂತೆ ಆವಿಯಾಗಿಬಿಡುತ್ತದೆ.

ಇದಕ್ಕೆ ಪ್ರಕೃತಿಯೇ ನೆರವಿಗೆ ಬರಬೇಕು. ಇಂದಿನ ಪ್ರಕೃತಿವಿಕೋಪಕ್ಕೆ ಪ್ರಕೃತಿಯ ಲಯದ ಏರುಪೇರುಗಳು ಎಷ್ಟು ಕಾರಣವೋ, ಅದಕ್ಕಿಂತಲೂ ನಾವು ಮಾಡುತ್ತಿರುವ ಋತುವಿರೋಧಿ ಚಟುವಟಿಕೆಗಳು ಕಾರಣವಾಗಿವೆ. ಮಾನವನಿಗೆ ತನ್ನ ತಪ್ಪಿನ ಅರಿವು ಆಗುತ್ತಿರುವಂತೆ ಕಾಣುತ್ತಿಲ್ಲ. ಏಕೆಂದರೆ ವರ್ತಮಾನದ ಮಾನವ 'ಈ ಜಗತ್ತು ಕೇವಲ ನನ್ನದು, ಅದು ನನಗಾಗಿ ಮಾತ್ರ' ಎಂದು ಬಗೆದು, ಅದನ್ನು ತನ್ನ ಸ್ವಾರ್ಥಕ್ಕೆ ಬಗೆಬಗೆದು ಭಕ್ಷಿಸತೊಡಗಿದ್ದಾನೆ. ಈ ಜಗತ್ತನ್ನು ನಮ್ಮ ಪೂರ್ವಿಕರು ಕಾಪಾಡಿದ್ದಾರೆ. ನಾವು ನಮ್ಮ ಮುಂದಿನ ಪೀಳಿಗೆಗೆ ಅದನ್ನು ಸಂರಕ್ಷಿಸಿ ರವಾನಿಸಬೇಕು ಎಂಬ ವಿವೇಕ ನಮಗೆ ಬೇಕು. ಇಂದು ವಿವೇಕ ಕಳೆದುಕೊಂಡ ಮಾನವನ ಇಂದಿನ ಈ ಸ್ಥಿತಿಗೆ ಪ್ರಕೃತಿಯೇ ನೆರವಿಗೆ ಬರಬೇಕು.

ಮನುಷ್ಯ ವಿವೇಕ ರಹಿತನಾಗಿ ತಪ್ಪು ಮಾಡುತ್ತಾನೆ. ಮಕ್ಕಳ ತಪ್ಪಿಗೆ ಸಾಕಷ್ಟು ಶಿಕ್ಷೆಯಾಗಿದೆ. ಇನ್ನಾದರೂ ಪ್ರಕೃತಿ ಕರುಣೆ ತೋರಲಿ. ಮಾನವನ ಮೇಲಲ್ಲವಾದರೂ ತನ್ನ ಇತರ ಮಕ್ಕಳಾದ ಮರಗಿಡ ಪಚ್ಚೆಪೈರು ಕ್ರಿಮಿಕೀಟ ಪಶುಪಕ್ಷಿಗಳ ಮೇಲಿನ ಪ್ರೀತಿಯಿಂದಲಾದರೂ ಮಳೆ ಸುರಿಯಲಿ. ಬಾ ಮುಂಗಾರೆ, ಬಾ. 'ಗಗನ ದೊಡಲು ಗುಡುಗು ಸಿಡಿಲುಗಳನೆಸೆದು ಮಸೆ'ಯಲಿ, ಕೆರೆಕಟ್ಟೆ ತುಂಬಲಿ, ನದಿಗಳು ನೀರ ಗರ್ಭ ಧರಿಸಿ ನಲಿಯಲಿ. ಆಗ ಹಸಿರು ಎಲ್ಲೆಡೆ ರಾರಾಜಿಸುತ್ತದೆ. ಮನುಷ್ಯನ ಹಿರಿಮೆ 'ಹುಚ್ಚು ಮಳೆಯೊಳಗೆ ಮೈ ತೊಳೆವ ಹಸಿರೆಲೆಗಿಂತ ಹೆಚ್ಚಲ್ಲ' ಎಂಬ ಅರಿವು ಮೂಡಲಿ.

೨೪-೦೫-೨೦೧೨

# ಇಬ್ಬಗೆಯ ಬದುಕು

ಭಾರತೀಯ ಸಮಾಜ ತನ್ನ ಚರಿತ್ರೆಯುದ್ದಕ್ಕೂ ಇಬ್ಬಗೆಯ ಬದುಕನ್ನು ಜೀವಿಸುತ್ತಾ ಬಂದಿದೆ. ಈ ಬಗೆಯ ಅಂತರದ ಬದುಕನ್ನು ಭಾರತೀಯ ಧರ್ಮಶಾಸ್ತ್ರಗಳು ಕರ್ಮಸಿದ್ಧಾಂತದ ನೆಲೆಯಲ್ಲಿ ಅನಿವಾರ್ಯವೆಂದು ಪ್ರತಿಪಾದಿಸುತ್ತಾ ಬಂದಿವೆ. ತಾನು ಹಿಂದಿನ ಜನ್ಮಾಂತರಗಳಲ್ಲಿ ಸಂಚಯಿಸಿದ ಪುಣ್ಯದ ಬಲದಿಂದಾಗಿ ಈ ಜನ್ಮದಲ್ಲಿ ಸುಖವನ್ನು ಅನುಭವಿಸುತ್ತಾನೆಂದೂ, ಇಲ್ಲದಿದ್ದಲ್ಲಿ ಕಷ್ಟಪರಂಪರೆಗಳಲ್ಲಿ ತೊಳಲಾಡುತ್ತಾನೆಂದೂ ಹೇಳುತ್ತಾ ಬಂದಿವೆ. ಇಲ್ಲಿ ಮಾನವ ಪ್ರೀತಿಯು ಮಾಯವಾಗಿರುವುದನ್ನು ಕಾಣಬಹುದು. ಒಂದು ತುತ್ತು ಅನ್ನಕ್ಕಾಗಿ, ಬಿಸಿಲು-ಚಳಿಗಾಳಿಗಳಿಂದ ರಕ್ಷಿಸಿಕೊಳ್ಳಲು ಬೇಕಾಗಿರುವ ಒಂದು ತುಂಡು ಬಟ್ಟೆಗಾಗಿ ಮತ್ತು ಸುರಕ್ಷಿತವಾಗಿ ಮಲಗಲು ಒಂದು ಸಾಧಾರಣ ಆಸರೆಗಾಗಿ ತನ್ನ ಜೀವಮಾನವಿಡೀ ದುಡಿಯುವ ವ್ಯಕ್ತಿಯ ದುಡಿಮೆಯನ್ನು ಅವಮಾನ ಮಾಡುವ ಮತ್ತು ಆ ದುಡಿಮೆಯಿಂದ ತಾನು ಸುಖ ಅನುಭವಿಸುವ ತಂತ್ರಗಾರಿಕೆ ಈ ನಿಲುವುಗಳಲ್ಲಿ ಕೆಲಸ ಮಾಡುತ್ತಾ ಬಂದಿದೆ. ಹಾಗೆ ನೋಡಿದರೆ ಸದಾ ದುಡಿಯುವ ವ್ಯಕ್ತಿಗೆ ಅವನ ದುಡಿಮೆಗೆ ತಕ್ಕ ಪ್ರತಿಫಲದ ಸೌಖ್ಯಗಳು ದೊರೆಯಬೇಕು, ಆ ಸೌಖ್ಯಗಳನ್ನು ಕೊಡುವುದು ದುಡಿಸಿಕೊಳ್ಳುವ ವರ್ಗದ ಕರ್ತವ್ಯವಾಗಬೇಕು. ಆದರೆ ದುಡಿಸಿಕೊಳ್ಳುವ ವರ್ಗ ಚರಿತ್ರೆಯುದ್ದಕ್ಕೂ ದುಡಿಮೆಗೆ ಮೋಸಮಾಡುತ್ತಾ ಬಂದಿರುವುದು ಮಾತ್ರ ವಾಸ್ತವ ಸತ್ಯವೂ, ವಿಷಾದಕರ ಸಂಗತಿಯೂ ಆಗಿದೆ.

ಈ ಅಸಮಾನತೆಯ ಇಬ್ಬಗೆಯ ಬದುಕಿನ ವಿರುದ್ಧವಾಗಿ, ಸಮಾನತೆಯ ಸ್ಥಾಪನೆಗಾಗಿ, ಜೀವ ಪ್ರೀತಿಯ ಅರಳುವಿಕೆಗಾಗಿ ಕೆಲವಾರು ಮಹನೀಯರು ಹೋರಾಡಿರುವುದು ಸುಳ್ಳಲ್ಲ. ಬಹುಪಾಲು ದುಡಿಮೆಯ ವರ್ಗವನ್ನು ಶೋಷಕ ಶಕ್ತಿಗಳಿಂದ ಮುಕ್ತಗೊಳಿಸಲು ಮತ್ತು ಸಮಾಜವನ್ನು ಉದಾರೀಕರಣಗೊಳಿಸಲು ಅವರು ಹೆಣಗಿದ್ದರೂ ಚರಿತ್ರೆಯ ಗತಿಯಲ್ಲಿ ಮತ್ತು ಅದರ ಧೋರಣೆಯಲ್ಲಿ ಬದಲಾವಣೆಯಾದಂತೆ ಕಂಡುಬಂದಿಲ್ಲ. ಬುದ್ಧ, ಏಸು, ಬಸವನಂಥ ಮಹನೀಯರ ಸಂದೇಶಗಳು ಮತ್ತು ಜೀವನ ಮಾರ್ಗಗಳು ಮಾದರಿಯಾಗಿ ಸಮಾಜವನ್ನು ಪರಿವರ್ತನೆ ಮಾಡಿದ್ದ ಪಕ್ಷದಲ್ಲಿ ಈಗಿರುವ ಇಬ್ಬಗೆಯ ಬದುಕು ಇರಲು ಸಾಧ್ಯವಾಗುತ್ತಿರಲಿಲ್ಲ - ಅಂದರೆ ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಸಮಾನತೆಗಾಗಿ ಹೋರಾಟಗಳು ನಿರಂತರವಾಗಿ ನಡೆಯಬೇಕಾಗಿರಲಿಲ್ಲ.

ಭಾರತೀಯ ಸಮಾಜವು ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾದರೂ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳಿಂದ ಬಡವ ಶ್ರೀಮಂತ ಎಂಬ ಎರಡು ಸಮಾನಾಂತರ ರೇಖೆಗಳಲ್ಲಿ

ಚಲಿಸುತ್ತಿದೆ. ಈ ಎರಡು ವರ್ಗದ ಅಂತರಗಳನ್ನು ಮತ್ತಷ್ಟು ಛಿದ್ರಗೊಳಿಸುವ ಹುನ್ನಾರಗಳನ್ನು ಮತಧರ್ಮಗಳು ಉಂಟುಮಾಡಿವೆ. ಇದರಿಂದಾಗಿ ಬಡವ ಶ್ರೀಮಂತ ಎಂಬ ಇಬ್ಬಗೆಯ ಬದುಕು ನಾನಾ ನೆಲೆಗಳಲ್ಲಿ, ಸ್ವರೂಪಗಳಲ್ಲಿ ಸಮಾನತೆಯ ರೇಖೆಯ ಬಳಿ ಬಾರದಷ್ಟು ಅಂತರಗಳನ್ನು ತಮ್ಮತಮ್ಮಲ್ಲೇ ಸೃಷ್ಟಿಮಾಡಿಕೊಂಡುಬಿಟ್ಟಿದೆ. ಅನೇಕತೆಯಲ್ಲಿ ಏಕತೆಯನ್ನು ಕಾಣುವ ಕನಸು, ಕನಸಾಗಿ ಮಾತ್ರ ಭಾರತದಲ್ಲಿ ಜೀವಂತವಾಗಿ ಹರಿದು ಬರುತ್ತಿದೆಯಲ್ಲಾ ಎಂಬ ನೋವು ವಿಚಾರವಂತರನ್ನು, ಸೂಕ್ಷ್ಮಮತಿಗಳನ್ನು ಸದಾ ಕಾಡುತ್ತಿದೆ.

ನಾಳಿನ ಪ್ರಜೆಗಳಾದ ಇಂದಿನ ಮಕ್ಕಳು ಇಂದು ನಗರಗಳಲ್ಲಿ ಶಾಲೆಗಳಿಗೆ ಹೋಗುವ, ಕಲಿಯುವ ಭಿನ್ನತೆಯನ್ನು ನೋಡುವುದರಲ್ಲೇ ಭಾರತೀಯ ಇಬ್ಬಗೆಯ ಬದುಕಿನ ತೀವ್ರತೆ ಅರಿವಿಗೆ ಬರುತ್ತದೆ. ಇಂದಿಗೂ ಹರಿದ ಬಟ್ಟೆಗಳನ್ನು ತೊಟ್ಟು, ಮಾಸಿದ ತಲೆಯಲ್ಲಿ ಚಪ್ಪಲಿಗಳಿಲ್ಲದ ಪಾದಗಳಲ್ಲೇ ನಡೆದುಕೊಂಡು ಶಾಲೆಗೆ ಹೋಗುವ ಸಾವಿರಾರು ಮಕ್ಕಳು ಒಂದುಕಡೆ ಕಂಡುಬಂದರೆ, ಮತ್ತೊಂದು ಕಡೆ ಎಸಿ ಕಾರುಗಳಲ್ಲಿ, ಸುಸಜ್ಜಿತ ಶಾಲಾ ಬಸ್ಸುಗಳಲ್ಲಿ ಬೆಲೆಬಾಳುವ ಸಮವಸ್ತ್ರ ಧರಿಸಿ, ಬೂಟು-ಟೈಗಳನ್ನು ತೊಟ್ಟು ಶಾಲೆಗಳಿಗೆ ಹೋಗುವ ಶ್ರೀಮಂತ ಮಕ್ಕಳಿದ್ದಾರೆ. ಈ ಇಬ್ಬರನ್ನು ಬೆಸೆಯುವ ಸಮಾನತೆಯ ತತ್ವ ಮತ್ತು ತಂತು ಮಾತ್ರ ಗೋಚರಿಸುತ್ತಿಲ್ಲ. ಇವರಿಬ್ಬರು ತಾವು ಒಂದೆಂದು ಭಾವಿಸಿ ದೇಶ ಕಟ್ಟುವ ಕಾಯಕದಲ್ಲಿ ತೊಡಗುತ್ತಾರೆಂಬ ನಂಬಿಕೆ ಬರುವುದಾದರೂ ಎಂತು.....?

ಕವಿ ಕುವೆಂಪುರವರ ಕಲ್ಕಿ ಕವನದ ಆಶಯ ಕೇವಲ ಆದರ್ಶವಾಗಿ ಮಾತ್ರ ಉಳಿದು ಬಿಡಬಹುದು ಎಂಬ ಹೆದರಿಕೆ ಕಾಡುತ್ತದೆ.

೦೭-೦೬-೨೦೧೨

# ಬ್ರದರ್‌ಹುಡ್

ಭಾರತೀಯ ಸಂವಿಧಾನವು ಭಾರತದ ನಿವಾಸಿಗಳೆಲ್ಲರನ್ನೂ ಸೋದರರರೆಂದು ಪರಿಭಾವಿಸುತ್ತದೆ. ಅದರ ಪೀಠಿಕೆಯ ಆಶಯವು ಅದೇ ಆಗಿದೆ. ಒಂದು ಆದರ್ಶ ಗಣರಾಜ್ಯದ ಕನಸು ಅದು. ಆ ಬಗೆಯ ಕನಸು ಕಾಣಲು ಇರುವ ಮುಖ್ಯ ಪ್ರೇರಣೆ ಏನೆಂದರೆ ಅದು ನಿರೀಕ್ಷಿಸುವ ಸೋದರತ್ವ ಆ ನಾಡಿನಲ್ಲಿ ಇಲ್ಲದಿರುವುದೇ ಆಗಿದೆ. ಇಲ್ಲದಿರುವ ಭಾವನೆಯನ್ನು, ಅನುಭೂತಿಯನ್ನು ಆದರ್ಶದ ನೆಲೆಯಲ್ಲಿ ಪ್ರಚಾರ ಮಾಡುವುದು ಮತ್ತು ಕಾನೂನಾತ್ಮಕವಾದ ಬಂಧಗಳ ಮೂಲಕ ಅದನ್ನು ಜನರ ಬದುಕಿನಲ್ಲಿ ಚಾಲ್ತಿಗೆ ತರುವುದು ಗಣರಾಜ್ಯದ ಉದ್ದೇಶವೂ, ಜವಾಬ್ದಾರಿಯೂ ಆಗಿರುತ್ತದೆ. ಈ ಹಿನ್ನೆಲೆಯಲ್ಲಿ ಭಾರತೀಯ ಸಂವಿಧಾನ ಕೆಲಸ ಮಾಡಿದೆ. ಆದರೆ ಅದರ ಈ ಘನ ಉದ್ದೇಶ, ಆಶಯ ಎಷ್ಟರ ಮಟ್ಟಿಗೆ ಜನ ಬದುಕಿನಲ್ಲಿ ಕೆಲಸ ಮಾಡಿದೆಯೆಂಬುದು ಚರ್ಚಾಸ್ಪದ ವಿಷಯ. ಜಾತಿ-ಜಾತಿಗಳ ನಡುವೆ, ಮತ-ಮತಗಳ ನಡುವೆ, ನಿರ್ಮಾಣವಾಗಿರುವ ಅಂತರವಿರಲಿ; ರಕ್ತಸಂಬಂಧಗಳಲ್ಲೇ ಭಾವನಾತ್ಮಕ ಬೆಸುಗೆ ಸಡಿಲವಾಗುತ್ತಿರುವ ವಾತಾವರಣ ಕಂಡುಬರುತ್ತಿರುವುದು ವಾಸ್ತವಿಕ ಸಂಗತಿ.

ಸಾಮಾನ್ಯಾರ್ಥದಲ್ಲಿ 'ಬ್ರದರ್‌ಹುಡ್' ಅಥವಾ 'ಸಿಸ್ಟರ್‌ಹುಡ್' ಎಂದರೆ ಸೋದರಿಕೆ ಸಂಬಂಧ; ಭ್ರಾತೃತ್ವ. ನೇರ ರಕ್ತಸಂಬಂಧದ ಮೂಲಕ ಜನಿಸಿದ ಅಣ್ಣತಮ್ಮಂದಿರು ಅಥವಾ ಅಕ್ಕತಂಗಿಯರ ಸಂಬಂಧ ಮತ್ತು ಒಡನಾಟದ ಮುಂದುವರಿಕೆಯನ್ನು ಅದು ಸೂಚಿಸುತ್ತದೆ. ಆದರೆ ಇಂದು ಈ ಪದಗಳ ಅರ್ಥ ಅಷ್ಟಕ್ಕೆ ಸೀಮಿತವಾಗದೆ, ವಿಸ್ತಾರಗೊಂಡಿದೆ. ಪರಸ್ಪರ ಸಹಾಯಕ್ಕೆಂದು ಕಟ್ಟಿಕೊಂಡ ಕೂಟಗಳು, ಸಹಕಾರ ಸಂಘಗಳು, ಮಂಡಳಿಗಳು ಈ ವ್ಯಾಪ್ತಿಯಲ್ಲಿ ತಮ್ಮನ್ನು ಸೇರಿಸಿಕೊಳ್ಳಲು ಬಯಸುತ್ತವೆ. ಆದರೆ ಇವುಗಳು ವ್ಯಾವಹಾರಿಕ ಅರ್ಥದಲ್ಲಿ ಒಗ್ಗೂಡಿದ ಸಂಸ್ಥೆಗಳು. ಇವುಗಳ ಅಂತರಂಗದಲ್ಲಿ ಒಂದು ಸೈದ್ಧಾಂತಿಕ ಸತ್ವವಿರುವುದಿಲ್ಲ. ಇವು ಲೌಕಿಕ ಭಿನ್ನತೆಯಲ್ಲಿ ವಿಘಟನೆಯಾಗುವ ಸಾಧ್ಯತೆಯಿರುತ್ತದೆ. ಆದರೆ 'ಬ್ರದರ್‌ಹುಡ್' ಅಥವಾ 'ಸಿಸ್ಟರ್‌ಹುಡ್'ನಲ್ಲಿ ವಿಘಟನೆಯಾಗುವ ಸಂಭವವೇ ಉದ್ಭವಿಸುವುದಿಲ್ಲ. ಏಕೆಂದರೆ ಈ ಸಂಬಂಧಗಳು ರಕ್ತಸಂಬಂಧ ಅಥವಾ ಲೌಕಿಕಾರ್ಥದ ಸಂಬಂಧಗಳಾಚೆಗಿನ ಸೈದ್ಧಾಂತಿಕ ನಂಬಿಕೆ ಮತ್ತು ಬದ್ಧತೆಯ ಮೇಲೆ ಬೆಸೆದುಕೊಂಡಿರುತ್ತವೆ. ಇಲ್ಲಿ ವ್ಯಾಪ್ತಿ ಮುಖ್ಯವಾಗುವುದೇ ಇಲ್ಲ. ಬಹುಪಾಲು ಭಾವನಾತ್ಮಕ ಸಂಬಂಧಗಳು ಕೂಡ ಮುಖ್ಯವಾಗುವುದೂ ಇಲ್ಲ. ಸಿದ್ಧಾಂತ ಮತ್ತು ಸೋದರಿಕೆಗೆ ದ್ರೋಹ ಬಗೆದವರನ್ನು ನಿರ್ದಾಕ್ಷಿಣ್ಯದಿಂದ ಇಲ್ಲವಾಗಿಸುವ ಹಂತಕ್ಕೂ ಅದು ಬೆಳೆದಿರುತ್ತದೆ.

ಈ ಬ್ರದರ್‌ಹುಡ್, ಸಿಸ್ಟರ್‌ಹುಡ್‌ಗಳು ಸಿದ್ಧಾಂತದ ಆಧಾರದ ಮೇಲೆ ಪರಸ್ಪರ ಹತ್ತಿರವಾಗುವ, ಆ ಮೂಲಕ ತಾವು ನಂಬಿದ ಸಿದ್ಧಾಂತವನ್ನು ಆಚರಿಸುವ, ಪ್ರಚಾರ ಮಾಡುವ ಮತ್ತು ಅದರ ವಿರುದ್ಧವಿರುವವರನ್ನು ನಾಶ ಮಾಡುವ ಬದ್ಧತೆಯನ್ನು ಹೊಂದಿರುತ್ತದೆ. ಇಂದು ಜಗತ್ತಿನಲ್ಲಿ ಆಳುತ್ತಿರುವ ಎಲ್ಲ ಮತ- ಧರ್ಮಗಳು, ರಾಜಕೀಯ ಸಿದ್ಧಾಂತಗಳು, ಸ್ತ್ರೀವಾದಿ ಸಿದ್ಧಾಂತಗಳು - ಇವುಗಳನ್ನು ಬಹಿರಂಗವಾಗಿ ಅಥವಾ ಗುಪ್ತವಾಗಿ ವಿರೋಧಿಸುತ್ತಿರುವ ಸೈದ್ಧಾಂತಿಕ ಸಂಘಟನೆಗಳು ಮೂಲತಃ ಇಂಥ ಬ್ರದರ್‌ಹುಡ್, ಸಿಸ್ಟರ್‌ಹುಡ್‌ಗಳ ಕಲ್ಪನೆಯ ಕೂಸುಗಳೇ ಆಗಿವೆ.

ಇಂದು ತಮ್ಮ ಅಗಾಧವಾದ ಮತೀಯ ಶಕ್ತಿಗಳಿಂದ ಜಗತ್ತನ್ನು ಆಳುತ್ತಿರುವ ಮತಗಳು ಅಥವಾ ಸರ್ವಾಧಿಕಾರಿಗಳು ಸದಾ ವಿರೋಧವನ್ನು ಎದುರಿಸುತ್ತಿರುತ್ತವೆ. ಬೃಹತ್ ದೇಹವನ್ನು ಹೊತ್ತ ಆನೆ ತನ್ನ ಕಿವಿಯಲ್ಲಿ ಸೇರಿಕೊಂಡ ಒಂದು ಸಣ್ಣ ಇರುವೆಯ ಕಡಿತಕ್ಕೆ ಹೆದರಿ ನಡುಗುವಂತೆ ಈ ಅಗಾಧ ಶಕ್ತಿಗಳು ಅತ್ಯಂತ ಬೆರಳೆಣಿಕೆಯ ಸದಸ್ಯ ಸಂಖ್ಯೆಯಲ್ಲಿರುವ ಇಂಥ ಬ್ರದರ್ ಹುಡ್, ಸಿಸ್ಟರ್‌ಹುಡ್‌ಗಳಿಗೆ ಹೆದರುತ್ತವೆ. ಏಕೆಂದರೆ ಇಂಥ ಭಿನ್ನ ನಂಬಿಕೆಯ ಸಣ್ಣ ಬೀಜಗಳಿಂದಲೇ ಭವಿಷ್ಯದಲ್ಲಿ ಅತ್ಯಂತ ದೊಡ್ಡ ಆಘಾತಗಳು ಮೂಡುತ್ತವೆಂಬ ಸತ್ಯ ಗೊತ್ತಿರುತ್ತದೆ. ಇಂಥ ಬ್ರದರ್‌ಹುಡ್, ಸಿಸ್ಟರ್‌ಹುಡ್‌ಗಳನ್ನು 'ರಹಸ್ಯ ಸಮಾಜಗಳು' ಅಥವಾ 'ನಿಗೂಢ ಸಮಾಜಗಳು' ಎಂದು ಕರೆಯುತ್ತಾರೆ. ವ್ಯವಸ್ಥೆಯ ಕರಾಳ ಬೃಹತ್ ಶಕ್ತಿಯ ವಿರುದ್ಧ ತಮ್ಮ ಹೋರಾಟವನ್ನು ಜೀವಂತವಾಗಿರಿಸಿಕೊಳ್ಳುವ ಉದ್ದೇಶದಿಂದ ತಮ್ಮ ಕೂಟಗಳನ್ನು ಚಲನಶೀಲವಾಗಿಡಲು ಈ ಗೌಪ್ಯತೆಯನ್ನು ಕಾಪಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ.

ಚರಿತ್ರೆಯಲ್ಲಿ ಸುಪ್ರಸಿದ್ಧರಾದ ಮೈಕೆಲ್ ಎಂಜೆಲೋ, ಲಿಯನಾರ್ಡೊ ಡ ವಿಂಚಿ, ನ್ಯೂಟನ್ ಮೊದಲಾದವರು ಇಂಥ ರಹಸ್ಯ ಸಮಾಜಗಳ ಸದಸ್ಯರಾಗಿದ್ದರು ಎಂಬ ಸತ್ಯ ನಮಗೆ ಕುತೂಹಲ ಮೂಡಿಸುತ್ತದೆ.

೨೧-೦೬-೨೦೧೨

# ಪ್ರಾಣಿ ಪ್ರೀತಿ

ಬ್ರಿಟನ್ನಿನಲ್ಲಿ ಇತ್ತೀಚೆಗೆ ನಡೆಸಲಾದ ಸಮೀಕ್ಷೆಯೊಂದರ ಪ್ರಕಾರ - ಬ್ರಿಟನ್ನಿನ ಅರ್ಧಕ್ಕಿಂತ ಹೆಚ್ಚುಮಂದಿ ಪ್ರಾಣಿ ಪ್ರಿಯರು. ತಮ್ಮ ಪ್ರೀತಿಯ ಸಾಕುಪ್ರಾಣಿಗಳನ್ನು ತಮ್ಮ ಹಾಸಿಗೆಯಲ್ಲಿ ಮಲಗಿಸಿಕೊಂಡು ನಿದ್ರಿಸಲು ಇಚ್ಛಿಸುತ್ತಾರಂತೆ. ಮತ್ತೆ, ಅವುಗಳೊಡನೆ ಮಲಗಿದರೆ ಮಾತ್ರ ಸೊಗಸಾದ ನಿದ್ರೆ ತೆಗೆಯಲು ಸಾಧ್ಯ ಎಂದೂ ಹೇಳಿದ್ದಾರೆ. ಇಲ್ಲಿ ಮತ್ತೊಂದು ಕುತೂಹಲದ ಸಂಗತಿ : ಅಲ್ಲಿನ ಪ್ರತಿ ಐದು ಮಂದಿಯಲ್ಲಿ ಇಬ್ಬರು ತಮ್ಮ ಸಂಗಾತಿಗಿಂತ ತಮ್ಮ ಪ್ರಿಯ ಸಾಕುಪ್ರಾಣಿಯೊಡನೆ ಹಾಸಿಗೆ ಹಂಚಿಕೊಳ್ಳಲು ಬಯಸುತ್ತಾರೆ. ಈ ಅಂಶ ಜಗತ್ತಿನಲ್ಲಿ ಜನರಿಗೆ ಸಾಕುಪ್ರಾಣಿಗಳ ಮೇಲಿರುವ ಪ್ರೀತಿಯ ನಿಷ್ಠೆಯನ್ನು ಎತ್ತಿ ತೋರುತ್ತದೆ!

ಮನುಷ್ಯರಿಗೆ ಮನುಷ್ಯರಿಗಿಂತ ತಮ್ಮ ಸಾಕುಪ್ರಾಣಿಗಳ ಮೇಲೇಕೆ ಹೆಚ್ಚು ನಿಷ್ಠೆ? ಪ್ರೀತಿ?

ಸಾಕುಪ್ರಾಣಿಗಳು ಆದಿಕಾಲದಿಂದಲೂ ಮಾನವ ಸಂಗಾತಿಗಳೇ? ಅವು ಅವರ ಬಳಿ ಏಕೆ ಬಂದು ಸೇರಿಕೊಂಡವು ಎಂಬುದು ಅಥವಾ ಅವರು ಅವುಗಳನ್ನು ಪಳಗಿಸಿ ಸಾಕಿಕೊಂಡು ಪ್ರೀತಿಸತೊಡಗಿದರು ಎಂಬುದು ಬೇರೆಯ ವಿಷಯ. ಅಂತೂ, ಅವು ಮಾನವರೊಡನೆ ಬಿಡಿಸಲಾಗದ ಬಂಧನದ ಬೆಸುಗೆಯನ್ನು ಬೆಸೆದುಕೊಂಡು ಬದುಕು ಸಾಗಿಸುತ್ತಾ ಬಂದಿವೆ. ಹಿಂದಿನಿಂದಲೂ ಮಾನವನು ಪ್ರಾಣಿಗಳನ್ನು ಅವಲೋಕಿಸುತ್ತಾ, ಗ್ರಹಿಸುತ್ತಾ ಅರ್ಥ ಮಾಡಿಕೊಂಡಿದ್ದಾನೆ. ಅವುಗಳ ಪ್ರೀತಿ, ನಂಬುಗೆ, ನಿಷ್ಠೆ ಪ್ರಶ್ನಾತೀತ ಎಂಬುದನ್ನು ಅನುಭವದಿಂದ ಕಂಡುಕೊಂಡಿದ್ದಾನೆ. ಮನುಷ್ಯನ ಪ್ರೀತಿ, ವಿಶ್ವಾಸ ಮತ್ತು ನಂಬುಗೆಗಳು ಕ್ಷಣಕ್ಷಣಕ್ಕೂ ಅನುಮಾನ ಪೂರಿತವಾಗಿರುತ್ತವೆ. ತಂದೆ-ತಾಯಿ, ರಕ್ತಸಂಬಂಧಗಳಲ್ಲೇ ಈ ಪ್ರೀತಿ ನಂಬುಗೆಗಳು ಸದಾ ಅಲ್ಲಾಡುತ್ತಿರುತ್ತವೆ. ಅಂದಮೇಲೆ ಇತರ ಮನುಷ್ಯ ಸಂಬಂಧಗಳಲ್ಲಿ ಭಿನ್ನಾಭಿಪ್ರಾಯ, ಒಡಕು ಮತ್ತು ದ್ರೋಹಗಳು - ಸಹಜ ವರ್ತನೆಗಳಂತೆ ಕೆಲಸ ಮಾಡುತ್ತಿರುತ್ತವೆ. ಇಂತಹ ಒತ್ತಡ ಮತ್ತು ಸಂಕೀರ್ಣ ಸಂಬಂಧಗಳ ನಡುವೆ ಮನುಷ್ಯ ಕ್ಷಮಿಸುತ್ತಾ, ಒಪ್ಪಿಕೊಳ್ಳುತ್ತಾ, ಆತಂಕಪಡುತ್ತಲೇ ಸಹಜೀವನ ನಡೆಸಬೇಕಾದ ಅನಿವಾರ್ಯತೆ ಇರುತ್ತದೆ. ಆದರೆ ಸಾಕುಪ್ರಾಣಿಗಳ ವಿಷಯದಲ್ಲಿ ಈ ಬಗೆಯ ಅಪನಂಬಿಕೆ ಇರುವುದೇ ಇಲ್ಲ. ಕೋಳಿ, ಹಸು, ಮೇಕೆ, ಕುರಿಯಂಥ ಪ್ರಾಣಿಗಳು ಕೂಡ ಸ್ವಾಮಿದ್ರೋಹವನ್ನು ಮಾಡಲಾರವು. ಅಪ್ಪಿತಪ್ಪಿ ಬೇರೆಯವರ ಮನೆಯ ಕೊಟ್ಟಿಗೆಯನ್ನು ಪ್ರವೇಶಿಸಲಾರವು. ಈ ಮನುಷ್ಯನ ಪ್ರಾಣಿ ಪ್ರೀತಿ, ಕೋತಿ, ಮೊಸಳೆ, ಆಮೆ, ಇಲಿ, ಹಾವು ಮುಂತಾದ ಪ್ರಾಣಿಗಳನ್ನೂ ಬಿಟ್ಟಿಲ್ಲ. ಅಂಥವನ್ನು ಕೂಡ ಮನೆಯಲ್ಲಿಟ್ಟು ಸಾಕಿ ಪ್ರೀತಿಸುತ್ತಾನೆ! ಅಂದಮೇಲೆ ಗಿಳಿ, ಪಾರಿವಾಳ ಮೊದಲಾದ ಪಕ್ಷಿಗಳನ್ನು ಅವನು ಮರೆತಾನೆಯೇ?

ಇತ್ತೀಚೆಗೆ ಪರಿಸರ ಪ್ರಜ್ಞೆ ಜಾಗೃತವಾದ ಮೇಲಂತೂ ಸೂಕ್ಷ್ಮಮತಿಗಳು ಸಕಲೆಂಟು ಜೀವರಾಶಿಗಳನ್ನು ಮಾನವನ ಸ್ಥಾನದಷ್ಟೇ ಬೆಲೆ ನೀಡಿ ಪ್ರೀತಿಸುತ್ತಾರೆ! ಗೌರವಿಸುತ್ತಾರೆ!

ಎಲ್ಲ ಸಾಕು ಪ್ರಾಣಿಗಳಿಗಿಂತಲೂ ಮಾನವನಿಗೆ ನಾಯಿ-ಬೆಕ್ಕು ಕಂಡರೆ ವಿಶೇಷ ಅಕ್ಕರೆ. ಮಕ್ಕಳಿಗಿಂತಲೂ ತುಸು ಹೆಚ್ಚೇ ಪ್ರೀತಿ. ಅವುಗಳನ್ನು ಮುದ್ದು ಮಾಡಿದರೆ ಅವನಿಗೆ ವಿಶೇಷ ಆನಂದದ ಅನುಭೂತಿ ಲಭ್ಯ. ಗ್ರಾಮೀಣ ಪ್ರದೇಶಗಳಲ್ಲಿ ಬೆಕ್ಕು ಮನೆಯ 'ಮುದ್ದಿನ ಸೊಕ್ಕಿನ' ಪ್ರಾಣಿಯಾದರೆ, ನಾಯಿ ಮಾನವನ ಮನೆ ಹೊಲ ತೋಟಗಳ ಸಂಗಾತಿಯಾಗಿದೆ; ಅವನ ಕಷ್ಟ ಸುಖಗಳ ಸಂಗಾತಿಯಾಗಿ ಬದುಕು ಸಾಗಿಸಿದೆ. ಈ ಪ್ರಿಯ ಸಂಗಾತಿಗಳನ್ನು ಗ್ರಾಮೀಣ ಜಗತ್ತು ಎಂದೂ ಕಟ್ಟಿಹಾಕಿ ಬೆಳೆಸಿಲ್ಲ; ಸಾಕಿಲ್ಲ. ಅವು ಪ್ರಕೃತಿಯಂತೆ ಸ್ವತಂತ್ರವಾಗಿ, ಸ್ವಚ್ಛಂದವಾಗಿ ಊರ ಬೀದಿಗಳಲ್ಲಿ, ಮನೆಯ ಪಡಸಾಲೆಗಳಲ್ಲಿ, ಊಟದ ಮನೆಯ ಆವರಣದಲ್ಲಿ ಬದುಕಿವೆ; ಈಗಲೂ ಬದುಕುತ್ತಿವೆ. ಗ್ರಾಮೀಣ ಬದುಕು ಅವುಗಳನ್ನು ಗೂಡುಗಳಲ್ಲಿ ಕೂಡಿ ಹಾಕಿ ಸಾಕಿಲ್ಲ; ವಿಶೇಷ ತಟ್ಟೆಗಳಲ್ಲಿ ಊಟ ಹಾಕುವುದಿಲ್ಲ. ಅವುಗಳನ್ನು ತಮ್ಮ ಮನೆಯ ಮಕ್ಕಳಂತೆ - ಇತರೆ ಸದಸ್ಯರಂತೆ ನೋಡಿಕೊಳ್ಳುತ್ತದೆ. ತಾವು ತಿನ್ನುವ ಆಹಾರವನ್ನು ಗ್ರಾಮೀಣರು ಸಾಕುಪ್ರಾಣಿಗಳ ಜೊತೆ ಹಂಚಿಕೊಂಡು ಉಣ್ಣುತ್ತಾರೆ. ತಮ್ಮೊಡನೆ - ಅಕ್ಕಪಕ್ಕದಲ್ಲೇ ಮಲಗಿಸಿಕೊಳ್ಳುತ್ತಾರೆ.

ಅತ್ಯಾಧುನಿಕ ಸೋಗಿನ ಜನರು ಇತ್ತೀಚೆಗೆ ನಗರ ಬದುಕಿನ ಸ್ವಚ್ಛತೆಯ ಬಗ್ಗೆ ಮಾತನಾಡುವಾಗ ಬೀದಿ ನಾಯಿಗಳು ಮಾಡುವ ಹೊಲಸನ್ನು ಕುರಿತು ವಿಶೇಷವಾಗಿ ಪ್ರಸ್ತಾಪಿಸುತ್ತಾರೆ. ಆದರೆ ತಾವು ದುಬಾರಿ ಬೆಲೆಗೆ ಕೊಂಡು ತಂದ ನಾಯಿಗಳಿಂದ ಪಾರ್ಕು, ಸ್ವಚ್ಛವಾದ ಬೀದಿಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಿಸುತ್ತಾರೆ! ಅವರ ಕಣ್ಣಮುಂದೆ ವಿದೇಶಗಳಲ್ಲಿನ ಶುಭ್ರತೆ - ಸ್ವಚ್ಛತೆ ಆದರ್ಶವಾಗಿರುತ್ತದೆ. ಆದರೆ ಅದರಂತೆ ನಡೆದುಕೊಳ್ಳುವುದಿಲ್ಲ. ಸಾಮಾನ್ಯ ಜನರು ಬೀದಿನಾಯಿಗಳನ್ನು ಸಾಕುವುದನ್ನು ಉದಾಹರಿಸಿ ಅಂತಹವರು ಕೊಳಕರು ಅನ್ನುತ್ತಾರೆ. ನಮ್ಮ ದೇಶದ ಗ್ರಾಮೀಣ ಬದುಕಿನಂತೆ ಸಾಕುಪ್ರಾಣಿಗಳು ಸ್ವಚ್ಛಂದವಾಗೇ ವಿಹರಿಸುತ್ತಿರುತ್ತವೆ ಎಂಬುದನ್ನು ನಾವು ತಿಳಿಯಬೇಕು : ಪ್ರತಿ ದೇಶ ಸಂಸ್ಕೃತಿಯಲ್ಲೂ ಅದರದೇ ಆದ ಪ್ರಾಣಿಪ್ರಿಯ ಸಂಸ್ಕೃತಿ - ಸಹ ಜೀವನವಿರುತ್ತದೆ. ಅದನ್ನು ನಾವು ಮಾನ್ಯಮಾಡಿ ಗೌರವಿಸಬೇಕು. ನಮ್ಮ ಸಾಕು ಪ್ರಾಣಿಗಳು ನಮ್ಮ ಮಕ್ಕಳಿದ್ದಂತೆ! ಅವುಗಳ ಪ್ರೀತಿ ನಮ್ಮನ್ನು ಮುದಗೊಳಿಸುತ್ತದೆ, ಹೃದಯವನ್ನು ಸ್ವಚ್ಛಗೊಳಿಸುತ್ತದೆ.

೦೫-೦೭-೨೦೧೨

# ಹೂಗಳ್ಳರು

ಹೂಗಳ್ಳತನ ನಮ್ಮ ಸಮಾಜದಲ್ಲಿ ದೊಡ್ಡ ಧಂದೆಯಲ್ಲ. ಅದು ಮಕ್ಕಳು ಹೆಣ್ಣುಮಕ್ಕಳು ಕಂಡವರ ತೋಟ ಅಥವಾ ಮನೆಯ ಆವರಣದ ಕೈದೋಟದಿಂದ ಕದ್ದು ಕಿತ್ತುಕೊಳ್ಳುವ ಪ್ರೀತಿಯ ಆಟ. ಅದೊಂದು ಬಗೆಯ ಸಾಹಸಕ್ರೀಡೆಯಾಗಿಯೂ ಶಾಲಾಮಕ್ಕಳಲ್ಲಿ ಚಿಗುರೊಡೆಯುವ ಕಲೆ. ಕಂಡವರ ತೋಟಗಳಲ್ಲಿ ಬೆಳೆದಿರುವ ಸೀಬೆ, ಮಾವು, ಪಪಾಯಿ ಕಾಯಿಗಳನ್ನು ಕದ್ದು ತಿನ್ನುವ ಸಾಹಸದಲ್ಲಿ ಅವರೊಂದು ಬಗೆಯ ಮಜಾ ಅನುಭವಿಸುತ್ತಾರೆ. ಅದು ಮುಂದೆ ಚಟವಾಗಿ ಕಳ್ಳತನದ ಧಂದೆಯಾಗಿ ಬೆಳೆಯುವುದು ತೀರಾ ಅಪರೂಪ. ಗ್ರಾಮೀಣ ಪ್ರದೇಶದ ಮಕ್ಕಳಲ್ಲಿ ಹೆಚ್ಚುಕಡಿಮೆ ಎಲ್ಲರೂ ಇಂಥ ಪ್ರಿಯ ಸಾಹಸಕ್ಕೆ ಕೈಹಾಕಿದವರೇ. ಇದು ಕೇವಲ ತಿನ್ನುವ ಚಪಲದ ಆಸೆಯಿಂದ ಮೂಡಿದ ಕ್ರಿಯೆಯೆ ಹೊರತು ಮತ್ತಾವ ದುರಾಸೆಯಿಂದ ಅಲ್ಲ. ಅವರು ಬೆಳೆದು ದೊಡ್ಡವರಾದಂತೆ ಅವುಗಳ ಮಧುರ ನೆನಪುಗಳಲ್ಲಷ್ಟೇ ಮುದಗೊಳ್ಳುತ್ತಾರೆ.

ಇನ್ನು ಹೆಣ್ಣುಮಕ್ಕಳು ತೋಟತುಡಿಕೆಗಳಲ್ಲಿ ನುಗ್ಗಿ ಕಳ್ಳತನ ಮಾಡುವ ಸಾಹಸಕ್ಕೆ ಕೈಹಾಕುವುದು ತೀರಾ ದೂರದ ಮಾತು. ಬೇಲಿಯ ಹೊರಗೆ ಅಥವಾ ಕೈ ತೋಟದ ಗೋಡೆಯ ಹೊರಗೆ ಇಣುಕುತ್ತಿರುವ ಒಂದು ಗುಲಾಬಿ, ಒಂದು ದಾಸವಾಳ, ಒಂದು ಚೆಂಡುಹೂ ಅಥವಾ ರೆಂಬೆಯ ಹಸಿರೆಲೆಗಳ ಮಧ್ಯೆ ಕೈಬೀಸಿ ಮೋಹದಿಂದ ಸೆಳೆಯುವ ಒಂದು ಸಂಪಿಗೆ - ಅವರಲ್ಲಿ ಕಿತ್ತುಕೊಂಡು ಮುಡಿಗೇರಿಸಿಕೊಳ್ಳುವ ಬಯಕೆಯನ್ನು ಮೂಡಿಸಬಹುದು. ಈ ಬಯಕೆಯನ್ನು ಅದುಮಿಟ್ಟುಕೊಳ್ಳಲಾರದೆ ಅವನ್ನು ಕಿತ್ತುಕೊಂಡು ಹೆದರಿ ಓಡಿ, ಏದುಸಿರುಬಿಡುತ್ತಾ ಬಹುದೊಡ್ಡ ಸಾಹಸ ಮಾಡಿದವರಂತೆ ಆ ಹೂವನ್ನು ಪ್ರೀತಿ ತುಂಬಿದ ಕಣ್ಣುಗಳಿಂದ ಅನುಭವಿಸಿ, ಮುಡಿಗೆ ಮುಡಿದುಕೊಂಡು ತಾವೇ ಒಂದು ಹೂವಾದಂತೆ ಆನಂದಿಸುತ್ತಾರೆ. ಈ ಮಕ್ಕಳು ಪಡುವ ಆನಂದವನ್ನು ಕಂಡ ಎಂಥ ಕಲ್ಲುಮನಸ್ಸಿನ ಆ ಹೂವಿನ ಮಾಲೀಕ(?) ತಾನೇ ಕೋಪಗೊಂಡಾನು? ಆ ಮಕ್ಕಳನ್ನು ಹೂಗಳ್ಳರೆಂದು ಕರೆದಾನು? ನಿಜಕ್ಕೂ ಅವನೊಳಗೆ ಒಂದು ಮಗುವಿನ ತೊಟ್ಟಿಲು ತೂಗುತ್ತಿದ್ದಲ್ಲಿ, ತಾನು ಬೆಳೆದ ಹೂವು ಸಾರ್ಥಕಗೊಂಡಿತೆಂದು ಆನಂದಪಟ್ಟಾನು!

ಆದರೆ ನಗರಗಳಲ್ಲಿ ನಿಜಕ್ಕೂ ಹೂಗಳ್ಳರಿದ್ದಾರೆ! ಅವರು ದೈವಭಕ್ತರು; ಪ್ರತಿ ದಿನ ದೇವರ ಪೂಜೆಯನ್ನು ಮಾಡದೆ ತಮ್ಮ ಕರ್ಮಾದಿಗಳನ್ನು ಆರಂಭಿಸರು! ಅವರು ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿಸಿಕೊಂಡಿದ್ದು, ಮನೆಯ ಆವರಣದ ತುಂಬ ಸಿಮೆಂಟು ಕಾಂಕ್ರಿಟ್ಟು ನೆಲಹಾಸನ್ನು ಮಾಡಿಸಿ ಅತ್ಯಂತ ಸ್ವಚ್ಛವಾಗಿ ಇಟ್ಟುಕೊಂಡಿರುತ್ತಾರೆ. ಅಪ್ಪಿತಪ್ಪಿಯೂ ಹಸಿರು ಬೆಳೆಯದಂತೆ (ಪಾಚಿಯನ್ನೂ ಸಹ!) ನೋಡಿಕೊಳ್ಳುತ್ತಾರೆ. ಮನೆಯ ಸುತ್ತ ಮಣ್ಣಿನ ಜಾಗ

ಬಿಟ್ಟು, ಅಲ್ಲಿ ಹೂಗಿಡಗಳನ್ನೂ ಮರಗಿಡಗಳನ್ನೂ ಬೆಳೆಯುವವರು ಇವರ ದೃಷ್ಟಿಯಲ್ಲಿ ದಡ್ಡರು ಅಥವಾ 'ವೇಸ್ಟ್ ಬಾಡಿಗಳು!' ಆದರೆ ಇವರು ದೈವಭಕ್ತರು! ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ಮಾಡಿದ ಮೇಲೆ ದೇವರಿಗೆ ಹೂವಿನ ಅರ್ಚನೆ ಮಾಡಬೇಕು. ಅದಕ್ಕೆ ಹೂ ಬೇಕು. ಆದರೆ ತಾವು ಬೆಳೆಯುವುದಿಲ್ಲವಲ್ಲ! ಹೂವನ್ನು ರಾತ್ರಿಯೇ ಅಥವಾ ಸೂರ್ಯೋದಯಕ್ಕೆ ಮುಂಚೆಯೇ ಬರುವ ಹೂವಾಡಿಗನ ಬಳಿ ದುಡ್ಡು ಕೊಟ್ಟು ಕೊಂಡುಕೊಳ್ಳಬೇಕಲ್ಲ! ಅದಕ್ಕೆ ಹಣ ಬೇರೆ ಖರ್ಚಾಗುತ್ತದಲ್ಲ! ಜೊತೆಗೆ ಮತ್ತೊಂದು ಬಲವಾದ ಕಾರಣವೂ ಇದೆ. ಅದು ಈ ಹೂವಾಡಿಗ ಮಾರುವ ಹೂ ಆಗಲೇ ಹಳೆಯದಾಗಿರುತ್ತದೆ. ಆ ಹೂವುಗಳು ತಮ್ಮ ತಾಜಾತನ ಕಳೆದುಕೊಂಡಿರುತ್ತವೆ ಮತ್ತು ಅವರಿವರಿಂದ ಮುಟ್ಟಿಸಿಕೊಂಡು ಮೈಲಿಗೆಯಾಗಿರುತ್ತವೆ. ಅಂಥ ಹೂವುಗಳಿಂದ ದೇವರನ್ನು ಅರ್ಚಿಸಿದರೆ - ಅವನಿಗೆ ಪ್ರಿಯವಾಗುವುದೆ? ಅವನಿಗೆ ಏನಿದ್ದರೂ ಅತ್ಯಂತ ತಾಜಾ ಆಗಿರುವ, ಆಗತಾನೆ ಅರಳುತ್ತಿರುವ, ಇಬ್ಬನಿಯ ಹನಿಯಿಂದ ಶುದ್ಧಗೊಂಡಿರುವ ಹೂವುಗಳೇ ಬೇಕು! ಅದರಿಂದ ಅವನ ಶ್ರೀಮಂತ ಮಹಲುಗಳ ಭಕ್ತರು ಅಕ್ಕಪಕ್ಕದ ಮನೆಗಳ ಆವರಣದಲ್ಲಿ ಅಥವಾ ರಸ್ತೆಗಳ ಮನೆಗಳ ಆವರಣದಲ್ಲಿ ಸಸ್ಯಪ್ರಿಯರು ತಮ್ಮ ಸಂತೋಷಕ್ಕಾಗಿ ಬೆಳೆಸಿಕೊಂಡಿರುವ ಗಿಡಗಳು ಬಿಟ್ಟಿರುವ ತಾಜಾ ಹೂವುಗಳನ್ನು ಕದ್ದು ತಂದು ಪೂಜಿಸಬೇಕು!

ನಗರಗಳಲ್ಲಿ ಕೆಲವು ಮಂದಿಯಾದರೂ ಪರಿಸರ ಪ್ರಜ್ಞೆಯಿರುವವರಿದ್ದಾರೆ. ಅವರು ತಮ್ಮ ಮನೆಯನ್ನು ಚಿಕ್ಕದಾಗಿ ಕಟ್ಟಿಸಿಕೊಂಡು - ಆವಶ್ಯಕತೆಗೆ ತಕ್ಕಂತೆ - ಮನೆಯ ಸುತ್ತ ಗಿಡ ಬಳ್ಳಿಗಳನ್ನು ಬೆಳೆಸಿ ಸುಂದರವಾದ ಹಸಿರು ವಾತಾವರಣವನ್ನು ಮೂಡಿಸಿರುತ್ತಾರೆ. ಗಿಡಬಳ್ಳಿಗಳಲ್ಲಿ ಬಿಡುವ ಹೂವುಗಳು ಅಲ್ಲೇ ಮೊಗ್ಗಾಗಿ, ಅರಳಿ ಬಿರಿದು ನಳನಳಿಸುವುದನ್ನು ನೋಡಿ, ಸುಗಂಧವನ್ನು ಸೂಸುವ, ಮಗಮಗಿಸುವ ಪ್ರಕೃತಿಸಹಜತೆಯನ್ನು ನೋಡಿ ಅನುಭವಿಸಿ ಆನಂದಿಸುವ ಆಸೆ ಅವರದು. ಆದರೆ ಅವರು ಬೆಳಿಗ್ಗೆ ಎದ್ದು ಅವರ ಮನೆಯ ಆವರಣದಲ್ಲಿ ಅರಳಲಿರುವ ಹೂವಿನ ಭಾಗ್ಯ ಅನೇಕ ಸಾರಿ ಅವರಿಗೆ ಸಿಗುವುದೇ ಇಲ್ಲ. ಆ ಹೂವುಗಳು ಆಧುನಿಕ ಭಕ್ತ ಹೂಗಳ್ಳರಿಂದ ಮಾಯವಾಗಿರುತ್ತವೆ. ಈ ಹೂಗಳ್ಳರು ಯಾವ ಮುಜಗರವೂ ಇಲ್ಲದೆ, ತಮ್ಮ ಕೈಯಲ್ಲಿ ಬುಟ್ಟಿಯನ್ನು ಹಿಡಿದುಕೊಂಡು ಹೂ ಬೆಳೆದವರ ಮನೆಯ ಗೋಡೆ ಒಳಗಿನಿಂದ ಇಣುಕಿ ನಗುತ್ತಿರುವ ಬಸವನಪಾದ, ಕಣಿಗಲೆ, ಗುಲಾಬಿ, ದಾಸವಾಳ, ಮಲ್ಲಿಗೆ ಮೊದಲಾದವುಗಳನ್ನು ಕದ್ದು ಒಯ್ದಿರುತ್ತಾರೆ!

ಇಂಥ ಕದ್ದ ಹೂವುಗಳಿಂದ ಪೂಜಿಸಿಕೊಂಡ ದೇವರು ತೃಪ್ತನಾಗಿ ಅವರಿಗೆ ಒಲಿಯುತ್ತಾನೆಯೇ? ಇಂಥ ಭ್ರಮೆಯಿಂದ ಈ ಆಸ್ತಿಕ ಮಹಾಶಯರು ಎಂದು ಹೊರಗೆ ಬರುತ್ತಾರೆ? ನಿಜವಾದ ಭಕ್ತಿ ಅವರಿಗೆ ಎಂದು ಅರ್ಥವಾದೀತು? ಚರಿತ್ರೆ - ಪುರಾಣಗಳ ಧ್ವನಿ ಇವರಿಗೆ ಅರ್ಥವಾಗುವುದಾದರೂ ಎಂದು?

೧೯-೦೭-೨೦೧೨

# ಊಟ ನಿಮ್ಮಿಚ್ಛೆ......

'ಊಟ ನಿಮ್ಮಿಚ್ಛೆ, ನೋಟ ಪರರಿಚ್ಛೆ' ಎಂಬ ಪ್ರಸಿದ್ಧ ಗಾದೆಯು ವ್ಯಕ್ತಿ ತಾನು ತನಗಾಗಿ ಹಾಗೂ ಸಮಾಜದ ಪ್ರತಿಕ್ರಿಯೆಗೆ ಅನುಗುಣವಾಗಿ ಹೇಗೆ ಬದುಕಬೇಕು ಎಂಬುದನ್ನು ತಿಳಿಸುತ್ತದೆ. ಇಲ್ಲಿ 'ನೋಟ'ವೆಂಬುದು ವ್ಯಕ್ತಿಯ ನೋಟವಲ್ಲ; ಅದು ವ್ಯಕ್ತಿಯ ಬಗೆಗಿನ ಸಮಾಜದ ನೋಟ. ನಮ್ಮ ಅಭಿರುಚಿ, ಆಸಕ್ತಿ, ರೂಪಗಳು ಸಮಾಜದ ನೋಟದ ಹಿಂದಿರುವ ದೃಷ್ಟಿಕೋನದಿಂದ ಮಾಪನಗೊಳ್ಳುತ್ತವೆ. ಈ ಮಾಪನವು ಅನೇಕ ಬಾರಿ ನಿಜವಾದ ನಮ್ಮ ವ್ಯಕ್ತಿತ್ವದ ಅಳತೆಯಾಗದೆ ಇರಬಹುದು. ಆ ಮಾಪನ ನಮಗೆ ಇರಸುಮುರಸು ತರಬಹುದು. ಆದರೆ ನಾವೇನೂ ಮಾಡಲಾಗುವುದಿಲ್ಲ. ಏಕೆಂದರೆ 'ನೋಟ' ಅವರದು. ಅವರು ಬಯಸುವ ಹಾಗೆ, ನಿರೀಕ್ಷಿಸುವ ಹಾಗೆ ನಮ್ಮ 'ರೂಪ' ಅವರಿಗೆ ಕಾಣಬಹುದು. ಅವರ ನೋಟವನ್ನು ನಾವು ನಿಯಂತ್ರಿಸಲಾಗದು. ಇಲ್ಲಿ ಮತ್ತೂ ಒಂದು ಮನಶ್ಶಾಸ್ತ್ರೀಯ ಅಂಶವೂ ಇರುತ್ತದೆ : ನಮ್ಮ ಉಡುಗೆ ತೊಡುಗೆ, ಅಲಂಕಾರ, ನಡೆದಾಟದ ಶೈಲಿ ಮತ್ತು ದೈಹಿಕ ಭಾಷೆ - ಅನೇಕ ಸಂದರ್ಭಗಳಲ್ಲಿ ಅನ್ಯರ ಗಮನ - ನೋಟವನ್ನು ಮೆಚ್ಚಿಸುವ ಉದ್ದೇಶವನ್ನು ಹೊಂದಿರಬಹುದು. ಈ ಅಂಶವನ್ನು ಸಂಪೂರ್ಣ ಅಲ್ಲಗಳೆಯಲಾಗುವುದಿಲ್ಲ.

ಊಟದ ವಿಷಯವಂತೂ ಅತ್ಯಂತ ವ್ಯಕ್ತಿಗತವಾದುದು. ಅದು ಪ್ರದೇಶ, ಜನಾಂಗ (ಜಾತಿ), ವಾತಾವರಣದ ಅನುಗುಣವಾಗಿ ತನ್ನ ಆವಶ್ಯಕತೆ ಮತ್ತು ಅಭಿರುಚಿಯನ್ನು ರೂಪಿಸಿಕೊಂಡಿರುತ್ತದೆ. ಕೇವಲ ಸಸ್ಯಾಹಾರಿಗಳಿರುವಂತೆಯೇ ಸಂಪೂರ್ಣ ಮಾಂಸಾಹಾರಿಗಳೂ ಇದ್ದಾರೆ. ಒಬ್ಬರ ಆಹಾರ ಇನ್ನೊಬ್ಬರಿಗೆ ಅಪಥ್ಯವಾಗಬಹುದು, ಅಸಹ್ಯ ತರಬಹುದು. ಈ 'ಅಸಹ್ಯ'ವೆಂಬ ಭಾವನೆ ಆ ವ್ಯಕ್ತಿಗೆ ಅವನ ಧರ್ಮ ಮತ್ತು ನಂಬಿಕೆಗಳು ರೂಪಿಸಿದ ಪರಿಕ್ರಮ. ಅದರ ಹಿಂದೆ ವೈಚಾರಿಕ - ವೈಜ್ಞಾನಿಕ ಮನಸ್ಥಿತಿ ಇರುವುದಿಲ್ಲ. ಈ ಧಾರ್ಮಿಕ ನಂಬಿಕೆ, ಆಚಾರಗಳಿಂದಲೇ ಮತ್ತೊಬ್ಬರ ಆಹಾರವನ್ನು ಅಸಹ್ಯದಿಂದ ಕಾಣುವ ಮತ್ತು ಆಡಿಕೊಳ್ಳುವ ಚಾಳಿ ಬೆಳೆಯುತ್ತದೆ. 'ಅವನು ನಾಯಿ ತಿಂತಾನೆ...... ಹಂದಿ ತಿಂತಾನೆ....... ದನ ತಿಂತಾನೆ....' - ಇಂಥ ಮಾತುಗಳು ಭಾರತೀಯ ಧಾರ್ಮಿಕ ರೂಪಿತ ಹಿನ್ನೆಲೆಯಲ್ಲಿ ಬೈಗುಳಗಳಾಗಿ ಕೆಲಸ ಮಾಡುತ್ತಿವೆ. ಈ ಮನೋನೆಲೆ ತಪ್ಪು, ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಜನತೆ ತಮ್ಮ ಬದುಕುವಿಕೆಗಾಗಿ ತಿನ್ನದ ಪದಾರ್ಥಗಳಿಲ್ಲ. ಅನಿವಾರ್ಯ ಸಂದರ್ಭಗಳಲ್ಲಿ ಸತ್ತ ನರದೇಹಗಳನ್ನು ತಿಂದು ಬದುಕಿದ ಉದಾಹರಣೆಗಳು ಚರಿತ್ರೆಯಲ್ಲಿ ಸಿಗುತ್ತವೆ. ಅಂದಮೇಲೆ ಇತರೆ ಸಸ್ಯ - ಪ್ರಾಣಿಗಳನ್ನು ತಿಂದು ಜೀವಿಸುತ್ತಿದ್ದಾರೆಂಬ ಸತ್ಯವನ್ನು ನಾವು ಗೌರವದಿಂದ ಮಾನ್ಯ ಮಾಡಬೇಕು. ಸೂರ್ಯ ಮೂಡದ ದೇಶಗಳ ಆಹಾರ

ಪದ್ಧತಿ ಅನಿವಾರ್ಯ ಆವಶ್ಯಕತೆಯಿಂದ ಮೂಡಿದ್ದಾಗಿರುವುದರಿಂದ ಅವರ ಆಹಾರ ಕ್ರಮವನ್ನು ಗೌರವಿಸುವುದು ಮಾನವತೆ ಎನ್ನಿಸುತ್ತದೆ. ಆದ್ದರಿಂದಲೇ ಊಟವನ್ನು 'ಅದನ್ನು ಮಾಡುವವರಿಚ್ಛೆ' ಎಂದು ಅನುಭವೋಕ್ತಿ ಹೇಳುತ್ತಿರುವುದು.

ಇದರ ಜೊತೆಗೆ ಆಹಾರವೆಂಬುದು ಒಂದು ಸಂಸ್ಕೃತಿಯ ರೂಪ ವಿಶೇಷ. ಆ ಸಂಸ್ಕೃತಿಯ ಹವಾಮಾನ ಮತ್ತು ಸೌಲಭ್ಯಗಳ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಿಕೊಂಡ ಪದ್ಧತಿ. ಆ ಪದ್ಧತಿ ತಲೆತಲಾಂತರದಿಂದ ರೂಪಿತಗೊಂಡು ವಂಶವಾಹಿನಿಯಲ್ಲಿ ಹೊಂದಿಕೊಂಡಿರುತ್ತದೆ. ಅವನ ದೇಹದಾರ್ಢ್ಯ, ಆರೋಗ್ಯ, ಆಯಸ್ಸುಗಳನ್ನು ಅದು ನಿರ್ಧರಿಸುತ್ತದೆ ಮತ್ತು ಕಾಪಾಡುತ್ತಿರುತ್ತದೆ. ಇದು ಪ್ರಕೃತಿ ಅವನ ಸಂಕುಲವನ್ನು ಮುಂದುವರಿಸಲು, ಜೀವಧಾತುಗಳನ್ನು ತುಂಬಲು ಸಹ ಸಹಕರಿಸುವ ವ್ಯವಸ್ಥೆ. ಈ ಆಹಾರ ಪದ್ಧತಿಯ ಸೇವನೆಯಲ್ಲಿ ಹೆಚ್ಚುಕಡಿಮೆಯಾದರೆ - ಪದ್ಧತಿಗಳು ಏರುಪೇರಾದರೆ ವ್ಯಕ್ತಿಯ ಆರೋಗ್ಯದ ಮೇಲೆ ಅಡ್ಡ ಪರಿಣಾಮಗಳಾಗುತ್ತವೆ. ಏಕೆಂದರೆ ಅವನ ವಂಶವಾಹಿಗಳು ಮತ್ತು ಹವಾಮಾನ ಅವನ್ನು ಒಪ್ಪಿಕೊಳ್ಳಲು ಸಿದ್ಧವಾಗಿರುವುದಿಲ್ಲ.

ಊಟ ತನ್ನಿಚ್ಛೆ ಎಂಬ ಮಾತು ಸಂಸ್ಕೃತಿ ಮತ್ತು ಅಭಿರುಚಿಗೆ ಸಂಬಂಧಿಸಿದ್ದು ಎಂಬ ಮಾತು ನಿಜವಾದರೂ, ನಮ್ಮ ಮನಸ್ಸು ಬಯಸಿದ್ದನ್ನೆಲ್ಲ ಅನೇಕ ವೇಳೆ ತಿನ್ನಲು ಬಾರದು. ಅದರಿಂದ ದೇಹದ ಆರೋಗ್ಯ ಏರುಪೇರಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಅವನು ಸಮುದಾಯ ಜೀವಿಯಾದರೂ ದೇಹಪ್ರಕೃತಿಯಲ್ಲಿ ಮತ್ತೊಬ್ಬನಿಗಿಂತ ಭಿನ್ನನಾಗಿರುತ್ತಾನೆ. ಒಬ್ಬನಿಗೆ ಸವಿಯಾದುದು ಮತ್ತೊಬ್ಬನಿಗೆ ವಿಷವಾಗಲೂಬಹುದು. ತನ್ನ ದೇಹಕ್ಕೆ ಒಗ್ಗುವಂಥ ಆಹಾರವನ್ನು ಅನುಭವದ ಆಧಾರದ ಮೇಲೆ ಗುರುತಿಸಿಕೊಳ್ಳಬೇಕು. ತನ್ನ ದೇಹ ಒಗ್ಗಿಕೊಂಡಿರುವ ಅರಗಿಸಿಕೊಳ್ಳುವ ಆಹಾರವನ್ನು ಪ್ರೀತಿಸಿ ಸವಿಯಬೇಕು. ಆಗ ದೇಹ ಮನಸ್ಸನ್ನು ಮುದವಾಗಿಡಲು ಸಹಕರಿಸುತ್ತದೆ.

ಆಹಾರ ಸೇವನೆಗೂ ವ್ಯಕ್ತಿಯ ವಯಸ್ಸಿಗೂ ನಿಕಟವಾದ ಸಂಬಂಧವಿದೆ. ವ್ಯಕ್ತಿ, ಬಾಲಕನಾಗಿದ್ದಾಗ, ವಯಸ್ಕನಾಗಿದ್ದಾಗ ಅವನ ಬೆಳವಣಿಗೆಗೆ, ದುಡಿಮೆಗೆ ತಕ್ಕ ಆಹಾರ ಬೇಕು. ಅವನ ದೇಹದ ಶಕ್ತಿ ಉತ್ಪಾದನೆಗೆ ತಕ್ಕ ಪೌಷ್ಟಿಕ ಆಹಾರ ಬೇಕು. ಆಗ ಅಂಥ ಆಹಾರವನ್ನು ತಿಂದರೂ ಅದು ಜೀರ್ಣವಾಗುತ್ತದೆ. ಆದರೆ ವ್ಯಕ್ತಿಗೆ ವಯಸ್ಸಾದಂತೆ ಹೆಚ್ಚು ಆಹಾರದ ಆವಶ್ಯಕತೆ ಇರುವುದಿಲ್ಲ. ಅವನ ಜೀವಕೋಶಗಳು ದಿನೇ ದಿನೇ ಶಿಥಿಲಗೊಳ್ಳುತ್ತಿರುತ್ತವೆ. ಅವನ ಜೀರ್ಣಾಂಗಗಳು ಬಳಲಿರುತ್ತವೆ. ಮನಸ್ಸಿನ ಉತ್ಸಾಹಕ್ಕೆ ತಕ್ಕಂತೆ ದೇಹ ಸ್ಪಂದಿಸುವುದಿಲ್ಲ. ಆಗ ಅವನು ತನ್ನ ನಾಲಗೆಯ ಚಪಲತೆಯ ಮೇಲೆ ಹಿಡಿತ ಸಾಧಿಸಬೇಕು.

ಆದರೆ ವ್ಯಕ್ತಿಗೆ ಇದು ಮಿಲಿಯನ್ ಡಾಲರ್ ಪ್ರಶ್ನೆ! ಸಮಸ್ಯೆ!

೦೨-೦೯-೨೦೧೨

# ಅಂಬಲಿಯ ನೇಮ

ಬಸವಣ್ಣ ಭಕ್ತನೆಂದೇ ಖ್ಯಾತನಾದವನು. ಆದರೆ ಆತನ ಭಕ್ತಿ ಆಡಂಬರ ರಹಿತವಾದುದು. ಆದುದರಿಂದಲೇ 'ಭಕ್ತಿಯೆಂಬುದ ಮಾಡಲು ಬಾರದು' ಎಂದು ಅದರ ನಿಜವಾದ ಸ್ವರೂಪವನ್ನು ವ್ಯಾಖ್ಯಾನಿಸುತ್ತಾನೆ. ಭಕ್ತಿಯೆಂಬುದು ದೇವರೊಡನೆ ನಡೆಸುವ ತೀರಾ ಖಾಸಗಿಯಾದ ಅಂತರಂಗದ ಮಾನಸಿಕ ವ್ಯವಹಾರ; ಶಬ್ದಕ್ಕೆ ನಾಚುವಂಥದು, ತನ್ನ ಸತಿಯೊಡನೆ ನಡೆಸುವ ಅತ್ಯಂತ ಪ್ರಿಯವಾದ ಏಕಾಂತ ರತಿ ಸುಖದಂಥ ಕ್ರಿಯೆ. ಈ ಭಕ್ತಿಯ ಸ್ವರೂಪವನ್ನು ಬಹುಪಾಲು ಶರಣರು ಅರಿತಿದ್ದರು. ಅದೊಂದು ಅಂತರಂಗದ ಸಂಬಂಧವೆಂದು ಬಗೆದ ಶರಣರು ದೇವರೊಡನೆ ಇರುವ ಭಕ್ತಿಯನ್ನು ಗುಪ್ತವಾಗಿಟ್ಟು ಕೊಂಡಿರುತ್ತಿದ್ದರು. ಅದನ್ನು 'ಗುಪ್ತ ಭಕ್ತಿ'ಯೆಂದೇ ಗುರುತಿಸಲಾಗಿದೆ. ಅದು ತೋರಿಕೆಯಾಗಬಾರದು; ಪ್ರಕಟವಾಗಬಾರದು; ಪ್ರಚಾರವೂ ಆಗಬಾರದು. ಒಂದು ವೇಳೆ ಅದು ಪ್ರಕಟಗೊಂಡಲ್ಲಿ ಆಡಂಬರವಾಯಿತಲ್ಲಾ ಎಂದು ಪರಿತಪಿಸಿ ಆತ್ಮಹತ್ಯೆಗೆ ಎರಗುವ ಶರಣರ ಉದಾಹರಣೆಗಳೂ ಇವೆ. ಅನೇಕ ಸಂದರ್ಭಗಳಲ್ಲಿ ಶಿವನೇ ತನ್ನ ಭಕ್ತನ ಭಕ್ತಿಯ ಮಹಿಮೆಯನ್ನು ಜಗತ್ತಿಗೆ ಸಾರಲು ಪ್ರಕಟಿಸುತ್ತಾನೆ.

ದೇವರ ಆರಾಧನೆಗೆ ಸ್ಥಾಪಿತ ಸಮಾಜ ನಿಯಮ ರೀತಿ ರಿವಾಜುಗಳನ್ನು ರೂಪಿಸಿಕೊಂಡು ಬಿಡುತ್ತದೆ. ಈ ಬಗೆಯ ರೀತಿ ರಿವಾಜುಗಳು ರೂಪಿತಗೊಂಡಾಗಲೇ ಅಪಾಯಗಳು- ಸಂಕಷ್ಟಗಳು ಜನ್ಮತಾಳುತ್ತವೆ. ಇಂಥ ಪೂಜೆಗೆ ಇಂಥ ನಿಯಮಗಳೇ ಇರಬೇಕು; ಇಂಥ ದೇವರಿಗೆ ಇಂಥ ರಿವಾಜುಗಳೇ ಇರಬೇಕು. ಪೂಜೆಗಳಲ್ಲೂ ಅನೇಕ ವಿಧ. ಒಂದೇ ದೇವರಿಗೆ ಬಗೆಬಗೆಯ ಅಲಂಕಾರ, ಅರ್ಚನೆಗಳು; ಅದಕ್ಕೆ ತಕ್ಕನಾದ ಮಂತ್ರವಿಧಿಗಳು ಭಿನ್ನ. ಅದಕ್ಕೆ ಅನುಗುಣವಾಗಿ, ಭಕ್ತರ ಅಂತಸ್ತಿಗನುಗುಣವಾಗಿ ಪೂಜಾ ಖರ್ಚುಗಳು ಕೂಡ ಭಿನ್ನವಾಗುತ್ತವೆ. ದೇವರು ಕೂಡ ಭಕ್ತರ ಹಾಗೆ ಶ್ರೀಮಂತ ಅಥವಾ ಬಡವ ಎನ್ನಿಸಿಕೊಳ್ಳುತ್ತಾನೆ! ಅರ್ಚನೆಯ ಸ್ವರೂಪದ ಆಧಾರದ ಮೇಲೆ ಅವನೂ/ಳೂ ಕೂಡ ಸಸ್ಯಾಹಾರಿಯೋ ಮಾಂಸಹಾರಿಯೋ ಆಗಿ ರೂಪಿತವಾಗುತ್ತಾನೆ./ಳೆ. ಪೂಜೆಯ ನೇಮ ನಿಯಮಗಳು ಬಿಗಿಯಾಗಿ ಭಕ್ತರನ್ನೇ ಸುತ್ತಿಕೊಂಡು ಹಿಂಸಾಭರಣ ಆಗುತ್ತವೆ.

ಶರಣರ ಕಾಲದಲ್ಲೂ ಈ ಪೂಜಾ ನೇಮಗಳಿಗೇನು ಕೊರತೆಯಿರಲಿಲ್ಲ; ಆಡಂಬರದ ಮೆರವಣಿಗೆ ಇದ್ದೇ ಇತ್ತು. ಢಾಂಬಿಕತೆ ಧಾರ್ಮಿಕ ಆಚರಣೆಗಳಲ್ಲಿ ಮನೆ ಮಾಡಿತ್ತು. ಶರಣರು ಇಂಥ ಅರ್ಥಹೀನ ನೇಮಾದಿಗಳನ್ನು ವಿರೋಧಿಸಿದ್ದಾರೆ. ಸರಳ, ಶುದ್ಧ, ಆತ್ಮದ ಮೂಲಕ ಆಚರಿಸುವ ನೇಮದ ಬಗ್ಗೆ ಬಸವಣ್ಣನು ಹೀಗೆ ಅರುಹುತ್ತಾನೆ:

ಹಾಲ ನೇಮ, ಹಾಲ ಕೆನೆಯ ನೇಮ,
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ,
ಬೆಣ್ಣೆಯ ನೇಮ, ಬೆಲ್ಲದ ನೇಮ!
ಅಂಬಲಿಯ ನೇಮದವರಾರನೂ ಕಾಣೆ-
ಕೂಡಲ ಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ.

ಆಡಂಬರದ ತೋರಿಕೆಯ ಪೂಜೆ ಶರಣರಿಗೂ ಹೊರತಾದುದಲ್ಲವೆಂಬ ಸ್ವಸಮಾಜ ವಿಮರ್ಶೆ ಬಸವಣ್ಣನಲ್ಲಿತ್ತು ಎಂಬುದನ್ನು 'ಕೂಡಲ ಸಂಗನ ಶರಣರಲ್ಲಿ ಅಂಬಲಿಯ ನೇಮದವರಾರನೂ ಕಾಣೆ' ಎಂಬ ಮಾತಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. ಬಸವಣ್ಣ ಸಮಾಜದ ಎಲ್ಲ ಮಗ್ಗುಲುಗಳನ್ನು ಸೂಕ್ಷ್ಮವಾಗಿ ಗಮನಿಸಿದವನು; ಅತ್ಯಂತ ಸೂಕ್ಷ್ಮ ಮತಿಯೂ, ನಿರಾಡಂಬರ ಪ್ರಿಯನೂ, ನಿಜಭಕ್ತಿ ಗುಣಗ್ರಾಹಿಯೂ ಆಗಿದ್ದವನು. ವಿವಿಧ ನೇಮಗಳಲ್ಲಿ ಶಿವನನ್ನು ಅರ್ಚಿಸುವ- ತನ್ಮೂಲಕ ಸ್ವಪ್ರತಿಷ್ಠೆಯನ್ನು ತೋರಿಸುವ ಜನರ ನಡುವೆ ಸಾಮಾನ್ಯತೆಯನ್ನು ಗುರುತಿಸುವ ಪ್ರಯತ್ನವನ್ನು ಬಸವಣ್ಣ ಮಾಡುತ್ತಾನೆ. ಅದು ಅಂಬಲಿಯ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. 'ಅಂಬಲಿ' ಸಾಮಾನ್ಯತೆಯ- ಸರಳತೆಯ, ತಳಪದರದ ಸಂಕೇತ. ಅಷ್ಟೇ ಅಲ್ಲ, ಈ ನೆಲದ ಸತ್ತ್ವದ ಸಂಕೇತ. ಬಸವಾದಿ ಪ್ರಮಥರ ಪೂರ್ವದಿಂದ ಇಂದಿನವರೆಗೂ ನಮ್ಮ 'ಸಾಮಾನ್ಯತೆ' ಕುಡಿದು ಬದುಕುತ್ತಿರುವುದು ಈ ಅಂಬಲಿಯನ್ನೇ! ಅಂಬಲಿ ಈ ನೆಲದ ಆಹಾರ. ತನ್ನ ನಿಜಭಕ್ತರು ಸೇವಿಸಿ ಬದುಕುತ್ತಿರುವ ಅಂಬಲಿಯನ್ನು ನೇಮದಲ್ಲಿ ಸ್ವೀಕರಿಸಲು ಶಿವನಿಗೂ ಆನಂದವಾಗುತ್ತದೆ ಎಂಬುದು ಬಸವಣ್ಣನ ಇಂಗಿತ.

ಬಸವಣ್ಣನ ದೃಷ್ಟಿಯಲ್ಲಿ ಬದುಕಿನ ಶುದ್ಧ ನಡೆಯೇ ನಿಜವಾದ ನೇಮ. ಅದನ್ನು ಅವನು ಹೀಗೆ ಗುರುತಿಸುತ್ತಾನೆ: 'ಬಂದುದ ಕೈಕೊಳ್ಳಬಲ್ಲಡೆ ನೇಮ! ಇದ್ದುದ ವಂಚನೆಯ ಮಾಡದಿದ್ದಡೆ ನೇಮ| ನಡೆದು ತಪ್ಪದಿದ್ದಡೆ ಅದು ನೇಮ| ನುಡಿದು ಹುಸಿಯದಿದ್ದಡೆ ಅದು ಮುನ್ನವೆ ನೇಮ|' ಇದಕ್ಕಿಂತ ಸರಳವಾಗಿ ಬದುಕಬೇಕಾದ ಬಗೆಯನ್ನು ಹೇಳಲು ಸಾಧ್ಯವಿಲ್ಲ. ಇಂದು ನಮ್ಮ ಧಾರ್ಮಿಕ ಗುರುಗಳ ಭೋಗಜೀವನ, ಅವರ ಐಷಾರಾಮಿ ಕಾರುಗಳು- ಹೆಲಿಕಾಪ್ಟರ್‌ಗಳು; ಅರಮನೆಗಳನ್ನು ನಾಚಿಸುವಂಥ ಹವಾ ನಿಯಂತ್ರಿತ ಆಶ್ರಮ (ಮಹಲು)ಗಳು; ದೇಶವಿದೇಶಗಳ ಲೋಕ ಸಂಚಾರ ಹಾಗೂ ಅವರು ಅದ್ದೂರಿಯಾಗಿ ನಡೆಸುವ ಯಜ್ಞಯಾಗ ಪೂಜೆ ಪುನಸ್ಕಾರಗಳನ್ನು ಅವಲೋಕಿಸಿದರೆ ನಮ್ಮ ಬದುಕು ಸಾಗುತ್ತಿರುವ ಅಧಃಪತನದ ದಿಕ್ಕನ್ನು ಸೂಚಿಸುತ್ತದೆ. ಅಧ್ಯಾತ್ಮ, ಧ್ಯಾನ ಮುಂತಾದ ದೊಡ್ಡ ಶಬ್ದಗಳ ಮರೆಯಲ್ಲಿ ಶ್ರೀಮಂತ ಭಕ್ತರ ಅಡ್ಡದಾರಿಗಳಿಗೆ ಪ್ರೋತ್ಸಾಹ ನೀಡುತ್ತಿರುವ ಧಾರ್ಮಿಕ ಕ್ಷೇತ್ರಕ್ಕೆ ಅಗತ್ಯವಾಗಿ ಕಾಯಕಲ್ಪ ಬೇಕಾಗಿದೆ.

ಇಂಥ ಇಂದಿನ ಕಾಲಘಟ್ಟದಲ್ಲಿ ಉಸಿರಾಡುತ್ತಿರುವ ನಮಗೆ ಮಾದಾರ ಚೆನ್ನಯ್ಯನ ಅಂಬಲಿಯ ನೇಮ ಆದರ್ಶ ನಡೆಯಾಗಬೇಕಾಗಿದೆ.

೧೬-೦೯-೨೦೧೨

# ಮಾನಿಸನಿಲ್ಲದೆ ನೀನೀಶನೆಂತಾದೆ?

ಇದು ದೇವಮಾನವರ ಕಾಲ. ಕ್ರಿಸ್ತ, ಮಹಮದರು ತಮ್ಮನ್ನೆಂದೂ 'ದೇವ'ರೆಂದು ಹೇಳಿಕೊಳ್ಳಲಿಲ್ಲ. ದೇವದೂತರೆಂದು ಹೇಳಿಕೊಳ್ಳುವ ಸೌಜನ್ಯ ತೋರಿದರು. ತಮ್ಮ ಅರಿವಿನ ಮಿತಿಯೊಳಗೆ ಅವರು ಬದುಕಿದ್ದ ಕಾಲಘಟ್ಟದಲ್ಲಿ ಮಾನವತೆಯ ಪರವಾಗಿ ಹೋರಾಡಿದರು. ಈ ಹೋರಾಟದ ಹಾದಿಯಲ್ಲಿ ಅವರು ಅನುಭವಿಸಿದ ಪ್ರತಿರೋಧ ಅಪಾರ. ಅವರು ತಮ್ಮ ಜೀವಿತದ ಅವಧಿಯಲ್ಲಿ ಒಂದು ನೆಲೆ ನಿಂತವರಲ್ಲ; ಒಂದು ಸುಖ ಕಂಡವರಲ್ಲ. ಕ್ರಿಸ್ತನ ಅಂತ್ಯವಂತೂ ಕರುಣಾಮಯವಾದುದು; ಹಿಂಸಾಪೂರಿತವಾದುದು. ಅವರು ಮನುಷ್ಯರಾಗಿ ಹುಟ್ಟಿ, ಮನುಷ್ಯರಾಗಿ ಬೆಳೆದು, ಸಮಾನತೆಯ ಸಾಧನೆಗಾಗಿ ಮಾನವ ಪರವಾಗಿ ಚಿಂತಿಸಿದರು. ಅದರಲ್ಲೇ ತಮ್ಮ ಜೀವನದ ಗುರಿಯನ್ನು ಗ್ರಹಿಸಿದ್ದರು. ಬುದ್ಧನು ಶ್ರೀಮಂತ ರಾಜನಾಗಿ ಜನಿಸಿ, ಶ್ರೀಮಂತ ಬದುಕನ್ನು ನಿರಾಕರಿಸುತ್ತಾ, ಬದುಕಿನ ನಿಜವಾದ ರಹಸ್ಯವನ್ನು ಶೋಧಿಸಲೋಸುಗ ಪ್ರಜ್ಞಾಪೂರ್ವಕವಾಗಿ ಕಷ್ಟಪರಂಪರೆಗಳನ್ನು ಮೈಮೇಲೆಳೆದುಕೊಂಡವನು. ಈ ಕಾರಣದಿಂದಾಗಿ ಯುಗಗಳು ಕಳೆದರೂ ಇವರು ಮಹಾ ಮಾನವರೆಂದು ಕರೆಸಿಕೊಂಡು, ಜಗತ್ತಿನಾದ್ಯಂತ ಕೋಟ್ಯಂತರ ಅನುಯಾಯಿಗಳನ್ನು ಇಂದಿಗೂ ಹೊಂದಿದ್ದಾರೆ. ಕಾರಣ: ಅವರು ದೇವರು ಎಂಬ ಅಮೂರ್ತ ಕಲ್ಪನೆಯನ್ನು ಶಕ್ತಿಯೆಂದು ಪರಿಭಾವಿಸಿ ಅದರ ಹುಡುಕಾಟದ ಮಾರ್ಗದಲ್ಲಿ ನಡೆದರು. ಅವರ ನಡೆಯಲ್ಲಿ 'ಏನೋ ಇರಬೇಕು' ಎಂದು ಅವರ ಅನುಯಾಯಿಗಳು ಇಂದಿಗೂ ನಂಬಿ ಅವರು ನಡೆದ ದಾರಿಯಲ್ಲಿ ತಾವೂ ಪರಿಕ್ರಮಿಸಲು ಯತ್ನಿಸುತ್ತಿದ್ದಾರೆ.

ಆದರೆ ತಾವೇ ದೇವರೆಂದು ಕರೆದುಕೊಳ್ಳುವ ಸ್ವಯಂ ಘೋಷಿಸಿಕೊಳ್ಳುವ ಆಧುನಿಕ ದೇವಮಾನವರು ಇಂದು ಎಲ್ಲೆಡೆ ಕಾಣಬರುತ್ತಿದ್ದಾರೆ. ಇವರು ಭಕ್ತಿಯೆಂಬ ಅಫೀಮನ್ನು (ಅಥವಾ ನಿಜವಾದ ನಾರ್ಕೋಟಿಕ್‌ಗಳನ್ನು) ದುರ್ಬಲ ಹೃದಯಿಗಳಿಗೆ, ವೈಚಾರಿಕ ಮನೋಧರ್ಮವಿಲ್ಲದ ಮೂಢರಿಗೆ ತಿನ್ನಿಸಿ ದುಡ್ಡು ಮಾಡುವ ಹೈಟೆಕ್ ಧಂದೆಯಲ್ಲಿ ತೊಡಗಿದ್ದಾರೆ. ಪ್ರಕೃತಿಯ ನಡುವೆ, ಹೊಲಗದ್ದೆಗಳಲ್ಲಿ ದುಡಿಯುವ ಶ್ರಮಜೀವಿಗಳಾಗಲೀ ಅಥವಾ ಕಾರ್ಖಾನೆಗಳಲ್ಲಿ ಕೈ ಮೈ ಮಸಿ ಮಾಡಿಕೊಂಡು ಬೆವರು ಸುರಿಸುವ ದೇಶ ಕಟ್ಟುವ ಪ್ರಜೆಗಳು ಇಂಥ ದೇವ ಮಾನವರ ಭಕ್ತರಲ್ಲವೆಂಬುದು ಬಹುಮುಖ್ಯ ಸಂಗತಿ. ಆ ಭಕ್ತರಲ್ಲಿ ಬಹುಪಾಲು ಪದವಿ ಪಡೆದ ಶ್ರೀಮಂತ ಅಕ್ಷರಸ್ಥರೇ! ಅವರು ಪಡೆದ ಪದವಿಗಳು ಅವರ ಅರಿವನ್ನು ವಿಕಾಸಗೊಳಿಸಿ ನಿಜವಾದ ಆತ್ಮದ ಎಚ್ಚರವನ್ನು ಮೂಡಿಸಿಲ್ಲವೆಂಬುದು ಅಷ್ಟೇ ಸತ್ಯ. ಜೊತೆಗೆ, ನಮ್ಮ ಶಿಕ್ಷಣ ವ್ಯವಸ್ಥೆ- ನಮ್ಮ ಪಠ್ಯಕ್ರಮಗಳು- ಎಂಥ ಅವೈಜ್ಞಾನಿಕ, ಅವೈಚಾರಿಕ ಸತ್ವವನ್ನು ಹೊಂದಿವೆ ಎಂಬುದು ಇದರಿಂದ

ಅರ್ಥವಾಗುತ್ತದೆ.

ಕ್ರಿಸ್ತ, ಮಹಮದರು ತಾವು ದೇವದೂತರೆಂದರು. ಬುದ್ಧನು ದೇವರ ಅಸ್ತಿತ್ವದ ಬಗ್ಗೆಯೇ ಅನುಮಾನ ತಳೆದ; ತನಗೆ ದೇವರು, ಸ್ವರ್ಗ-ನರಕಗಳ ಬಗ್ಗೆ ಗೊತ್ತಿಲ್ಲವೆಂದು ಸತ್ಯ ನುಡಿದ. ಇಲ್ಲೆಲ್ಲ ಒಂದು ಸತ್ಯ ಸ್ಪಷ್ಟವಾಗಿ ಗೋಚರಿಸುತ್ತದೆ: ಒಂದು ಅತೀತ ಶಕ್ತಿ ಇರಬಹುದೆಂದು ನಂಬಿ ಅದರ ಶೋಧಕ್ಕೆ ಹೊರಟವರು ಕೆಲವರಾದರೆ, ಅಂಥ ಅತೀತ ಶಕ್ತಿಯೆಂಬುದು ಇಲ್ಲ, ಅದು ನಮ್ಮೊಳಗೆ ಆವಿರ್ಭವಿಸಿಕೊಳ್ಳಬಹುದಾದ ಮಾನವ ಸಂಕಲ್ಪ ಶಕ್ತಿಯೆಂದು ಬಗೆದವರು ಕೆಲವರು. ಈ ಇಬ್ಬಗೆಯ ಜಿಜ್ಞಾಸೆ- ಸಂಘರ್ಷಗಳಲ್ಲಿ ಜಗತ್ತಿನ ಧರ್ಮಶಾಸ್ತ್ರಗಳು- ತತ್ವಶಾಸ್ತ್ರಗಳು ಬೆಳೆದಿವೆ. ದೇವರಿರಬಹುದೆಂದು ಬಗೆದು ಆ ನಂಬಿಕೆಗೆ ಒಂದು ತತ್ವ ಆಕಾರ ಕೊಟ್ಟು ಸೃಷ್ಟಿ ಮಾಡಿದವರನ್ನು- ಆ ಬಗೆಯ ಸೃಷ್ಟಿಯೇ ಅವೈಚಾರಿಕ ಮೌಢ್ಯದ ಫಲವೆಂದು ಕರೆದವರನ್ನು ನಾಸ್ತಿಕರೆಂದು ಹೆಸರಿಸಿ ಸಮಷ್ಟಿಯಿಂದ ದೂರವಿಡಲಾಯಿತು. ನಾಸ್ತಿಕ ಎಂದು ಕರೆದದ್ದು ಅಷ್ಟೇ ಅಲ್ಲ. ಅವರನ್ನು ಸಮಾಜದ ಸ್ವಾಸ್ಥ್ಯವನ್ನು ಹಾಳು ಮಾಡುವ ಧರ್ಮದ್ರೋಹಿಗಳೆಂದು ಜರಿಯಲಾಯಿತು.

ಆದರೆ ಒಂದಂತೂ ಸತ್ಯ. ದೇವರನ್ನು ಸೃಷ್ಟಿ ಮಾಡಿದವನು ಮನುಷ್ಯ! ಈ ಸತ್ಯ ಆಸ್ತಿಕ- ನಾಸ್ತಿಕರಿಬ್ಬರೂ ಒಪ್ಪುವ ಸಂಗತಿ. ಅದರಲ್ಲೂ ಬದುಕನ್ನು ತಮ್ಮ ಅನುಭವದಿಂದ ಶೋಧಿಸಿಕೊಂಡ ಸಂತ ಕವಿಗಳು ಈ ಅಂಶವನ್ನು ಸ್ಪಷ್ಟವಾಗಿ ಕಂಡರಿಸಿದ್ದಾರೆ. ನಮ್ಮ ಸರ್ವಜ್ಞನ ಈ ವಚನವನ್ನು ಗಮನಿಸಿ:

> **ಮಾನಿಸನಿಲ್ಲದೆ ನೀನೀಶನೆಂತಾದೆ**
> **ನೀನೀಶನೀಶನೆನಬೇಡ! ಲೋಕಕ್ಕೆ**
> **ಮಾನಿಸನೀಶ ಸರ್ವಜ್ಞ**

ಸರ್ವಜ್ಞನು ಕೂಡ ಆಸ್ತಿಕ ಮಹಾಶಯನೆ. ಆದರೆ ಅವನ ವಿವೇಚನಾ ಪ್ರಜ್ಞೆ ವಿವೇಕದಿಂದ ಕೂಡಿರುವಂಥದು. ಅವನಿಗೆ ದೇವರು 'ಮಾನಿಸ'ನಿಗಿಂತ ದೊಡ್ಡವನಲ್ಲ ಎಂದು ಗೊತ್ತು. ಆದರೆ 'ಮಾನಿಸ'ನಿದ್ದರೆ ಮಾತ್ರ ದೇವರು, ಇಲ್ಲದಿದ್ದಲ್ಲಿ ಇಲ್ಲ ಎಂಬ ಸಹಜ ಸತ್ಯದ ಅರಿವಿದೆ. ತನ್ನ ನೆಮ್ಮದಿಗೆ, ಏಕಾಂತ ಚಿಂತನೆಗೆ, ಅತೀತ ಶಕ್ತಿಯ ಶೋಧಕ್ಕೆ ಒಂದು ಕಲ್ಪನೆಯ ಕೇಂದ್ರ ಬೇಕು, ಆ ಕೇಂದ್ರವನ್ನು ದೇವರೆಂದು ಕರೆದು 'ಮಾನಿಸ' ದೇವರನ್ನು ರೂಪಿಸಿಕೊಂಡ. ತಾನೇ ರೂಪಿಸಿಕೊಂಡ ಕೇಂದ್ರದ ದಾಸನಾದ. ತನ್ನ ಸುತ್ತ ಭಕ್ತಿ- ನಂಬಿಕೆಗಳ ಹಗ್ಗಗಳನ್ನು ಬಿಗಿದುಕೊಂಡ.

ಸರ್ವಜ್ಞನಿಗಿರುವ ವಿವೇಕ; ಬುದ್ಧ, ಕ್ರಿಸ್ತ, ಮಹಮದರಿಗಿರುವ ಜನಪರ ಆಶಯ- ತಾನೇ ಸ್ವಯಂಭುವೆಂದು ಹೇಳಿಕೊಳ್ಳುವ ದೇವಮಾನವರಿಗೆ ಇರುವುದಿಲ್ಲ. ಹಾಗೆ ಹೇಳಿಕೊಳ್ಳುವುದು ಅಹಂಕಾರದ ಸಂಕೇತವಾಗುತ್ತದೆ. ಇಂಥ ದೇವಮಾನವರನ್ನು ನಂಬಿ ಆರಾಧಿಸುವುದು ಮೌಢ್ಯದ ಪರಮಾವಧಿಯಾಗುತ್ತದೆ.

೩೦-೦೮-೨೦೧೨

# ಸಾಮಾನ್ಯರು: ಸದಾ ಬಡವರು!

ಮಾನವ ಚರಿತ್ರೆಯನ್ನು, ಸೂಕ್ಷ್ಮವಾಗಿ ಅಧ್ಯಯನ ಮಾಡಿದ್ದ ಮಹಾತ್ಮಗಾಂಧಿ ಅವರು 'ಬಹುಪಾಲು ಜನಸ್ತೋಮ ಯಾವಾಗಲೂ ಬಡವಾಗಿಯೇ ಇರುತ್ತದೆ' ಎಂದು ನುಡಿದಿದ್ದಾರೆ. ಗಾಂಧಿ ಅವರ ಮಾತಿನಲ್ಲಿ ಚಾರಿತ್ರಿಕ ಸತ್ಯವೊಂದು ವ್ಯಕ್ತವಾಗಿದೆ. ಅಂದರೆ ಚರಿತ್ರೆಯುದ್ದಕ್ಕೂ ಜನಸಾಮಾನ್ಯ ವರ್ಗ ಬಡವರಾಗಿಯೇ ಬದುಕಿದ್ದಾರೆ. ಸಾಮಾನ್ಯ ಜನರು ಬಡವರಾಗಿರುವುದರಲ್ಲೇ ತೃಪ್ತಿ ಪಟ್ಟುಕೊಂಡಿದ್ದರು ಎಂಬುದು ಗಾಂಧೀಜಿಯವರ ಮಾತಿನ ಆಶಯವಾಗಿರಲು ಸಾಧ್ಯವಿಲ್ಲ. ಸಾಮಾನ್ಯರ ಆಸೆಗಳು ಮಹತ್ತರ ಆಗಿರುವುದಿಲ್ಲ. ಅವರು ತಮ್ಮ ಸರಳ ಅಗತ್ಯತೆಗಳ ಪೂರೈಕೆಯಲ್ಲಿ ತೃಪ್ತಿಪಡುವಂಥವರು. ಹೀಗಾಗಿ ಅವರು ಅನೈತಿಕ ಹಾದಿಗಳಲ್ಲಿ ಅಷ್ಟಾಗಿ ನಡೆಯುವವರಲ್ಲ, ಅವರ ಆಸೆಗಳು ಕನಿಷ್ಠ ಊಟ ಬಟ್ಟೆ ವಸತಿಗಳಲ್ಲಿ ಮುಕ್ತಾಯಗೊಳ್ಳುತ್ತಿದ್ದವು- ಎಂಬುದು ಸತ್ಯವಾಗಿಯೂ ಇರಬಹುದು.

ಆದರೆ ಇಂಥ ಕನಿಷ್ಠ ಆಸೆಗಳಲ್ಲೇ ತೃಪ್ತಿಕೊಳ್ಳಬಹುದಾದಂಥ ಅಸಹಾಯಕ ಸ್ಥಿತಿಗೆ ಅವರನ್ನು ತಳ್ಳಿದವರಾರು? ಇಡೀ ತಮ್ಮ ಬದುಕಿನುದ್ದಕ್ಕೂ ದಿನನಿತ್ಯದ ಅಗತ್ಯತೆಗಳನ್ನು ಹೊಂದಾಣಿಕೆ ಮಾಡಿಕೊಳ್ಳುವುದರಲ್ಲೇ ಹೆಣಗುವಂಥ ಪರಿಸ್ಥಿತಿ ಅವರಿಗೇಕೆ ಬಂತು? ಹಸಿವನ್ನು ನೀಗಿಕೊಳ್ಳಲು ಒಂದು ಹಿಡಿ ಕೂಳು, ಚಳಿ ಗಾಳಿಯಿಂದ ರಕ್ಷಿಸಿಕೊಳ್ಳಲು ಎಂಥದೋ ಒಂದು ಬಗೆಯ ಬಟ್ಟೆ, ರಕ್ಷಿತವಾಗಿ ಮಲಗಿ ನಿದ್ರಿಸಲು ಒಂದು ನೆಲೆ- ಬದುಕಿಗೆ ದೊರೆತರೆ ಸಾಕು ಎಂಬ ಸ್ಥಿತಿಗೆ ಅವರನ್ನು ತಂದವರಾರು? ಒಂದಂತೂ ನಿಜ- ಹಸಿವಾದಾಗ ಅನ್ನ ದೊರೆತರೆ, ಅದೇ ಪರಮ ತೃಪ್ತಿ! ಚಳಿಗಾಳಿಯಿಂದ ತಪ್ಪಿಸಿಕೊಳ್ಳಲು ಬೆಚ್ಚಗಾಗುವ ಹೊದಿಕೆಯೊಂದು ದೊರೆತರೆ ಆನಂದದ ನಿದ್ರೆ ಬರುವುದರಲ್ಲಿ ಅನುಮಾನವಿಲ್ಲ. ಆದರೆ ಇವರ ಬಡತನದ ಸ್ಥಿತಿಗೆ ಅವರ ಸೋಮಾರಿತನವು ಕಾರಣವಲ್ಲ; ಅವರ ಶ್ರಮರಹಿತ ಜೀವನ ಕಾರಣವಲ್ಲ. ಅವರು ಸದಾ ದಿನಕ್ಕೆ ಹತ್ತರಿಂದ ಹದಿನೈದು ಗಂಟೆ ದುಡಿಯುತ್ತಿದ್ದರು. ಆದರೆ ಅವರ ದುಡಿಮೆಯ ಫಲ ಅವರಿಗೆ ದಕ್ಕುತ್ತಿರಲಿಲ್ಲ. ಅವರ ದುಡಿಮೆಯ ಫಲ ಸಾಮಾಜಿಕ- ಧಾರ್ಮಿಕ ಕಾರಣಗಳಿಂದ ನಿರಾಕರಿಸಲ್ಪಟ್ಟವು. ಬಹುಪಾಲು ಸಾಮಾನ್ಯರ ದುಡಿಮೆಯು ಕಡಿಮೆ ಜನರ ಸುಖ- ಭೋಗ ಲಾಲಸೆಗಳಿಗೆ ಉತ್ಪನ್ನದ ಸಾಧನವಾಗಿ ಪರಿಗಣಿಸಲ್ಪಟ್ಟಿತು. ಇದು ಚರಿತ್ರೆಯ ಸತ್ಯ; ಇದು ಮಾನವತೆಯ ಕಹಿ ವ್ಯಂಗ್ಯ. ಮತೀಯ ಮೂಲ ತಂತ್ರಗಾರಿಕೆ ಮಾನವತೆಯನ್ನು ಹಿಂಸಿಸಿರುವಷ್ಟು ದೈಹಿಕ-ಭೌತಿಕ ಹಿಂಸೆ ಯಾತನೆಯನ್ನುಂಟು ಮಾಡಿಲ್ಲ. ಸಾಮಾನ್ಯರು ಬಡವರಾಗಿರುವುದರಲ್ಲೇ ಸುಖ ಕಾಣುವುದರ ಮನೋ ನೆಲೆಯನ್ನು ಶತಶತಮಾನಗಳಲ್ಲಿ ಹದಗೊಳಿಸಿ ಗಟ್ಟಿಗೊಳಿಸಲಾಯಿತು. ಸುಖದುಃಖಗಳಿಗ

ಜನ್ಮಾಂತರಗಳ ಪಾಪಪುಣ್ಯಗಳಿಗೂ ಸಂಬಂಧದ ಕುಣಿಕೆ ಹೆಣೆಯಲಾಯಿತು. ತನ್ನ ಇಂದಿನ ದುಡಿಮೆಗೆ ಸಿಗುವ ಒಂದು ತುತ್ತು ಅನ್ನ ಹಿಂದಿನ ಜನ್ಮದ ಪುಣ್ಯಸಂಚಯ; ನೋವು ಹಿಂಸೆಗಳು ಕರ್ಮಸಂಚಯವೆಂಬ ನಂಬಿಕೆಯನ್ನು ಆಳವಾಗಿ ಬೇರು ಬಿಡಿಸಲಾಯಿತು. ನಿಷ್ಕಾಮ ದುಡಿಮೆಯಿಂದ ಅಮೂರ್ತ ಸ್ವರ್ಗದಲ್ಲಿ ಸಿಗಬಹುದಾದ ಸುಖಗಳ ಆಕರ್ಷಕ ವರ್ಣನೆಯನ್ನು ನೇಯ್ದು, ಸಾಮಾನ್ಯರನ್ನು ಸದಾ ದುಡಿಯುವ ಯಂತ್ರಗಳನ್ನಾಗಿ ಮಾರ್ಪಡಿಸಲಾಯಿತು. ಅವರ ಎದೆಯಲ್ಲಿ ಮೂಡಬಹುದಾಗಿದ್ದ ಮಹತ್ವಾಕಾಂಕ್ಷೆಯನ್ನು- ಅಪಾರ ಸುಖ ಬಯಕೆಯನ್ನು ಮೊಳಕೆಯಾಗದಂತೆ ಎಚ್ಚರಿಕೆ ವಹಿಸಲಾಯಿತು.

ಇದಕ್ಕೆ ವ್ಯತಿರಿಕ್ತವಾಗಿ ಶ್ರೀಮಂತರು- ಧಾರ್ಮಿಕ ಸಂಸ್ಥೆಗಳನ್ನು ನಡೆಸುವಂಥವರು ಭೋಗ ಜೀವನವನ್ನು ಅನುಭವಿಸಿದರು. ಮಾನವತೆಯ ಉದ್ಧಾರವೆಂಬ ಮುಖವಾಡದ ಮರೆಯಲ್ಲಿ ಬಡವರಿಗೆ ನಿರಾಕರಿಸಲಾಗಿದ್ದ ಸಮಸ್ತ ಸುಖವನ್ನು ಬಡವರ ದುಡಿಮೆಯ ಫಲದಿಂದಲೇ ಅನುಭವಿಸಿದರು. ಉಳ್ಳವರಿಗೊಂದು ನೀತಿ ಸಾಮಾನ್ಯರಿಗೊಂದು ನೀತಿ ಚರಿತ್ರೆಯುದ್ದಕ್ಕೂ ಕೆಲಸ ಮಾಡುತ್ತಾ ಬಂದಿದೆ. ಭಾರತೀಯ ಸಂವಿಧಾನ ಕೂಡ ಸಮಾನತೆಯನ್ನು ಬೋಧಿಸುವ ಸಂದರ್ಭದಲ್ಲೇ ಕೆಲವರಿಗೆ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿದೆ. ಈ ವಿಶೇಷ ಸೌಲಭ್ಯವೆಂಬುದು ಸಾಮಾನ್ಯರಿಗೆ ಅನ್ವಯಿಸುವುದಿಲ್ಲ. ದುಡ್ಡಿರುವ ಶ್ರೀಮಂತರು ತಪ್ಪು ಮಾಡಿ ಶಿಕ್ಷೆ ಅನುಭವಿಸುವಂಥ ಸಂದರ್ಭಗಳು ಸೃಷ್ಟಿಯಾದಲ್ಲಿ- ಕಾರಾಗೃಹದಲ್ಲೂ ಅವರು ಸುಖದ ವಾತಾವರಣವನ್ನು ನಿರ್ಮಿಸಿಕೊಳ್ಳಬಹುದು. ಆದರೆ ಸಾಮಾನ್ಯ? ಅವನು ಅಲ್ಪದರಲ್ಲೇ ತೃಪ್ತಿಪಡುವಂಥ ಮನಸ್ಥಿತಿಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಈ ಕಾನೂನು ಅಳವಡಿಕೆಯ ತಂತ್ರಗಾರಿಕೆ ದೇಶದಿಂದ ದೇಶಕ್ಕೆ ಭಿನ್ನವಾಗಬಹುದು. ಆದರೆ ಬಡವನ ಅಲ್ಪತೃಪ್ತಿಯು ಚರಿತ್ರೆಯ ಮುಂದುವರಿಕೆಯಾಗಿಯೇ ಇರುತ್ತದೆ!

ಆಸೆಗಳು ಇರಬಾರದು, ಇದ್ದರೂ ಅವು ಮೂಲಭೂತ ಅಗತ್ಯಗಳ ಪೂರೈಕೆಯ ಆಕಾಂಕ್ಷೆಯ ಮಿತಿಯೊಳಗಿರಬೇಕು. ಬಹುಶಃ ಬುದ್ಧನ ಮಾತಿನ ಅಂತರಾಳವೂ ಇದೇ ಆಗಿರಬೇಕು. ಅಸಮಾನತೆ ಸೃಷ್ಟಿಯಾಗಿರುವುದೇ ಶ್ರೀಮಂತಿಕೆಯ ದುರಾಸೆಯಿಂದ ಅಲ್ಲವೆ?

೧೩-೦೯-೨೦೧೨

# ತುಂಡುಡುಗೆಯ ಪ್ರಶ್ನೆ

ಮಾನವ ಚರಿತ್ರೆಯ ಉಗಮದಲ್ಲಿ ಅವನು ನಗ್ನನಾಗಿಯೇ ಇದ್ದ. ಉಡುಪು ಎಂಬುದು ಎಷ್ಟೋ ವರ್ಷಗಳ ನಂತರ ಅವನ ದೇಹವನ್ನು ಅಲಂಕರಿಸಿತು. ಅದು ಅವನ ಸೌಂದರ್ಯವರ್ಧಕ ಸಾಧನವಾಗಿ ಅಲ್ಲ ಎಂಬುದನ್ನು ನಾವು ಮರೆಯಬಾರದು. ಅವನ ದೇಹವನ್ನು ಬಿಸಿಲು, ಚಳಿ, ಮಳೆ ಗಾಳಿಗಳಂಥ ಪ್ರಕೃತಿವಿಕೋಪಗಳಿಂದ ರಕ್ಷಿಸುವ ಸಾಧನವಾಗಿ ಬಂತು ಅಷ್ಟೆ. ಅವನನ್ನು ಈ ಪ್ರಕೃತಿವಿಕೋಪಗಳಿಂದ ಕಾಪಾಡುತ್ತಿದ್ದ ಮರದ ಪೊಟರೆ, ಗುಹೆಗಳಂತೆ ಉಡುಪು ಕೂಡ ಒಂದು ಅಂಗವೆಂದೇ ನಾವು ತಿಳಿಯಬೇಕು. ಅನಂತರ ದೇಹ ರಕ್ಷಣೆಗೆಂದು ಬಳಸುತ್ತಿದ್ದ ಎಲೆ, ತೊಗಟೆ, ಚರ್ಮ, ಹೂ ಮತ್ತು ಬಟ್ಟೆಗಳನ್ನು ದೇಹದ ಸೌಂದರ್ಯ ವರ್ಧಕಗಳನ್ನಾಗಿ ಹೇಗೆ ಬಳಸಿಕೊಳ್ಳಬೇಕೆಂದು ಮನುಷ್ಯನ ಮಿದುಳು ಚಿಂತಿಸಿದ ಫಲವಾಗಿ ಉಡುಪಿನಲ್ಲಿ ವೈವಿಧ್ಯತೆ ರೂಪುಗೊಂಡಿತು. ಆ ಉಡುಪನ್ನು ದೇಹದ ಯಾವ ಭಾಗ ಮುಚ್ಚಬೇಕು? ಯಾವ ಭಾಗವನ್ನು ತೆರೆದು ತೋರಿಸಬೇಕು? ಯಾವ ಭಾಗದಲ್ಲಿ ಬಟ್ಟೆ ಎಷ್ಟೆಷ್ಟಿರಬೇಕೆಂಬ ಔಚಿತ್ಯ ಮತ್ತು ವಿವೇಕಗಳು ಕೆಲಸ ಮಾಡತೊಡಗಿದವು.

ಈ ಹಂತದಲ್ಲಿ ವಸ್ತ್ರವಿನ್ಯಾಸವೆಂಬ ಕಲೆ ಉಗಮವಾಗಿರಬೇಕು. ಈ ವಸ್ತ್ರವಿನ್ಯಾಸವು ದೇಶದಿಂದ ದೇಶಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ ಭಿನ್ನವಾಗಿ ಅರಳಿ ಈ ಉಡುಪು ಈ ಸಂಸ್ಕೃತಿ ಧರ್ಮಗಳ ಚಿಹ್ನೆಗಳೆಂಬ ಅರ್ಥ ಪಡೆದುಕೊಂಡು- ಈ ಉಡುಪು ಈ ಸಂಸ್ಕೃತಿಯ ಸ್ವತ್ತು ಎಂಬಂತೆ ಮಾತನಾಡುವ ಗುತ್ತೇಗಾರಿಕೆ ಪ್ರಾರಂಭವಾಯಿತು. ಈ ಗುತ್ತೇಗಾರಿಕೆಯ ಅಹಂಕಾರ ಅನ್ಯ ಜನಾಂಗ- ಧರ್ಮೀಯರ ಉಡುಪುಗಳನ್ನು ಹೀಗಳೆಯುವ ಮನಸ್ಥಿತಿಗೆ ಕಾರಣವಾಯಿತು. ಹಾಗಾದರೆ ತುಂಡುಡುಗೆ ಯಾವ ಸಂಸ್ಕೃತಿಯದು? ಯಾವ ದೇಶದ್ದು? ಯಾವ ಜಾತಿ-ಜನಾಂಗದ್ದು? ಭಾರತೀಯ ನೆಲದಲ್ಲಿ ಅದಕ್ಕೆ ಬೇರುಗಳೇ ಇಲ್ಲವೆ? ಭಾರತೀಯರೆಲ್ಲ ಎಲ್ಲ ಕಾಲಘಟ್ಟದಲ್ಲೂ ಮೈತುಂಬ ಬಟ್ಟೆಯನ್ನೇ ಧರಿಸುತ್ತಿದ್ದರೆ? ಇಂದು ಸಹ ಭಾರತದ ವೈವಿಧ್ಯಮಯ ಭೂ ಪ್ರದೇಶದಲ್ಲಿ ವಾಸ ಮಾಡುವ ನಿವಾಸಿಗಳೆಲ್ಲರೂ ಧರಿಸುವ ಬಟ್ಟೆಯಲ್ಲಿ ಒಂದೇ ಬಗೆ ಇದೆಯೆ? ಅದರಲ್ಲಿ ಮೈ ತೋರಿಸುವ ವಿನ್ಯಾಸಗಳಿಲ್ಲವೆ?

ತುಂಡುಡುಗೆಯ ಬಗ್ಗೆ ಮಡಿವಂತರ ವಿರೋಧವೇಕೆ? ಅದು ಅಂಗಾಂಗ ಪ್ರದರ್ಶನಕ್ಕೆ ಅವಕಾಶ ನೀಡುತ್ತದೆ ಎಂಬ ಕಾರಣಕ್ಕಾಗಿ ಅಲ್ಲವೇ? ಅಂದರೆ ಈ ತುಂಡುಡುಗೆಯ ಹಿಂದೆ ಪೂರ್ವಕಲ್ಪಿತ ಶೀಲ- ಅಶ್ಲೀಲತೆಯ ಪ್ರಶ್ನೆ ಇದೆ ಎಂದಾಯಿತು. ನಮ್ಮ ಪೂರ್ವ ನಿರ್ಧರಿತ ಪರಿಕಲ್ಪನೆಗಳು ಶೀಲ- ಅಶ್ಲೀಲಗಳನ್ನು ನಿರ್ಧರಿಸುತ್ತವೆ. ಈ ಕಲಿತ ಮಡಿವಂತರಿಗೆ ಅಶ್ಲೀಲ

ಉಡುಪು ಎನಿಸುವುದು ಭಾರತದ ಆದಿವಾಸಿಗಳಿಗೆ ಅನ್ನಿಸದಿರುವಂಥದು. ಇಂದಿಗೂ ಭಾರತದ ಬಹುಪಾಲು ಆದಿವಾಸಿಗಳು ಅರೆಬರೆ ಧಿರಿಸು ಧರಿಸುತ್ತಾರೆ. ಆ ಧಿರಿಸು ಅವರು ಬದುಕುವ ಹವಾಮಾನ- ಆವಶ್ಯಕತೆಗಳು ಮತ್ತು ಅವರು ರೂಢಿಸಿಕೊಂಡು ಬಂದ ಸಂಪ್ರದಾಯ ಆಚರಣೆಗಳ ಹಿನ್ನೆಲೆಯಿಂದ ಬೆಳೆದು ಬಂದಿರುವಂಥದು. ಅದು ಕೂಡ ಮತ್ತೆಲ್ಲೋ ನೋಡಿದ, ಕೇಳಿದ ಮತ್ತು ಹೇಳಿದ ಪ್ರಭಾವಗಳಿಂದ ತಪ್ಪಿಸಿಕೊಂಡಿರುವುದಿಲ್ಲ ಎಂಬ ಸತ್ಯವನ್ನು ಒಪ್ಪಿಕೊಳ್ಳಬೇಕು. ಇಂದಿನ ಆಧುನಿಕ ಯುಗದ ಜಗತ್ತು ತನ್ನ ಜ್ಞಾನ-ತಂತ್ರಜ್ಞಾನ ಆವಿಷ್ಕಾರಗಳಿಂದ ಪರಸ್ಪರ ಪ್ರಭಾವ ಅನುಕರಣೆಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಆದುದರಿಂದ ಜಗತ್ತಿನಲ್ಲೆಲ್ಲಾ ಹೆಚ್ಚು ಕಡಿಮೆ ಕಲಿತವರಲ್ಲಿ ಒಂದೇ ಬಗೆಯ ಉಡುಪು ಗೋಚರಿಸುತ್ತಿದೆ. ಇದು ನನ್ನದು-ನನ್ನ ಸಂಸ್ಕೃತಿಯದು ಎಂದು ಹೇಳಿಕೊಳ್ಳುವವರು ಕೂಡ ಹಬ್ಬ ಹರಿದಿನಗಳಲ್ಲಿ ಮಾತ್ರ ಧರಿಸುವಂಥ ಅನಿವಾರ್ಯತೆ ಸೃಷ್ಟಿಯಾಗಿದೆ. ಅಂದಮೇಲೆ ಇದು ನನ್ನದು, ನನ್ನ ಸಂಸ್ಕೃತಿಯ ಮುದ್ರೆಯೊತ್ತಿರುವಂಥದು ಎಂದು ಹೇಳುವುದೇ ಹಾಸ್ಯಾಸ್ಪದ ಸಂಗತಿಯಾಗುತ್ತದೆ.

ಸೀರೆ ಪಂಚೆ ಕಚ್ಚೆಗಳು ಭಾರತೀಯ ವಿಶಿಷ್ಟ ಉಡುಪುಗಳೆಂದು ಭಾವಿಸುವುದೇ ತಪ್ಪೆಂದು ತೋರುತ್ತದೆ. ಇವು ಮೂಲತಃ ಭಾರತೀಯ ಜನ್ಯವಲ್ಲ. ಯುರೋಪಿನಿಂದ ಕ್ರಿಸ್ತಪೂರ್ವದಲ್ಲಿ ಭಾರತಕ್ಕೆ ಬಂದಿರಬಹುದೆಂದು ಮಾನವ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಅಲ್ಲಿಂದ ಬಂದ ಅವು ಇಲ್ಲಿನ ಹವಾಮಾನಕ್ಕೆ ತಕ್ಕಂತೆ ವಿನ್ಯಾಸಗೊಂಡಿವೆ. ನಮ್ಮ ಸೀರೆ, ರವಿಕೆಗಳು ಜಗತ್ತಿನ ಅತಿ ಹೆಚ್ಚು ಸೌಂದರ್ಯ ಪ್ರದರ್ಶನ ಸಾಧನಗಳೆಂದು ಬಲ್ಲವರು ಹೇಳುತ್ತಾರೆ. ಅವು ಸ್ತ್ರೀಯ ದೇಹದ ಅಂಗಾಂಗಳನ್ನು ಅತ್ಯಂತ ಮಾದಕವಾಗಿ ಹೊರತೋರುತ್ತವೆ. ಹಾಗೂ ಕೆಲವು ಭಾಗಗಳನ್ನು ನಗ್ನವಾಗಿ ಪ್ರದರ್ಶಿಸುತ್ತವೆ. ಈ ಮಾತು ಸುಳ್ಳಲ್ಲವೆಂದು ಅನುಭವಸ್ಥರು ತಿಳಿಸಿದ್ದಾರೆ. ಜಗತ್ತಿನ ಬೇರೆ ಭಾಗದ ಸ್ತ್ರೀಯರು ಹಾಗೆ ನೋಡಿದರೆ ಮೈ ತುಂಬ ಧಿರಿಸು ಧರಿಸುತ್ತಾರೆ. ಫ್ಯಾಷನ್ ಷೋಗಳಲ್ಲಿ ಕ್ಯಾಟ್‌ವಾಕ್ ಮಾಡುವ ಅಥವಾ ಸಿನೆಮಾಗಳಲ್ಲಿ ಮೈ ಪ್ರದರ್ಶನ ಮಾಡುವ ಕೆಲವು ಅಂಶಗಳನ್ನು ಗಮನಿಸಿ ವಿದೇಶಿಯರೆಲ್ಲರೂ ಹಾಗೇ ಇರುತ್ತಾರೆಂದು ಭಾವಿಸುವುದು ತಪ್ಪು ನಿರ್ಧಾರವಾಗುತ್ತದೆ.

ತುಂಡುಡುಗೆಯನ್ನು ಸ್ತ್ರೀಯರು ಧರಿಸಿದರೆ ಮಾತ್ರ ಅಶ್ಲೀಲವೆ? ಪುರುಷರು ತುಂಡುಡುಗೆಯ ಧರಿಸಿದರೆ ಅದು ಅಶ್ಲೀಲವಲ್ಲವೆ? ಈ ಲಿಂಗ ತಾರತಮ್ಯ ಧೋರಣೆ ಏಕೆ? ಈ ಪ್ರಶ್ನೆಯನ್ನು ಸಂಪ್ರದಾಯವಾದಿಗಳು ತಮಗೆ ತಾವೆ ಹಾಕಿಕೊಳ್ಳುವುದು ಒಳ್ಳೆಯದು.

೨೭-೦೯-೨೦೧೨

## ಕರಿಯ ಚರ್ಮ

ಕರಿಯನ ಕಣ್ಣುಗಳು ಅವನ ಕಪ್ಪುಮುಖದಲ್ಲಿ ಸರಿರಾತ್ರಿಯ ಮಿಂಚಿನಂತೆ ಪ್ರಜ್ವಲಿಸುತ್ತವೆ. ಅವನ ಹಲ್ಲುಗಳು ಅವನ ಸುತ್ತಲ ವಾತಾವರಣದಲ್ಲಿ ಹಾಲಿನಂತೆ ಬೆಳಗುತ್ತವೆ. ಈ ಪ್ರಜ್ವಲತೆ ಮತ್ತು ಹೊಳಪುಗಳನ್ನು ಬಿಳಿಯರ ಮುಖದಲ್ಲಿ ನಾವು ಕಾಣಲು ಸಾಧ್ಯವಿಲ್ಲ. ಬಿಳಿಯರ ಬಿಳುಪಿನ ಮುಖದಲ್ಲಿ ಅವರ ಕಣ್ಣಿನ ಬಿಳಿಯ ಬಣ್ಣ ಮುಚ್ಚಿ ಹೋಗುತ್ತದೆ. ಅವರ ಹಲ್ಲುಗಳು ರಂಗೋಲೆಯ ಬಣ್ಣ ತಳೆದು ಮಂಕು ಪಡೆಯುತ್ತವೆ. ಕರಿಯನ ಹಲ್ಲು ಮತ್ತು ಕಣ್ಣುಗಳು ರಾತ್ರಿ ಸಮಯದ ನೀಲಾಕಾಶದ ನಕ್ಷತ್ರ ಗ್ರಹಗಳಂತೆ ಎದ್ದು ಕಾಣುತ್ತವೆ. ಅವು ಆಕಾಶಕ್ಕೆ ಜೀವ ತುಂಬುವಂತೆ ಕರಿಯನ ವ್ಯಕ್ತಿತ್ವಕ್ಕೆ ಅವನ ಬಿಳಿಯ ಕಣ್ಣುಗಳು ಮತ್ತು ಹಲ್ಲುಗಳು ವಿಶೇಷ ಮೆರಗನ್ನೂ ಭಾವಾರ್ಥವನ್ನೂ ತುಂಬುತ್ತವೆ. ಈ ಬಗೆಯ ಅರ್ಥಮುಖತೆ ಬಿಳಿಯನಿಗೆ ದಕ್ಕಲಾರವು!

ಆದರೆ ಮಾನವ ಚರಿತ್ರೆ ಸದಾ ಕರಿಯನ ಬಣ್ಣವನ್ನು ಕೀಳೆಂದು ಭಾವಿಸಿ, ವ್ಯಾಖ್ಯಾನಿಸಿ ಅವನ ವ್ಯಕ್ತಿತ್ವಕ್ಕೆ ಮತ್ತು ಅಸ್ತಿತ್ವಕ್ಕೆ ಅನ್ಯಾಯ ಮಾಡಿದೆ. ಈ ಜಗತ್ತಿನ ಮೊದಲ ಮಾನವ ಯಾವ ಬಣ್ಣದವನಾಗಿದ್ದ? ಅವನ ರೂಪ ವಿಶೇಷಗಳು ಇವತ್ತಿನ ಯಾರನ್ನು ಹೋಲುತ್ತಿದ್ದವು? ಮಾನವ ಶಾಸ್ತ್ರಜ್ಞರು ಅತ್ಯಂತ ಪುರಾತನ ಮಾನವರಾದ ಜಾವಾಮಾನವ ಅಥವಾ ನಿಯಾಂದರ್‌ತಲ್ ಮಾನವರ ಅವಶೇಷಗಳನ್ನು ಅಧ್ಯಯನ ಮಾಡಿ ಶೋಧಿಸಿರುವ ಸತ್ಯ- ಆದಿಮಾನವನ ಬಣ್ಣ ಕರಿಯದಾಗಿತ್ತು ಅಥವಾ ಕಡು ತಾಮ್ರವರ್ಣದಾಗಿತ್ತು. ಅಂದರೆ ಈ ಭುವಿಯ ಮೊದಲ ಮಾನವ ಹಕ್ಕುದಾರ ಕರಿಯನೇ ಆಗಿದ್ದನೆಂಬುದು ಅರಿವಿಗೆ ಬರುತ್ತದೆ. ಆದರೆ ಅನಂತರ ಬೆಳೆದ ಸಂಸ್ಕೃತಿ- ನಾಗರಿಕತೆಗಳು ಕರಿಯನನ್ನು ಅಂತಿಮ ದರ್ಜೆಯ ಮನುಷ್ಯನೆಂದು ಕರೆದು ವರ್ಣಭೇದ ನೀತಿಯನ್ನು ಅನುಸರಿಸುತ್ತಾ ಬಂದಿವೆ. ಅವನು ಗುಲಾಮನಾಗುವುದಕ್ಕೆ ಮಾತ್ರ ಜನಿಸಿದ್ದಾನೆ; ಅವನು ದುಡಿಯುವ ದಾಸ; ಅವನು ಅಸ್ಪೃಶ್ಯ; ಅವನು ದನ ಕುರಿ ಮೇಕೆಗಳಂಥ ಒಂದು ಪ್ರಾಣಿ ಸಮಾನ. (ಅಥವಾ ಅದಕ್ಕಿಂತಲೂ ಕೀಳು! ಏಕೆಂದರೆ ಈ ಪ್ರಾಣಿಗಳನ್ನು ಮನುಷ್ಯ ಸ್ಪರ್ಶಿಸುತ್ತಾನೆ; ಒಮ್ಮೊಮ್ಮೆ ಪ್ರೀತಿಯಿಂದ ಮೈದಡವುತ್ತಾನೆ!) ಪ್ರಾಚೀನ ಗ್ರೀಕರು ಇವರನ್ನು ಪ್ರಾಣಿಗಳೆಂದೇ ಭಾವಿಸಿದ್ದರು. ಅವರಿಗೆ ಬಿಳಿಯರಿಗಿರುವಂಥ ರಾಗಭಾವಗಳು ಇರಲು ಸಾಧ್ಯವಿಲ್ಲವೆಂದೇ ನಂಬಿದ್ದರು!

ನಮ್ಮ ತತ್ವಶಾಸ್ತ್ರ- ಮೀಮಾಂಸೆಗಳು ಕೂಡ ಕರಿಯ ಬಣ್ಣವನ್ನು ತುಚ್ಛವಾಗಿ ಕಂಡಿವೆ! ಅಜ್ಞಾನವೆಂಬುದು ಕಪ್ಪುವರ್ಣದ್ದೆಂದೂ ಜ್ಞಾನವೆಂಬುದು ಬಿಳಿಯವರ್ಣ ಸ್ವರೂಪಿಯೆಂದೂ

ಅವು ವ್ಯಾಖ್ಯಾನಿಸಿವೆ! ಜ್ಞಾನವನ್ನು ಬೆಳಕೆಂದೂ ಜ್ಯೋತಿಯೆಂದೂ ಕರೆಯಲಾಗಿದೆ. ಈ ಬಗೆಯ ವ್ಯಾಖ್ಯಾನಕ್ಕೆ ಕಾರಣ (ರೀಸನ್) ಅಥವಾ ಆಧಾರವನ್ನು ಅವು ನೀಡಲು ಅಸಮರ್ಥವಾಗಿವೆ ಅಥವಾ ಕೇವಲ ಕತ್ತಲೆ ಬೆಳಕಿನ ಪ್ರಕೃತಿಯಾಟವನ್ನು ಅನ್ವಯಿಸಿ ಮಾತನಾಡಿವೆ. ಕತ್ತಲು ನಿಗೂಢತೆಯ ಸಂಕೇತವಾದರೆ ಬೆಳಕು ದೃಶ್ಯ ಸ್ವರೂಪಕ್ಕೆ ರೂಪಕವಾಗುತ್ತದೆ. ಆದರೆ ಈ ಅನುಭವ ದೃಗ್ಗೋಚರವಷ್ಟೇ, ಸತ್ಯವಲ್ಲವೆಂಬ ಅರಿವು ನಮ್ಮ ತತ್ವ ಮೀಮಾಂಸಕಾರರಿಗೆ ತೋರದೆ 'ಕಪ್ಪುಬಿಳುಪು' ಸಿದ್ಧಾಂತವನ್ನು ಮಂಡಿಸಿಬಿಟ್ಟರು. 'ಬೆಳ್ಳಗಿರುವುದೆಲ್ಲಾ ಹಾಲು' ಎಂಬ ಹುಸಿ ಸತ್ಯವನ್ನು- ವಾಸ್ತವ ಸತ್ಯವೆಂದು ಚರಿತ್ರೆಯುದ್ದಕ್ಕೂ ಮಂಡಿಸುತ್ತಾ ಬಂದರು.

ಇದರಿಂದ ಆದ ಪರಿಣಾಮವೇನು? ಜಗತ್ತಿನ ಕಪ್ಪುವರ್ಣಕ್ಕೆ ಚರಿತ್ರೆಯುದ್ದಕ್ಕೂ 'ನೀನು ಕೀಳು.. ನೀನು ಕೀಳು..' ಎಂದು ಕರೆ ಕರೆದು- ಬರೆ ಬರೆದು ಕೀಳರಿಮೆಯನ್ನು ಉಂಟು ಮಾಡಿದ್ದು. ಅಕ್ಷರ ಸಂಸ್ಕೃತಿಯಿಂದ ಅವರನ್ನು ದೂರವಿಟ್ಟು, ಕೇವಲ ಶ್ರಮದ ಆಳುಗಳನ್ನಾಗಿ ಪರಿವರ್ತಿಸಿ 'ನಾವಿರುವುದೇ ಹೀಗೆ', 'ನಾವು ಹುಟ್ಟಿರುವುದೇ ದಾಸರಾಗುವುದಕ್ಕೆ' ಎಂಬ ಅರಿವು ಅವರ ರಕ್ತದಲ್ಲಿ, ವಂಶವಾಹಿಗಳಲ್ಲಿ ಆವಿರ್ಭವಿಸುವಂತೆ ಮಾಡಿದ್ದು. ಇದು ಧಾರ್ಮಿಕ ರಾಜಕಾರಣ ಮಾಡಿರುವ ಹುನ್ನಾರ, ಮೋಸ; ಮಾನವತೆಯ ಮೇಲೆ ನಡೆಸಿರುವ ಕ್ರೌರ್ಯ. ಬಣ್ಣ ನೀತಿ ಮತ್ತು ಮತಧರ್ಮಗಳು ನಿರಂತರವಾಗಿ ದುಡಿಮೆಯ ಜನಾಂಗವೊಂದನ್ನು ಜತನವಾಗಿ ಇರುವಂತೆ ನಿರ್ವಹಿಸಿದ ತಂತ್ರಗಾರಿಕೆ ಇದು. ಈ ಸತ್ಯ ಇಂದಿನ ಜಗತ್ತಿಗೆ ನಿಧಾನವಾಗಿ ಅರಿವಿಗೆ ಬರುತ್ತಿದೆ.

ಈ ಸತ್ಯದ ಜಾಗೃತಿಯ ಫಲವಾಗಿ 'ಕಪ್ಪು ಸುಂದರ' ಎಂಬ ಸ್ವಾಭಿಮಾನದ ಅಲೆಯೊಂದು ಎಲ್ಲೆಡೆ ಹರಡುತ್ತಿದೆ. ಬೌದ್ಧಿಕತೆಯೆಂಬುದು ಯಾವುದೇ ವರ್ಣವೊಂದರ ಸ್ವತ್ತಲ್ಲ. ಅದು ಮೈಮನ ಬುದ್ಧಿಯಿರುವ ಯಾವ ವರ್ಣದವರೂ ದಕ್ಕಿಸಿಕೊಳ್ಳಬಹುದಾದ ಶ್ರಮದ ಫಲವೆಂಬ ಸತ್ಯ ಕೈಸೇರುತ್ತಿದೆ. ಎಲ್ಲರ ನೆತ್ತಿಗೇರುತ್ತಿದೆ.

ಒಂದು ಸತ್ಯ ಗೊತ್ತೆ? ಎಂಥ ಬಿಸಿಲು ಗಾಳಿ ಪ್ರಕೃತಿ ವೈಪರೀತ್ಯಗಳಿಗೂ ಕರಿಯ ಚರ್ಮ ಅಲುಗಾಡುವುದಿಲ್ಲ, ವರ್ಣಗೆಡುವುದಿಲ್ಲ. ಮತ್ತಷ್ಟು ಕಡುವಾಗುತ್ತದೆ. ಗಟ್ಟಿಯಾಗುತ್ತದೆ. ಆದರೆ ಬಿಳಿಯ ಬಣ್ಣ? ಅದನ್ನು ಬಿಡಿಸಿ ಹೇಳಬೇಕಾದ ಆವಶ್ಯಕತೆಯಿಲ್ಲ!

೧೧-೧೦-೨೦೧೨

## ಹಸಿವ ನೀಗುವ ಗಾರುಡಿಗ!

ಹಸಿವಿನಿಂದ ನರಳುವ ಸ್ಥಿತಿ ಜಗತ್ತಿನ ಅತ್ಯಂತ ನೋವಿನ ಸಂದರ್ಭ. ಅದಕ್ಕಿಂತ ಮಿಗಿಲಾದ ನೋವು ಮತ್ತು ಸಂಕಟಗಳು ಇರಲು ಸಾಧ್ಯವೇ ಇಲ್ಲ. ಹೊಟ್ಟೆ ತುಂಬ ತಿಂದ ಜನಕ್ಕೆ ಈ ನೋವಿನ ಅನುಭವದ ಸಂಕಟ ಎಂಥದ್ದೆಂಬುದು ಅರ್ಥವೇ ಆಗುವುದಿಲ್ಲ. ಮಧ್ಯಮ ವರ್ಗಕ್ಕಿಂತ ಮೇಲ್ಮಟ್ಟದ ಜನರು ಬಹುಪಾಲು ಹಸಿವಾಗದೇ ಹೊತ್ತು ಹೊತ್ತಿಗೆ ಉಣ್ಣುವಂಥವರು. ಇವರಿಗೆ ಊಟದ ಸಂದರ್ಭ - ಸಮಯ ಪೂರ್ವನಿರ್ಧರಿತವಾಗಿರುತ್ತವೆ. ಆಯಾಯ ಸಮಯದಲ್ಲಿ ಹಸಿವಾಗಿರಲಿ ಅಥವಾ ಆಗದಿರಲಿ ಸುಮ್ಮನೆ ಕೂತು ಉಂಡುಬಿಡುತ್ತಾರೆ! ಭೋಜನದ ರುಚಿ ಹೆಚ್ಚಿಸಿಕೊಳ್ಳಲು ವಿವಿಧ ಬಗೆಯ ಪೂರಕ ಖಾದ್ಯಗಳು, ನೆಂಜಿಕೆಗಳು! ಇವು ಅವರ ಸೇವನೆಯ ಪ್ರಮಾಣವನ್ನು ಹೆಚ್ಚಿಸುತ್ತವೆಯಂತೆ! ಇಂಥ ಕೆಲವರಿಗಂತೂ ಊಟ ಮಾಡುವುದು ಚಟವಾಗಿಬಿಡುತ್ತದೆ. ಮತ್ತೆ ಕೆಲವರಿಗಂತೂ ಭೋಜನದ ರೀತಿ ರಿವಾಜುಗಳು ತಮ್ಮ ಅಂತಸ್ತಿನ ತೋರಿಕೆಯ ಅಹಂಕಾರವಾಗಿಬಿಡುತ್ತದೆ. ಆದರೆ ಜಗತ್ತಿನ ಒಟ್ಟು ಜನಸಂಖ್ಯೆಯಲ್ಲಿ ಇಂಥವರ ಸಂಖ್ಯೆ ಅರ್ಧಕ್ಕಿಂತಲೂ ಕಡಿಮೆ. ಇವರ ಸುಖ ಭೋಜ್ಯ ಸಾಧಿತವಾಗಲು ಜಗತ್ತಿನ ಮೂಲೆ ಮೂಲೆಗಳಲ್ಲಿ ನೂರಾರು ಕೋಟಿ ಜನರು ದಿನದಲ್ಲಿ ಹನ್ನೆರಡು ಗಂಟೆಗೂ ಮಿಗಿಲಾಗಿ ತಮ್ಮ ಬೆವರು ಸುರಿಸುತ್ತಿರುತ್ತಾರೆ. ಈ ಅಸಮಾನತೆಯ ಅನ್ಯಾಯ ಚರಿತ್ರೆಯುದ್ದಕ್ಕೂ ನಡೆದು ಬಂದಿರುವ ವಾಸ್ತವ ಸತ್ಯ.

ಈ ಹಸಿವಿನ ನರಳಾಟ ನಮ್ಮ ಚರಿತ್ರೆಯ ಅರಿವಿಗೆ ಬಂದಿರಲಿಲ್ಲವೆಂದು ತಿಳಿಯಬೇಕಾದ್ದಿಲ್ಲ. ಬಡವರ, ದೀನರ, ಹಸಿದವರ ಪರವಾಗಿ ಮಾತನಾಡುವ ಧ್ವನಿ ಅಲ್ಲೊಂದು ಇಲ್ಲೊಂದು ಕೇಳಿಬರುತ್ತದೆ. ಆದರೆ ಆ ಧ್ವನಿ ಪ್ರಧಾನ ಧ್ವನಿಯಲ್ಲ ಅಥವಾ ಆ ಧ್ವನಿ ಇನ್ನಿತರ ಅಬ್ಬರದ ಧ್ವನಿಗಳ ನಡುವೆ ಯಾರಿಗೂ ಕೇಳುವುದಿಲ್ಲ. ಅಂಥ ಒಂದು ಧ್ವನಿಗೆ ಹಿರಿಯ ವಚನಕಾರ ದೇವರ ದಾಸಿಮಯ್ಯ ಎಲ್ಲ ಹಸಿದವರ ಸಂಕಟಕ್ಕೆ ಅಭಿವ್ಯಕ್ತಿಯನ್ನು ನೀಡುತ್ತಾನೆ :

**ಹಸಿವೆಂಬ ಹೆಬ್ಬಾವು ಬಸುರ ಹಿಡಿದರೆ**
**ವಿಷವೇರಿತ್ತಯ್ಯ ಆಪಾದ ಮಸ್ತಕಕ್ಕೆ**
**ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ**
**ವಸುಧೆಯೊಳಗೆ ಆತನೆ ಗಾರುಡಿಗ ಕಾಣಾ! ರಾಮನಾಥ.**

ಅಂದರೆ ದಾಸಿಮಯ್ಯನಿಗೆ ಚರಿತ್ರೆ ಮಾಡಿರುವ ಅನ್ಯಾಯದ ಬಗ್ಗೆ ಸ್ಪಷ್ಟವಾದ ಅರಿವಿತ್ತು. ಆ ಅರಿವು ಕೇವಲ ಸಾಮಾಜಿಕ ನೆಲೆಯದು ಮಾತ್ರವಲ್ಲ, ಅದು ಧಾರ್ಮಿಕ ಮತ್ತು ಆಧ್ಯಾತ್ಮಿಕ

ನೆಲೆಯದ್ದೂ ಕೂಡ ಆಗಿತ್ತು. ಧಾರ್ಮಿಕ ಜಗತ್ತು ಸದಾ ಬಡವರ ಬಗ್ಗೆ ಮಾತನಾಡುವ ನಾಟಕವಾಡಿ ಆಂತರ್ಯದಲ್ಲಿ ಅದು ಶ್ರೀಮಂತರ ಮತ್ತು ಆಳುವ ವರ್ಗದ ಅನುಕೂಲಕರ ನಡೆಯನ್ನು ನಿರ್ವಹಿಸುತ್ತಿತ್ತು. ಬಡವರ ಸಂಕಟ ನಿವಾರಣೆಗಾಗಿ ಶ್ರೀಮಂತರ ಮತ್ತು ಆಳುವ ವರ್ಗದ ಮನೋಧರ್ಮವನ್ನು ಪರಿವರ್ತಿಸಿ ಸಮಾನತೆಯ ಕಡೆ, ಮಾನವತೆಯ ಕಡೆ ತುಡಿಯುವಂತೆ ಮಾಡುವ ಬದಲು ಶ್ರಮಿಕರ - ಬಡವರ ದುಡಿಮೆಯ ಫಲವನ್ನು ಭೋಗಿಸುವ ಮತ ಮೌಢ್ಯ ಹುಸಿ ನಂಬಿಕೆಗಳ ನಿರ್ಮಾಣ ಮಾಡುವುದರಲ್ಲಿ ತಲ್ಲೀನವಾಯಿತು. ಅದಕ್ಕಾಗಿ ಪಾಪ - ಪುಣ್ಯ, ಸ್ವರ್ಗ - ನರಕ ಪರಿಕಲ್ಪನೆಗಳನ್ನು ನೇಯಲಾಯಿತು. ಪುಣ್ಯಸಂಚಯದ ಫಲವಾಗಿ ಸ್ವರ್ಗದಲ್ಲಿ ದಕ್ಕಬಹುದಾದ ಸುಖದ ಪಟ್ಟಿಯನ್ನು ಬಣ್ಣಬಣ್ಣವಾಗಿ ನೆಯ್ದು ಈ ಭುವಿಯ ವಾಸ್ತವದ ನರಕದ ಬದುಕನ್ನು ಭ್ರಮೆಯಲ್ಲಿ ಮರೆಯುವಂತೆ ಮಾಡಲಾಯಿತು. ಈ ವಂಚನೆ ಶೋಷಕ ವರ್ಗವಾದ ಪ್ರಭುಗಳು - ಭೂಮಾಲೀಕರಿಗಿಂತ ಕ್ರೂರವಾದುದು. ಏಕೆಂದರೆ ಸಮಾಜದ ಬಹುಪಾಲು ವರ್ಗವನ್ನು ಅಜ್ಞಾನದಲ್ಲಿರುವಂತೆ ಪ್ರಜ್ಞಾಪೂರ್ವಕ ಎಚ್ಚರವಹಿಸಿರುವುದು ಇದರಿಂದ ವ್ಯಕ್ತವಾಗುತ್ತದೆ. ಇದೊಂದು ವಂಚನೆ, ಮೋಸ, ಸಾಮಾಜಿಕ ದ್ರೋಹ. ಈ ದ್ರೋಹದ ಹುನ್ನಾರಗಳು ಸಮಾಜದ ಕೆಳವರ್ಗದಿಂದ ಬಂದಿರುವ ದೇವರ ದಾಸಿಮಯ್ಯನ ಅರಿವಿಗೆ ಬಂದಿತ್ತು. ಈ ಅರಿವಿನಲ್ಲಿ ವಾಸ್ತವದ ಚಿತ್ರಣವಿರುವಂತೆ ವಿಷಾದದ ಛಾಯೆಯೂ ಇದೆ.

ದೇವರ ದಾಸಿಮಯ್ಯ ಹಸಿವನ್ನು ವಿಷಕ್ಕೆ ಹೋಲಿಸುತ್ತಾನೆ. ಇದು ಏಕಾ ಏಕಿ ಕೊಲ್ಲುವ ವಿಷವಲ್ಲ. ಇದು ಕೇವಲ ಬಸುರನ್ನು ಸಂಕಟಕ್ಕೆ ಗುರಿ ಮಾಡುವುದಿಲ್ಲ. ಆಪಾದ ಮಸ್ತಕಕ್ಕೆ ಏರುವ ಸಂಕಟದ ನಂಜು. ಇದು ಬುದ್ಧಿಭಾವಗಳನ್ನು ವಿವೇಕ ಕಳೆದುಕೊಳ್ಳುವ ಸ್ಥಿತಿಗೆ ನೂಕುವಂಥ ಪ್ರವೃತ್ತಿ. ಅದರಿಂದಾಗಿಯೇ ಅವನ ಮಾತಿನಲ್ಲಿ ಒಂದು ಬಗೆಯ ನಿರಾಸೆ, ಅಸಹಾಯಕತೆ ವ್ಯಕ್ತವಾಗುತ್ತದೆ.

ಈ ಬಗೆಯ ಅಸಹಾಯಕತೆ ವರ್ತಮಾನದ ನಡೆಯಾಗಬಾರದು. ಒಂದು ವೇಳೆ ಅದೇ ಆಗುವುದಾದರೆ ಚಲನೆ ನಿಂತಿದೆಯೆಂದೇ ಅರ್ಥ.

೨೫-೧೦-೨೦೧೨

# ವಯಸ್ಸು ಮತ್ತು ಆಹಾರ ಸೇವನೆ

ಜೀವಿಯ ವಯಸ್ಸು ಮತ್ತು ಅದು ಸೇವಿಸುವ ಆಹಾರದ ಪ್ರಮಾಣ ಹಾಗೂ ಪೌಷ್ಟಿಕತೆಯ ಅಗತ್ಯತೆಗೆ ಸಂಬಂಧವಿರುತ್ತದೆ. ಜೀವಿಯ ಬೆಳವಣಿಗೆಗೆ ಒಂದು ಕಾಲದ ಮಿತಿಯಿರುತ್ತದೆ. ಅದರ ಕಣ್ಣಿಗೆ ಕಾಣುವ ಅಂಗಗಳು ಮತ್ತು ಕಾಣದ ಒಳಾಂಗಗಳು ಒಂದು ವಯಸ್ಸಿನ ನಂತರ ತಮ್ಮ ಬೆಳವಣಿಗೆಯನ್ನು ನಿಲ್ಲಿಸುತ್ತವೆ. ಅನಂತರ ಅವುಗಳ ಆರೋಗ್ಯ ಮತ್ತು ಗುಣಮಟ್ಟವನ್ನು ಕಾಯ್ದುಕೊಂಡು ಹೋಗುವುದಷ್ಟೇ ಜೀವಿಯ ಜೈವಿಕ ಕ್ರಿಯೆಯಾಗಿರುತ್ತದೆ. ಈ ಬಗೆಯ ಕಾಪಾಡಿಕೊಳ್ಳುವಿಕೆಗೆ ಬೇಕಾಗುವ ಆಹಾರ ಮತ್ತು ಅದರ ಪೌಷ್ಟಿಕಾಂಶ ಬೆಳವಣಿಗೆಯ ಹಂತದಲ್ಲಿ ಬೇಕಿರುವಷ್ಟು ಖಂಡಿತ ಆಗಿರುವುದಿಲ್ಲ. ಜೀವದ ವಯಸ್ಸು ಏರಿದಂತೆಲ್ಲಾ ಬದುಕುವ ಅಗತ್ಯಕ್ಕೆಷ್ಟು ಬೇಕೋ ಅಷ್ಟು ಆಹಾರ ಸೇವಿಸಿದರೆ ಸಾಕು!

ಮಕ್ಕಳನ್ನು ನೋಡಿ, ಅವು ಎಷ್ಟು ಕ್ರಿಯಾಶೀಲವಾಗಿರುತ್ತವೆ; ಚಟುವಟಿಕೆಯಿಂದ ಕೂಡಿರುತ್ತವೆ! ಅವು ಮಲಗಿರುವ ಸಮಯವನ್ನು ಹೊರತುಪಡಿಸಿ, ತಮ್ಮನ್ನು ಉಳಿದ ಸಮಯವನ್ನೆಲ್ಲಾ ಒಂದಲ್ಲಾ ಒಂದು ಕ್ರಿಯೆಯಲ್ಲಿ ತೊಡಗಿಸುತ್ತವೆ. ಈ ತೊಡಗುವಿಕೆಯಲ್ಲಿ ಮಕ್ಕಳ ದೇಹ-ಮನಸ್ಸುಗಳೆರಡೂ ಅತ್ಯಂತ ತನ್ಮಯತೆಯಿಂದ ಪಾಲ್ಗೊಳ್ಳುತ್ತವೆ; ಕಾರ್ಯಪ್ರವೃತ್ತವಾಗುತ್ತವೆ. ಈ ಕ್ರಿಯೆಗೆ ಅತ್ಯಂತ ಅಗಾಧವಾದ ಶಕ್ತಿಯ ಅಗತ್ಯವಿರುತ್ತದೆ. ಈ ಶಕ್ತಿ ಆ ಮಕ್ಕಳು ಸೇವಿಸುವ ಆಹಾರ ಮತ್ತು ಅದರ ಪೌಷ್ಟಿಕತೆಯ ಮೂಲಕ ಪ್ರಾಪ್ತವಾಗುತ್ತದೆ. ಜೊತೆಗೆ, ಈ ಕ್ರಿಯಾಶೀಲತೆ ಮತ್ತು ಶಕ್ತಿಗಳು ಆ ವಯಸ್ಸಿನ ಮಕ್ಕಳ ದೇಹ ಮತ್ತು ಬುದ್ಧಿಗಳ ಬೆಳವಣಿಗೆಯನ್ನು ಅಚ್ಚುಕಟ್ಟಾಗಿ ಮಾಡುತ್ತವೆ.

ಕನ್ನಡದಲ್ಲಿರುವ 'ಕರ ಹೊರೆ ತಿಂತು, ಮಗ ಮುದ್ದೆ ತಿಂದ' ಎಂಬ ಗಾದೆ ಈ ಎಲ್ಲ ಧ್ವನಿಗಳನ್ನು ಹೊರಡಿಸುತ್ತದೆ. ಕರು ಮತ್ತು ಮಗು ಅತಿಯಾಗಿ ಏಕೆ ತಿನ್ನುತ್ತವೆಯೆಂದರೆ ಅದರ ಬೆಳವಣಿಗೆಗೆ ಅದು ಬೇಕಾಗಿರುತ್ತದೆ. ಅದು ನಿಜವಾದ ಅರ್ಥದಲ್ಲಿ 'ಅತಿ'ಯಲ್ಲ, ಅಗತ್ಯ. ಮಗು ವಯಸ್ಕನಿಗಿಂತ ತನ್ನ ದೈಹಿಕ ಮತ್ತು ಮನೋಬೆಳವಣಿಗೆಯನ್ನು ತ್ವರಿತವಾಗಿಡಲು ಸದಾ ತಿನ್ನಬೇಕು ಮತ್ತು ಕ್ರಿಯಾಶೀಲವಾಗಿರಬೇಕು. ಮಾನವ ಜೀವಿಗೆ ಹೋಲಿಸಿದರೆ ಇತರ ಜೀವಿಗಳ ಜೀವಿತಾವಧಿ (ಕೆಲವನ್ನು ಹೊರತುಪಡಿಸಿ) ಕಡಿಮೆ ಇರುವುದರಿಂದ ಅವುಗಳ ಬೆಳವಣಿಗೆಯೂ ಅತ್ಯಂತ ತ್ವರಿತವಾಗಿರುತ್ತದೆ. ಕೆಲವು ಸಾಕುಪ್ರಾಣಿಗಳು ಮತ್ತು ಇತರ ಜೀವಿತಾವಧಿ ಕಡಿಮೆಯಿರುವ ಜೀವಿಗಳ ಬೆಳವಣಿಗೆ ಮಾನವ ಶಿಶುವಿಗಿಂತ ಎಂಟುಪಟ್ಟು ಅಧಿಕವಾಗಿರುತ್ತದೆ. ಆದುದರಿಂದ ಅವು ಮಾನವನಿಗಿಂತ ಅಧಿಕವಾಗಿ ಆಹಾರ ಸೇವನೆ

ಮಾಡಬೇಕಾಗುತ್ತದೆ. ಇಲ್ಲಿ ಒಂದು ಪ್ರಕೃತಿವಿಶೇಷತೆಯೂ ಇದೆ. ಬಹು ಬೇಗ ಬೆಳೆದು, ಬದುಕನ್ನು ಬಾಳಿ, ವಂಶವನ್ನು ಮುಂದುವರಿಸಿ, ಅಷ್ಟೇ ಬೇಗ ಬದುಕಿನಿಂದ ಮರೆಯಾಗುವ ಜೀವಿಗಳ ಆಹಾರ ಸೇವನೆಯ ಪ್ರಮಾಣಕ್ಕೂ, ನಿಧಾನವಾಗಿ ಬೆಳೆದು ಬಹುಕಾಲ ಬದುಕಿ ಬಾಳುವ ಜೀವಿಗಳ ಆಹಾರ ಸೇವನೆಯ ಪ್ರಮಾಣಕ್ಕೂ ವ್ಯತ್ಯಾಸವಿರುವುದನ್ನು ನಾವು ಗಮನಿಸಬೇಕು. ಅತಿಯಾಗಿ ತಿಂದು, ತ್ವರಿತವಾಗಿ ಬೆಳೆದು, ಅಂತ್ಯ ಕಾಣುವ ಜೀವಿಗೆ ಅದರ ಆಹಾರ ಸೇವನೆಯ ಪ್ರಮಾಣದ ಅಗತ್ಯ - ಅದರ ವಯೋಮಾನದ ಪರಿಧಿಯನ್ನು ಅವಲಂಬಿಸಿದೆಯೆಂದಾಯಿತು.

ಜೀವಿಗೆ ವಯಸ್ಸಾದಂತೆಲ್ಲಾ, ಅದರ ಅಂತ್ಯದ ವಾಸನೆ ಅದಕ್ಕೆ ಬಡಿಯತೊಡಗುತ್ತದೆ. ಅದು ತಲೆತಲಾಂತರದಿಂದ ವಂಶವಾಹಿಗಳ ಮೂಲಕ ಕಂಡುಕೊಂಡ ಅದೃಶ್ಯ ಸತ್ಯ! ಈ ಚಿರಂತನ ಸತ್ಯದ ಅರಿವು ನರನಾಡಿಗಳಲ್ಲಿ ಅನುಭವ ಆಗತೊಡಗಿದಂತೆಯೇ ಆಹಾರದ ಪ್ರಮಾಣದ ಅಗತ್ಯತೆ ಕಡಿಮೆಯಾಗುತ್ತದೆ. ಜೀವಿ ಇನ್ನು ಮುಂದೆ ಎಷ್ಟು ದಿನ ಬದುಕಬೇಕೋ ಅಷ್ಟು ದಿನಕ್ಕೆ ಆಗುವಷ್ಟು, ಪೌಷ್ಟಿಕಾಂಶವಿರುವ ಅಥವಾ ಕನಿಷ್ಠ ಶಕ್ತತೆಯಿರುವ ಆಹಾರ ಸೇವಿಸಲಾರಂಭಿಸುತ್ತದೆ. ಇದು ಮರಗಿಡಗಳಲ್ಲಿ ಚೆನ್ನಾಗಿ ಅಭಿವ್ಯಕ್ತಗೊಳ್ಳುತ್ತದೆ. ಹೊಸ ಚಿಗುರು ಮೂಡಿದಂತೆಲ್ಲಾ ಟೊಂಗೆಯ ಕೊನೆಯ ಎಲೆ ಆಹಾರ ಸ್ವೀಕಾರವನ್ನು ನಿರಾಕರಿಸಿ ಅಂತ್ಯವನ್ನು ಆಹ್ವಾನಿಸಲು ಸಿದ್ಧವಾಗುತ್ತದೆ. ಪ್ರಾಣಿಗಳೂ ಹೀಗೆಯೇ ತಮ್ಮ ವಂಶದ ಕುಡಿಗಳ ಬೆಳವಣಿಗೆಯನ್ನು ಮತ್ತು ಆರೋಗ್ಯವನ್ನು ನೋಡಿ ಸಂಭ್ರಮಿಸುತ್ತವೆ.

ಎಪ್ಪತ್ತು ದಾಟಿದ ವಯಸ್ಕರೊಬ್ಬರು, ಚೆನ್ನಾಗಿ ತಿಂದುಂಡು ಬಾಳಿದವರು, ಭೋಜನ ಭೋಗಕ್ಕೆ ಹೆಸರಾದವರು. ಅವರು ಒಮ್ಮೆ ಹೀಗೆ ಹೇಳಿದರು : 'ನನಗೆ ಈಗ ತಿನ್ನಬೇಕು ಎಂದನ್ನಿಸುವುದೇ ಇಲ್ಲ. ಆದರೆ ನನ್ನ ಮೊಮ್ಮಕ್ಕಳು ತಿನ್ನುವುದನ್ನು ನೋಡಿದರೆ ಅಪಾರ ಆನಂದ, ತೃಪ್ತಿಯಾಗುತ್ತದೆ'. ಇದು ಬದುಕಿನ ರಹಸ್ಯ! ಜೀವಿಗೆ ನಿಗೂಢವಾಗಿ ದತ್ತವಾದ ಅಂತಿಮ ಸತ್ಯ! ಬದುಕಿನ ನಿರಂತರವಾಗಿ ಕಾಯ್ದುಕೊಳ್ಳುವ ಪ್ರಕೃತಿವಿಸ್ಮಯ!

೦೮-೧೧-೨೦೧೨

# ಬಂಧನ ಪ್ರಿಯ ಜೀವಿ!

ಬಿಡುಗಡೆಯ ಬಯಕೆ ಸಕಲ ಜೀವಿಗಳ ಸಹಜ ಆಸೆ. ತನ್ನ ಸುತ್ತ ವ್ಯವಸ್ಥೆ ಕಟ್ಟಿರುವ ಭೌತಿಕ - ಮಾನಸಿಕ ಸಂಬಂಧವಾದ ಎಲ್ಲ ಬಗೆಯ ಕಟ್ಟುಗಳನ್ನು ಕಿತ್ತು ಬಿಸಾಡಿ ಬಯಲಲ್ಲಿ ಬಯಲಾಗುವ ಹೆಬ್ಬಯಕೆಯತ್ತ ಸಾಗುವುದೇ ಜೀವದ ಗುರಿ. ಬಹುಶಃ ಎಲ್ಲ ತತ್ವ ಸಿದ್ಧಾಂತಗಳು ಈ ದಾರಿಯಲ್ಲೇ ಯೋಚಿಸುತ್ತವೆ. ಮತಧರ್ಮಗಳ ಹಿಡಿತದಿಂದ ಬಿಡಿಸಿಕೊಂಡು, ಸಂಸಾರದ ಕಟ್ಟುಗಳನ್ನು ಕಿತ್ತುಕೊಂಡು ಸತ್ಯದ ಶೋಧದ ಬೆನ್ನುಬಿದ್ದ ಸಂತರ - ಅಧ್ಯಾತ್ಮ ಚಿಂತಕರ ಜೀವನಗಾಥೆಗಳು ಈ ಸತ್ಯವನ್ನೇ ಬಯಲು ಮಾಡುತ್ತವೆ. ಅಡಿಗರು ಹೇಳುವಂತೆ 'ಇರುವುದನ್ನು ಬಿಟ್ಟು ಇರದದುರ ಕಡೆ' ಸದಾ ತುಡಿಯುವ ಜೀವ ಚಿತ್ತವೃತ್ತಿಯ ಮುಖ್ಯ ಗುಣವೇ ಸ್ವಾತಂತ್ರ್ಯವನ್ನು ಬಯಸುವುದು.

ಆದರೆ ಈ ಸ್ವಾತಂತ್ರ್ಯ ಸ್ಥಾಪಿತ ಹಿಡಿತಗಳ ಹಿತಾಸಕ್ತಿಗೆ ಭಂಗವನ್ನುಂಟು ಮಾಡುತ್ತದೆ. ಸ್ಥಾಪಿತ ಶಕ್ತಿಗಳನ್ನು ಪ್ರಶ್ನೆ ಮಾಡುವುದು, ಅದರ ನಿಯಮ ಆಚಾರ ಸಂಪ್ರದಾಯಗಳನ್ನು ಉಲ್ಲಂಘಿಸುವುದು; ಆ ಶಕ್ತಿಗಳ ಹಿಡಿತವನ್ನು ಸಡಿಲಗೊಳಿಸುವುದು - ಮುಂತಾದ ಸಾಮಾಜಿಕ ಚಲನೆ ಮೂಡಿಸುವಂಥ ಕ್ರಿಯೆಗಳಿಗೆ ಬೀಜ ಹಾಕುವ ಸ್ವೋಪಜ್ಞ ಕೆಲಸವನ್ನು ಈ ಸ್ವಾತಂತ್ರ್ಯ ತಂದುಬಿಡುತ್ತದೆ. ಆ ಕಾರಣಕ್ಕೋಸ್ಕರವೇ ಸಾಮಾಜಿಕ ಸ್ಥಾಪಿತ ಶಕ್ತಿಗಳಾದ ಪ್ರಭುತ್ವ ಮತ್ತು ಮತೀಯ ಶಕ್ತಿಗಳು ತಮ್ಮ ಅಗೋಚರ - ಗೋಚರ ನಿಬಂಧನೆಗಳಿಂದ ಕಠೋರವಾದ ಕಬಂಧ ಬಾಹುಗಳ ಮೂಲಕ ಜೀವ ಜಗತ್ತನ್ನು ಕಟ್ಟಿಹಾಕುತ್ತದೆ. ಆ ಉಸಿರುಗಟ್ಟಿಸುವ ಬಂಧನದಿಂದ ಹೊರಬರಲಾರದೆ ಜೀವ ನಲುಗುತ್ತದೆ. ಆ ಬಂಧನದ ಬದುಕಿನಲ್ಲಿ ತಾನು - ತನ್ನತನವೆಂಬ ಸ್ವಂತಿಕೆಯನ್ನು ಇಲ್ಲವಾಗಿಸಿಕೊಂಡು ಒಂದು ಬಗೆಯ ಗುಲಾಮಗಿರಿಯ ಜೀವನ ವಿಧಾನಕ್ಕೆ ಒಗ್ಗಿ ಹೋಗುತ್ತದೆ. 'ಬದುಕುವ ಬಗೆಯೇ ಹೀಗೆ' ಎಂಬ ಅಲ್ಪ ತೃಪ್ತಿಯಲ್ಲಿ ಬದುಕು ಸಾಗಿಸಲು ಕಲಿಯುತ್ತದೆ. ಅಥವಾ ಗುಲಾಮಗಿರಿಯ ಕಠೋರ ಕ್ರೌರ್ಯವನ್ನು ನಿರಾಕರಿಸಿ ಸಿಡಿಯುವಂಥ ಸಮಯಕ್ಕಾಗಿ ಕಾಯತೊಡಗುತ್ತದೆ.

ಒಟ್ಟಾರೆ ಅಸಹನೀಯ ಕುದಿತದ ಸ್ಫೋಟಕ್ಕೆ ಅಭಿವ್ಯಕ್ತಿ ನೀಡುವಂತಹ ವ್ಯಕ್ತಿ ಸೂಕ್ತ ಸಮಯವೊಂದರಲ್ಲಿ ಕಾಣಿಸಿಕೊಳ್ಳುತ್ತಾನೆ. ಆದರೆ ಅವನು ಸ್ವಯಂಭುವಲ್ಲ; ಅವತಾರ ಪುರುಷನಲ್ಲ; ದೇವದೂತನೂ ಅಲ್ಲ. ಅವನು ಶತಮಾನಗಳ ಮೌನದ, ತುಳಿತಕ್ಕೊಳಗಾದ, ಬಂಧಿಸಲ್ಪಟ್ಟ ಜನ ಸಮೂಹದ ಸ್ವಾತಂತ್ರ್ಯ ಬಯಕೆಯ ಅಭಿವ್ಯಕ್ತಿ ಸ್ವರೂಪದ ಒಟ್ಟು ಧ್ವನಿ. ಆ ಧ್ವನಿಯ ಮೂಲಕ ಚಿಂತನೆಯ ಹೊಸತನ ಚಿಗುರೊಡೆಯುತ್ತದೆ; ಹೊಸ ಜೀವನ ವಿಧಾನ

ರೂಪು ತಳೆಯುತ್ತದೆ. ಅದರ ಆಧಾರದ ಮೇಲೆ ಹೊಸ ಹೊಸ ಸಂಬಂಧಗಳು ಸೃಷ್ಟಿಗೊಳ್ಳುತ್ತವೆ.

ಇಂಥ ಒಡೆದು ಕಟ್ಟುವ ಕ್ರಿಯೆಗಳು ಕಾಲಕಾಲಕ್ಕೆ ಆಗುತ್ತಿರುವುದೇ ಒಂದು ಚಲನಶೀಲ ಸಮಾಜದ ವಿಕಾಸದ ಸ್ಥಿತಿ ನಿರಂತರವಾಗಿರಲು ಸಾಧ್ಯವಾಗಿದೆ.

ಮಾನವನ ನಿರಂತರ ಬಂಧನದಿಂದ ಬಿಡುಗಡೆಯಾಗುವ ಬಯಕೆಯ ನಡುವೆಯೂ ಒಂದು ಬಗೆಯ ತನ್ನನ್ನು ತಾನು ಕೂಡಿಹಾಕಿಕೊಳ್ಳುವಂಥ ಅಥವಾ ಕಟ್ಟಿಹಾಕಿಕೊಳ್ಳುವ ಪ್ರವೃತ್ತಿಯೂ ಅವನಲ್ಲಿ ಕೆಲಸ ಮಾಡುತ್ತಾ ಬಂದಿರುವುದನ್ನು ಗಮನಿಸಬಹುದು. ಇದು ಪಾರಮಾರ್ಥಿಕ ಅಥವಾ ಸೈದ್ಧಾಂತಿಕ ನೆಲೆಯ ಬಂಧನವಲ್ಲ. ಇದು ಸರ್ವತ್ರ ಶುದ್ಧ ಲೌಕಿಕ ನೆಲೆಯದ್ದೂ, ವ್ಯಾವಹಾರಿಕ ನೆಲೆಯದ್ದೂ ಆಗಿದೆ. ಇದು ಸಂಪ್ರದಾಯ - ಮತ ಧರ್ಮಾಧಾರಿತ ಕಟ್ಟುಪಾಡುಗಳಿಗೆ ಸಂಬಂಧಿಸಿದ್ದಲ್ಲ, ಒಂದರ್ಥದಲ್ಲಿ ಪ್ರವೃತ್ತಿಯ ಆಜುಬಾಜುಗಳಲ್ಲಿ ವಿಹರಿಸುವ ಭಾವಸಂಬಂಧೀ ನೆಲೆಗಳಲ್ಲಿ ಉತ್ಪನ್ನವಾದ ಬಂಧನದ ಬಯಕೆ, ಪ್ರೀತಿ! ಇದು ಜೀವಿಯೊಂದು ತನ್ನ ಜೀವಕ್ಕಾಗಿ ಮತ್ತೊಂದು ಜೀವ ಸಂಬಂಧದೊಡನೆ ಕಟ್ಟಿ ಹಾಕಿಕೊಳ್ಳುವ ಕ್ರಿಯೆ. ಅತ್ಯಂತ ವಿಸ್ಮಯವೂ ನಿಗೂಢವೂ ಆದ ಪ್ರಕೃತಿಯ ಮತ್ತು ಆ ಪ್ರಕೃತಿಯ ಇತರ ಜೀವಿಗಳ ಬಗೆಗಿರಬಹುದಾದ ಭಯದ ಕಾರಣದಿಂದ ಕಟ್ಟಿಕೊಳ್ಳುವ ಪಂಜರ!

ವ್ಯಕ್ತಿ ತನ್ನ ಸಂಸಾರದಲ್ಲಿ ತನ್ನನ್ನು ಬಂಧಿಸಿಕೊಳ್ಳಲು ಬಯಸುತ್ತಾನೆ; ತನ್ನ ಭಾಷೆ - ಸಂಸ್ಕೃತಿಯೊಡನೆ ಬೆಸೆದುಕೊಳ್ಳಲು ಬಯಸುತ್ತಾನೆ. ಇನ್ನೂ ಪ್ರವೃತ್ತಿ ಮಟ್ಟದಲ್ಲಿ ಪ್ರಿಯಕರ ಪ್ರೇಯಸಿಯ, ಪ್ರೇಯಸಿ ಪ್ರಿಯಕರನ ಬಂಧನವನ್ನು ಅತ್ಯಂತ ಪ್ರೀತಿಯಿಂದ ಬಯಸುತ್ತಾನೆ/ಳೆ. ಮಳೆ ಬಿಸಿಲು ಗಾಳಿಗಳಿಂದ, ದುಷ್ಟ ಮೃಗಗಳಿಂದ, ಕಳ್ಳಕಾಕರಿಂದ ತನ್ನನ್ನು ಮತ್ತು ತನ್ನ ಕುಟುಂಬವನ್ನು ರಕ್ಷಿಸಿಕೊಳ್ಳಲು ಮನೆಯೆಂಬ ಬಂಧನಾ ರೂಪದಲ್ಲಿರಲು ಬಯಸುತ್ತಾನೆ. ಅದೇ ಸ್ವರೂಪ ವಿಸ್ತಾರಗೊಂಡು ರಾಜ್ಯ/ದೇಶಗಳ ಗಡಿಗಳಲ್ಲಿ ಅಪಾರ ಸೈನ್ಯವನ್ನು ಪೇರಿಸಿ ಬಂಧನದ ರೂಪು ಪಡೆಯುತ್ತದೆ. ಇವೆಲ್ಲಾ ವ್ಯಕ್ತಿ ಮತ್ತು ಸಮಾಜ ಸುರಕ್ಷಿತವಾಗಿ ಬದುಕಲು ಏರ್ಪಡಿಸಿಕೊಂಡಿರುವ ವ್ಯವಸ್ಥೆ ಮಾತ್ರ. ನಿಜವಾದ ಅರ್ಥದ ಬಂಧನಗಳಲ್ಲಿ ಜೀವವನ್ನು, ಮಾನವತ್ವವನ್ನು ತುಳಿಯುವುದೇ ನಿಜವಾದ ಬಂಧನ.

೨೨-೧೧-೨೦೧೨

# ಶ್ರೀರಾಮ ಕೆಟ್ಟ ಗಂಡ!

ಶ್ರೀರಾಮ ಮರ್ಯಾದಾ ಪುರುಷೋತ್ತಮ. ಪಿತೃವಾಕ್ಯ ಪರಿಪಾಲನೆಗಾಗಿ ವನವಾಸಕ್ಕೆ ಹೋದ. ಒಳ್ಳೆಯ ಪ್ರಜಾ ಪರಿಪಾಲಕ, ಪ್ರಜೆಗಳ ಮಾತಿಗೆ ಗೌರವ ನೀಡುತ್ತಿದ್ದ ಅಥವಾ ಅವರ ಅಡ್ಡ ಮಾತಿಗೆ ಹೆದರುತ್ತಿದ್ದ. ಸಮುದಾಯದ ಅಭಿಪ್ರಾಯವನ್ನು ಮಾನ್ಯ ಮಾಡುತ್ತಿದ್ದ. ಅವನು ಪ್ರಜಾಸತ್ತೆಯನ್ನು ನಿಜವಾದ ಅರ್ಥದಲ್ಲಿ ಪ್ರತಿನಿಧಿಸುತ್ತಿದ್ದ ಎಂದು ಭಾವಿಸಬಹುದು. ಆದರೆ ಅವನು ನಿಜವಾಗಿಯೂ ಪ್ರಜಾಪ್ರತಿನಿಧಿಯಾಗಿದ್ದನೋ ಅಥವಾ ಅವನು ತನ್ನ ಕಾಲಘಟ್ಟದ ಧಾರ್ಮಿಕ ಕಟ್ಟುಪಾಡುಗಳನ್ನು ವಿಧಿಸುತ್ತಿದ್ದನೋ ಎಂಬುದು ಎಲ್ಲಿಯೂ ಸ್ಪಷ್ಟವಾಗುವುದಿಲ್ಲ. ವಾಲ್ಮೀಕಿ ರಾಮಾಯಣದಲ್ಲಿ ಪ್ರಜಾದನಿಯೆಂಬುದು ಸಮುದಾಯದ ಒಟ್ಟಾರೆ ದನಿಯಾಗಿ ಅಭಿವ್ಯಕ್ತವಾಗುವುದಿಲ್ಲ. ಯಾವುದೋ ಒಂದು ಏಕ ದನಿಯನ್ನು ಇಂದಿನ ವ್ಯಾಖ್ಯಾನಕಾರರು ಒಟ್ಟಾರೆ ಪ್ರಜಾಸತ್ತೆಯ ದನಿಯೆಂದು ಭಾವಿಸಿದಂತೆ ಕಾಣುತ್ತದೆ. ಆ ಏಕದನಿಯು ಕೂಡ ವ್ಯಕ್ತಿ ನೆಲೆಯ ಮಾನವೀಯ ಮೂಲದ್ದಲ್ಲ. ಅದು ಧಾರ್ಮಿಕ ಕಟ್ಟುಪಾಡುಗಳು ವಿಧಿಸಿದ ನಿಯಮಗಳ ಮಾತಿನಂತೆ ತೋರುತ್ತದೆ.

ವ್ಯಕ್ತಿಯ ವೈಯಕ್ತಿಕ ಹಕ್ಕು ಮಾನವ ಹಕ್ಕುಗಳು ಒಂದು ಪ್ರಮುಖ ಅಂಶ. ಪ್ರಜಾಸತ್ತೆಯ ಮುಖ್ಯ ಆತ್ಮವೇ ವ್ಯಕ್ತಿ ಸ್ವಾತಂತ್ರ್ಯ ಮತ್ತು ಅದರ ರಕ್ಷಣೆ. ಸಮುದಾಯದ ಆಶಯ ಅಥವಾ ಹಿತಕ್ಕಾಗಿ ಯಾರನ್ನೋ ಅವರ ಇಚ್ಛೆಗೆ ವಿರುದ್ಧವಾಗಿ ಬಲಿಕೊಡುವುದು ಅಥವಾ ಅವರ ಬದುಕಿನ ಸಮಸ್ತ ಹಕ್ಕನ್ನು ಕಿತ್ತುಕೊಳ್ಳುವುದು ಜೀವವಿರೋಧಿಯಾದ ನಡೆಯಾಗುತ್ತದೆ. ಜನಪದ ಕಥನಗೀತೆ 'ಕೆರೆಗೆಹಾರ'ದ ಭಾಗೀರತಿಯ ಬಲಿ; ಸೀತೆಯ ಅಗ್ನಿಪರೀಕ್ಷೆ ಅಥವಾ ಅವಳನ್ನು ಅವಳ ಗಮನಕ್ಕೆ ತರದ ಹಾಗೆ ಕಾಡಿಗೆ ಅಟ್ಟಿ ಅನಾಥಳನ್ನಾಗಿ ಮಾಡುವುದು ಒಂದೇ ಬಗೆಯ ಕ್ರೌರ್ಯದ ನೆಲೆಯಿಂದ ಮೂಡಿದ ಪ್ರಸಂಗಗಳೇ. ಈ ಬಗೆಯ ಕ್ರಿಯೆಗಳು ಸರ್ವಾಧಿಕಾರದ ಗಂಡು ಮನಸ್ಥಿತಿಯ ಮೌಲ್ಯಗಳು. ಇಂಥ ಕ್ರೂರ ಮೌಲ್ಯಗಳನ್ನು ತ್ಯಾಗ, ಬಲಿದಾನ, ಸಮುದಾಯಹಿತವೆಂಬ ಬಣ್ಣದ ವೈಭವದ ಮಾತುಗಳಿಂದ ಚರಿತ್ರೆಯುದ್ದಕ್ಕೂ ವರ್ಣಿಸಿ ಭಾರತೀಯ ಮನೋಸ್ಥಿತಿಯನ್ನು ಚಲನರಹಿತವನ್ನಾಗಿಸಲು ಪ್ರಯತ್ನಿಸಲಾಗಿದೆ.

ಸೀತೆಯೆಂದರೆ ವಸುಂಧರೆ. ಭೂಮಿಯಲ್ಲಿ ದೊರೆತವಳು. ಭೂಮಿಯಲ್ಲಿ ಜನಿಸಿ ಕೊನೆಗೆ ಆ ಭೂಮಿಯಲ್ಲೇ ಅಂತ್ಯ ಕಂಡವಳು. ಭೂಮಿಯಿಂದ ಬಂದು ಮತ್ತೆ ಆ ಭೂಮಿಯಲ್ಲಿ ಐಕ್ಯಳಾಗುವವರೆಗಿನ ಅವಳ ಜೀವಿತ ಎಂದಾದರೂ ಸುಖ ಕಂಡಿತೆ? ಅವಳು ಜನಕನ ಅಕ್ರಮ ಸಂಬಂಧದ ಫಲವಾಗಿರಬೇಕು. ಹೀಗಾಗಿ ಅವಳ ಬಾಲ್ಯ ಮತ್ತು ಯೌವ್ವನದ ದಿನಗಳು ತನ್ನ

ಇತರ ಸಕ್ರಮಫಲಿತ ಸೋದರಿಯರಂತೆ ಸುಖ ಕಂಡಿರುವುದು ಅನುಮಾನ. ಮಾನವ ಸಹಜವಾದ ಮೂದಲಿಕೆಗಳ ಅವಮಾನದಿಂದ ಅವಳು ನರಳಿರಬಹುದು. ಬಹುಶಃ ಅವಳ ಜೀವತಾವಧಿಯಲ್ಲಿ ಸುಖ ಕಂಡಿದ್ದರೆ - ಅದು ಉತ್ತರ ರಾಮಾಯಣದಲ್ಲಿ ಬರುವ ಕಥಾನಕದ ಅವಳ ತಾಯ್ತನದ ಅವಧಿಯಲ್ಲಿ! ವಾಲ್ಮೀಕಿ ಆಶ್ರಮದ ಆಶ್ರಯದಲ್ಲಿ ಅವಳಿ ಮಕ್ಕಳಿಗೆ ಜನ್ಮ ನೀಡಿ ಗಂಡ ಮತ್ತು ಅವನ ಸುತ್ತಲಿನ ಕಟ್ಟುಪಾಡುಗಳ ಬಂಧನಗಳಿಲ್ಲದೆ ಪ್ರಕೃತಿಯ ಮಡಿಲಲ್ಲಿ ಮಕ್ಕಳನ್ನು ಬೆಳೆಸಿದ ತಾಯ್ತನದ ಅಮೂಲ್ಯ ಅವಧಿ ಅದು. ಅದು ಕೂಡ ಕ್ಷಣಿಕವಾದುದ್ದೇ. ಶ್ರೀರಾಮನ ಅಶ್ವಮೇಧದ ಕುದುರೆ ಆಶ್ರಮಕ್ಕೆ ಕಾಲಿಟ್ಟ ಕೂಡಲೆ ಅವಳ ನೋವಿನ ಸರಪಳಿ ಮತ್ತೆ ಬಲವಾಗಿ ಅವಳನ್ನು ಸುತ್ತಿಕೊಳ್ಳುತ್ತದೆ. ಲಂಕೆಯಲ್ಲಿ ಶ್ರೀರಾಮ ತನ್ನ ಗೌರವಕ್ಕಾಗಿ ನಡೆಸಿದ ಯುದ್ಧದ ಫಲಿತ ನೋವು. ಈ ಆಶ್ರಮದಲ್ಲಿ ಯಾಗವೆಂಬ ಅಹಂಕಾರ ತಣಿಸಲು ನಡೆಸುತ್ತಿರುವ ಯುದ್ಧದ ಫಲಿತವು ಅವಳಿಗೆ ಬದುಕು ಸಾಕು ಸಾಕೆನ್ನಿಸುತ್ತದೆ. ಮಾನವನ ಅಧಿಕಾರಮೂಲ ಅಹಂಕಾರ ರೂಪವಾದ ಯುದ್ಧವೆಂಬ ಕ್ರೌರ್ಯ, ಸಂಬಂಧಗಳನ್ನೇ ತೃಣವಾಗಿ ಕಾಣುವುದನ್ನು ಅವಳು ಸ್ವತಃ ಅನುಭವಿಸಿದಳು. ಅವಳ ಈ ವಾಸ್ತವ ಕಟು ಅನುಭವ ಅವಳಿಗೆ 'ಬದುಕು ಸಾಕು ಮಾಡು' ಎಂದು ಹೇಳಿರಬೇಕು. ಅದಕ್ಕೆ ಅವಳು ಭೂಮಿಗೆ ಮತ್ತೆ ಮೊರೆ ಹೋಗಿ ಅಂತ್ಯ ಕಂಡಳು.

ನಮ್ಮ ಮರ್ಯಾದಾ ಪುರುಷೋತ್ತಮ ಸೀತೆಯನ್ನು ಅಂತರಾಳದಿಂದ ಪ್ರೀತಿಸಿದಂತೆ ಎಲ್ಲೂ ಗೋಚರಿಸುವುದಿಲ್ಲ. ಸ್ವಯಂವರದಲ್ಲಿ ಗೆದ್ದ ವಸ್ತು; ವಂಶ ಮುಂದುವರಿಸಲು ಬೇಕಾದ ಸಾಧನ; ಮನೆತನದ ಅಥವಾ ಸಮಾಜದ ತೃಪ್ತಿಗೆ ತ್ಯಾಗ ಮಾಡಬಹುದಾದ ಒಂದು ಜೀವವಾಗಿ ಮಾತ್ರ ಅವನಿಗೆ ಸೀತೆ ಕಂಡಿದ್ದಾಳೆ. ಅವಳು ಕೂಡ ರಕ್ತಮಾಂಸ ತುಂಬಿದ, ಮನಸ್ಸು ಭಾವ ಬುದ್ಧಿಗಳಿಂದ ತುಂಬಿದ ಜೀವ; ಅವಳಿಗೆ ಕಾಮನೆಗಳಿದ್ದವು, ಆಸೆಗಳಿದ್ದವು, ಅಭಿಪ್ರಾಯಗಳಿದ್ದವು ಎಂಬುದನ್ನು ಅವನು ಅರ್ಥ ಮಾಡಿಕೊಂಡಂತೆ ಭಾಸವಾಗುವುದಿಲ್ಲ. ವಾಲ್ಮೀಕಿಯ ಅನಂತರ ಬಂದ ನಮ್ಮ ದೇಸಿ ಕವಿಗಳಾದ ನಾಗಚಂದ್ರ, ಲಕ್ಷ್ಮೀಶ ಮತ್ತು ಕುವೆಂಪು ಶ್ರೀರಾಮನಲ್ಲಿ ಮನುಷ್ಯತ್ವದ ಅಲೆಗಳನ್ನು ತುಂಬಲು ಯತ್ನಿಸಿದರು, ಅಷ್ಟೆ.

೦೬-೧೨-೨೦೧೨

# ನಾವು ಸುಳ್ಳನ್ನು ಪ್ರೀತಿಸುತ್ತೇವೆ!

ಈ ಮಾತು ಅಕ್ಷರಸಃ ಸತ್ಯ! ಈ ಮಾತನ್ನು ಈಗ ಯಾರೂ ಹೊಸತಾಗಿ ಹೇಳುತ್ತಿಲ್ಲ. ಮನುಷ್ಯನಿಗೆ ಜ್ಞಾನವೆಂಬುದು ಅನುಭವಜನ್ಯವಾದಾಗಿನಿಂದಲೂ ತಿಳಿದವರೆನ್ನಿಸಿಕೊಂಡವರು ಹೇಳಿಕೊಂಡು ಬರುತ್ತಿರುವ ಮಾತು. ಅಂಥ ಅನುಭವ ಕಂಡುಂಡ ಸಂತ ಸಜ್ಜನರು ಕೂಡ ಸುಳ್ಳನ್ನು ಪ್ರೀತಿಸುವುದರಿಂದ ಸಂಪೂರ್ಣ ದೂರವಿದ್ದರು ಎಂದು ಹೇಳಲಾಗದು. ಬಹಿರಂಗವಾಗಿ ಅದನ್ನು ನಿರಾಕರಿಸಿದಂತೆ ನಟಿಸಿದರೂ ಅಂತರಂಗದಲ್ಲಿ ಅದರ ಮೋಹದ ಮೋಡಿಗೆ ಕ್ವಚಿತ್ತಾದರೂ, ಕೆಲವು ಕ್ಷಣವಾದರೂ ಒಳಗಾಗಿದ್ದರೆ ಆಶ್ಚರ್ಯವಿಲ್ಲ. ಏಕೆಂದರೆ ತನ್ನಲ್ಲಿಲ್ಲದ, ಆದರೆ ತಾನು ಅಪರೂಪವೆಂದೂ ಅಸಾಧ್ಯಸಾಧಕವೆಂದೂ ಭಾವಿಸುವ ಗುಣವೊಂದನ್ನು ತಮ್ಮಲ್ಲಿದೆಯೆಂದು ತಮ್ಮೆದುರಿಗೆ ಅಥವಾ ಇತರರೆದುರಿಗೆ ಬೇರೆಯವರು ಬಣ್ಣಿಸಿದಾಗ ಮನಸ್ಸು ಖುಷಿಯಿಂದ ತುಸು ಅರಳುತ್ತದೆ. ಆದರೆ ಆ ವ್ಯಕ್ತಿ ಚಿಂತಕನೂ ವಿವೇಚನಾ ಶಕ್ತಿಯುಳ್ಳವನೂ ಆಗಿದ್ದವನಾದರೆ ಆತ್ಮಶೋಧನೆಗೆ ತೊಡಗಿ ಎಚ್ಚೆತ್ತುಕೊಳ್ಳುತ್ತಾನೆ. ಸಾಮಾನ್ಯನಾದರೆ ಅದನ್ನೇ ಸತ್ಯವೆಂದು ತಿಳಿದು ಅಧಃಪತನದ ಹಾದಿ ಹಿಡಿಯುತ್ತಾನೆ.

ವ್ಯಕ್ತಿತ್ವ ಪೊಳ್ಳಾದಷ್ಟು ಸುಳ್ಳು ಮತ್ತು ಅದು ಸೃಷ್ಟಿಸುವ ಪ್ರಪಂಚ ನಮಗೆ ಪ್ರಿಯವಾಗುತ್ತದೆ. ನಮ್ಮನ್ನು ಸದಾ ಹೊಗಳುವವರ ಒಂದು ವೃತ್ತವನ್ನು ನಮ್ಮ ಸುತ್ತ ನಿರ್ಮಿಸಿಕೊಳ್ಳುತ್ತೇವೆ. ಅಂಥವರು ನಮ್ಮ ಆತ್ಮೀಯರಾಗಿರುತ್ತಾರೆ; ಅಂಥವರಿಗೆ ನಾವು ಶಕ್ತಿಮೀರಿ ಸಹಾಯ ಮಾಡುತ್ತೇವೆ. ಅವರು ಸುಖವಾಗಿರುವಂತೆ ನೋಡಿಕೊಳ್ಳುತ್ತೇವೆ. ಅವರ ಅಂತರಂಗದ ಮರ್ಮವನ್ನು ಅರಿಯಲು ವಿಫಲರಾಗುತ್ತೇವೆ. ಅಂಥವರು ಅಧಿಕಾರ - ಹಣ - ಅಂತಸ್ತುಗಳನ್ನು ನೋಡಿ ತಮ್ಮ ನಿಷ್ಠೆಯನ್ನು ಬದಲಿಸುತ್ತಾರೆಂಬ ಲೋಕಸತ್ಯವನ್ನು ಅರಿಯಲು ವಿಫಲರಾಗುತ್ತೇವೆ. ಅವರು ಸರಿಯಾದ ಸಂದರ್ಭದಲ್ಲಿ - ಕೈ ಕೊಟ್ಟಾಗ ವಿಹ್ವಲರಾಗುತ್ತೇವೆ; ಸಿಡಿಮಿಡಿಗೊಂಡು ಲೋಕವೇ ದ್ರೋಹಿಗಳಿಂದ ತುಂಬಿದೆಯೆಂದು ಕೋಪಗೊಳ್ಳುತ್ತೇವೆ. ಏಕೆಂದರೆ ನಾವು ಸತ್ಯವನ್ನು ಅರಿಯಲು ವಿಫಲಗೊಂಡಿರುತ್ತೇವೆ. ಈ ಕಹಿ ಸತ್ಯವನ್ನು ಒಪ್ಪಿಕೊಳ್ಳಲು ಮನಸ್ಸು ಹಿಂಜರಿಯುತ್ತದೆ. ನಮ್ಮ ಮನಸ್ಸು ಮುಂಚಿನಿಂದ ಸರಿಯಾದ ವಿವೇಕ - ಗ್ರಹಿಕೆಗಳಿಂದ ಹದಗೊಂಡು ವಿಕಾಸಗೊಂಡಿರುವುದಿಲ್ಲ.

ನಮ್ಮ ಮನೆಗಳಲ್ಲೂ ಅಷ್ಟೆ. ನಿಷ್ಠುರವಾಗಿ ನೈತಿಕ ನಿಯಮಗಳನ್ನೂ ಕೌಟುಂಬಿಕ ಮೌಲ್ಯಗಳನ್ನೂ ಸತ್ಯಮಾರ್ಗದಲ್ಲಿ ಸಂಪಾದಿಸಿ ಕೈಬಾಯಿ ಶುದ್ಧವಾಗಿಟ್ಟುಕೊಂಡಿರುವ ಸದಸ್ಯರನ್ನು ಕೆಲಸಕ್ಕೆ ಬಾರದವರೆಂದೂ ಬದುಕು ಮಾಡಲು ಬಾರದವರೆಂದೂ ನಿರ್ಧರಿಸಿಬಿಡುತ್ತೇವೆ. ಅದೇ

ಚುರುಕಾಗಿ ಹಣ ಸಂಪಾದನೆ ಮಾಡುವ, ಅಡ್ಡ ಮಾರ್ಗದಲ್ಲಿ ಬದುಕು ನಿರ್ವಹಿಸುವ, ಸದಾ ಇತರ ಸದಸ್ಯರ ಮೇಲೆ ಚಾಡಿ ಹೇಳುವವರನ್ನು ನಾವು ಮೆಚ್ಚುತ್ತೇವೆ. ಇಂಥವರನ್ನು ಬದುಕು ಮಾಡುತ್ತಾರೆಂದೂ ಮನೆತನವನ್ನು ಬೆಳೆಸುತ್ತಾರೆಂದೂ ತೃಪ್ತಿಪಡುತ್ತೇವೆ. ಇವರು ನಮ್ಮ ಅಂತರಂಗದ ಕೂಟದ ಸದಸ್ಯರಾಗುತ್ತಾರೆ. ಈ ಪ್ರವೃತ್ತಿ ನಾವು ಕೆಲಸ ಮಾಡುವ ಕೆಲಸದ ತಾಣಗಳಲ್ಲೂ ಅನುರಣಿತವಾಗುತ್ತದೆ. ಇಂಥವರಿಂದ ನಮ್ಮ ಸ್ವಾರ್ಥ ಸಾಧನೆ ಸುಗಮವಾಗುತ್ತದೆ. ಇಂಥವರು ನಾವು ಸಾರ್ವಜನಿಕವಾಗಿ ಅಥವಾ ವೈಯಕ್ತಿಕ ನೆಲೆಗಳಲ್ಲಿ ಮಾಡಲಾಗದ, ಆದರೆ ನಮಗೆ ಅಗತ್ಯ ಆಗಬೇಕಾದ ಅನೈತಿಕ ಮಾರ್ಗದ ಕೆಲಸಗಳನ್ನು ಮಾಡಿಕೊಡುತ್ತಾರೆ. ನಮ್ಮ ಮುಂದೆ ಅವರು ಭ್ರಮೆಯ ಸೌಧವನ್ನು ನಿರ್ಮಿಸುತ್ತಾರೆ. ಅದರ ತುದಿಯ ಮೇಲೆ ಕೂರಿಸಿ ಹಾಡಿ ಹೊಗಳುತ್ತಾರೆ. ನಾವು ಸಂತೋಷದಿಂದ ಬೀಗುತ್ತೇವೆ; ಹುಸಿ ಸುಖದಲ್ಲಿ ಮುಳುಗಿ ತೇಲುತ್ತೇವೆ. ತೇಗುತ್ತೇವೆ. ಮುಂದೊಂದು ದಿನ ನಾವು ಮತ್ತು ನಮ್ಮ ಹುಸಿ ಸಮಾನ ಮನಸ್ಕರು ಸೇರಿ ನಿರ್ಮಿಸಿರುವ ಭ್ರಮಾ ಸೌಧ ಕುಸಿದು ಅದರ ಸಮೇತ ನಾವು ನಾಶವಾಗುತ್ತೇವೆ ಎಂಬ ಕಟು ಸತ್ಯವನ್ನು ಆ ಸಂದರ್ಭದಲ್ಲಿ ಅರಿಯಲು ವಿಫಲರಾಗುತ್ತೇವೆ. ಇದು ಜೀವನದ ವ್ಯಂಗ್ಯ!

ನಾವೆಂಥ ದಡ್ಡರೆಂಬುದು ನಮಗೆ ಚೆನ್ನಾಗಿಯೇ ತಿಳಿದಿರುತ್ತದೆ. ನಾವು ಓದುವ, ಕೇಳುವ ಅನೇಕ ಜಾಹೀರಾತುಗಳು ಸುಳ್ಳಿನ ಮುದ್ದೆಗಳೆಂದು ನಾವು ಅರಿತಿರುತ್ತೇವೆ. ಆದರೂ ನಮ್ಮೊಳಗಿರುವ ಅದ್ಯಾವುದೋ ಅವ್ಯಕ್ತ ಆಸೆ ಆ ಸುಳ್ಳುಗಳನ್ನು ನಂಬುವಂತೆ ಪ್ರೇರೇಪಿಸುತ್ತದೆ. ಆ ಸುಳ್ಳಿಗೆ ನಾವು ಮರುಳಾಗುತ್ತೇವೆ. ನಿಮ್ಮ ಬೋಡುತಲೆಗೆ ಈ ಔಷಧಿ ಬಳಸಿದರೆ ಕೂದಲು ಬರುತ್ತದೆ; ಈ ಶಕ್ತಿವರ್ಧಕದಿಂದ ನೀವು ತೆಳ್ಳಗಾಗುತ್ತೀರಿ / ದಪ್ಪಗಾಗುತ್ತೀರಿ; ಈ ಔಷಧಿಯಿಂದ ನಿಮ್ಮ ಪುರುಷತ್ವ ವೃದ್ಧಿಯಾಗುತ್ತದೆ; ಈ ಔಷಧಿಯಿಂದ ನೀವು ಎತ್ತರವಾಗುತ್ತೀರಿ..... ಇತ್ಯಾದಿ ಇತ್ಯಾದಿ ಸುಳ್ಳಿನ ಮಾತುಗಳು ನಮಗೆ ಪ್ರಿಯವಾಗುತ್ತವೆ. ಭಾರತೀಯರಿಗಂತು ಬೆಳ್ಳಗಾಗುವ ಕ್ರೀಮುಗಳೆಂದರೆ ಆಸೆಯಿಂದ ತೇಲುವಂತಾಗುತ್ತದೆ.

ಹೌದಲ್ಲವೆ? ನಮಗೆ ಸುಳ್ಳೆಂದರೆ ಪ್ರಿಯವಲ್ಲವೆ?

೨೦-೧೨-೨೦೧೨

# ಓ ಗಂಡಸೇ ನೀನೆಷ್ಟು ಒಳ್ಳೆಯವನು?

ಕಳೆದ ಶತಮಾನದ ಎಂಬತ್ತರ ದಶಕದಲ್ಲಿ ಕನ್ನಡದಲ್ಲಿ ಈ ಹೆಸರಿನ ಕಾದಂಬರಿಯೊಂದು ಪ್ರಕಟವಾಗಿತ್ತು. ಡಾ. ಎಂ.ಪಿ. ಉಮಾದೇವಿ ಬರೆದ ಅದು ಮೊದಲು 'ಮಯೂರ' ಮಾಸಪತ್ರಿಕೆಯಲ್ಲಿ ಒಂದೇ ಸಲಕ್ಕೆ ಕಿರುಕಾದಂಬರಿ ರೂಪದಲ್ಲಿ ಬೆಳಕು ಕಂಡಿತ್ತು. ಆ ಕಾಲಘಟ್ಟದಲ್ಲಿ ಕಾಲೇಜು ಕ್ಯಾಂಪಸ್ಸುಗಳಲ್ಲಿ ಗಂಡುಡುಗರನ್ನು ಹೀಗೆ ರೋಮ್ಯಾಂಟಿಕ್ ಆಗಿ ವರ್ಣಿಸುವ ಆರಾಧಿಸುವ ಅಲೆ ಹುಡುಗಿಯರಲ್ಲಿ ತೇಲುತ್ತಿತ್ತು. ಈ ಮಾತನ್ನು ಹೆಂಗಸರು ಮಾತ್ರ ಹೇಳಲು ಸಾಧ್ಯ ಎಂಬುದು ದುರಂತ ವ್ಯಂಗ್ಯ ಅಥವಾ ಸತ್ಯ ಅಲ್ಲವೆ? 'ಓ ಗಂಡಸೇ ನೀನೆಷ್ಟು ಒಳ್ಳೆಯವನು?' ಎಂದು ಒಬ್ಬ ಗಂಡಸು ಇನ್ನೊಬ್ಬ ಗಂಡಸಿಗೆ ಹೇಳಬಲ್ಲನೆ? ಅವನು ಇನ್ನೊಬ್ಬ ಗಂಡಸನ್ನು ಮೆಚ್ಚಬಹುದು.

ಗೌರವಿಸಬಹುದು, ಪೂಜಿಸಬಹುದು, ನಾಯಕನೆಂದು ಕರೆದು ಗುಲಾಮನಂತೆ ನಡೆದುಕೊಳ್ಳಬಹುದು. ಅವನ ಮೇಲಿನ ಅಭಿಮಾನದಿಂದ ಅವನ ಪರವಾಗಿ ಗುಂಪುಕಟ್ಟಿ ಎಂಥ ಬಗೆಯ ನೈತಿಕ-ಅನೈತಿಕ ಕೃತ್ಯವನ್ನಾದರೂ ನಡೆಸಬಹುದು. ಜೈಲಿಗೂ ಹೋಗಬಹುದು, ಪ್ರಾಣವನ್ನು ಸಹ ಬಿಡಬಹುದು. ಆದರೆ ರೋಮ್ಯಾಂಟಿಕ್ ಆಗಿ 'ಅಪ್ಪಿ'ಕೊಳ್ಳುವ ಮಟ್ಟಿಗೆ ಹೋಗಲಾರ.

ಆದರೆ ಹೆಂಗಸು ಗಂಡಸನ್ನು ಅವನು ಎಂಥ ಕ್ರೂರಿ, ಅಸಮಾನ ಮನಸ್ಸುಳ್ಳವನು ಎಂಬುದನ್ನು ಚರಿತ್ರೆಯುದ್ದಕ್ಕೂ ಕಂಡಿದ್ದಾಳೆ. ಅವನಿಂದ ಭಯಂಕರ ಹಲ್ಲೆಗೆ ತುತ್ತಾಗಿದ್ದಾಳೆ. ಅವನ ಶೋಷಣೆಯನ್ನು, ಕ್ರೌರ್ಯವನ್ನು ಅನುಭವಿಸಿದ್ದರೂ ಅವನನ್ನು ತನ್ನ ಸಂಗಾತಿಯನ್ನಾಗಿ ತನುಮನಗಳ ಮೂಲಕ ಸ್ವೀಕರಿಸುತ್ತಾ ಬಂದಿದ್ದಾಳೆ. ಅವನ ಕ್ರೌರ್ಯವನ್ನು ಕ್ಷಮಿಸುತ್ತಾ 'ಅಹಾ! ನೀನೆಷ್ಟು ಒಳ್ಳೆಯವನು!' ಎಂದು ಉದ್ಗಾರ ತೆಗೆಯುತ್ತಲೇ ಇದ್ದಾಳೆ. ಬಹುಶಃ ಮಾತೃಪ್ರಧಾನ ವ್ಯವಸ್ಥೆ ಮಾಯವಾಗಿ ಪುರುಷಪ್ರಧಾನ ವ್ಯವಸ್ಥೆ ಜಾರಿಗೆ ಬಂದ ಶತಶತಮಾನಗಳ ನಂತರ ಸ್ತ್ರೀಯ ಅಸ್ತಿತ್ವ ಇರುವುದೇ ಹೀಗೆ ಎಂಬ ನಂಬಿಕೆ ದೃಢವಾಗಿರಬೇಕು. ಈ ನಂಬಿಕೆ - ಪುರುಷನು ಇರಬೇಕಾದದ್ದು ಹೀಗೆ; ಒರಟಾಗಿ, ಕ್ರೂರಿಯಾಗಿ, ಹಲ್ಲೆಕೋರನಾಗಿ, ದಬ್ಬಾಳಿಕೆಗಾರನಾಗಿ, ಆಳುವವನಾಗಿ ಮತ್ತು ಯಜಮಾನನಾಗಿ..... ಎಂದು ಮಾನಸಿಕವಾಗಿ ಸ್ತ್ರೀಯಲ್ಲಿ ಸ್ಥಿರಗೊಂಡಿರಬೇಕು. ಅವನು ಬದುಕಿನಲ್ಲಿ ನಿರ್ವಹಿಸಬೇಕಾದ ಮತ್ತು ಇರಬೇಕಾದ ಪಾತ್ರವೇ ಅಂಥಾದ್ದು ಎಂಬ ದೃಢ ಅಭಿಪ್ರಾಯ ಸ್ತ್ರೀಯಲ್ಲಿ ಶತಶತಮಾನಗಳ ಅವಧಿಯಲ್ಲಿ ವಂಶವಾಹಿಗಳಲ್ಲಿ ಸೇರಿಹೋಗಿರಬೇಕು. ಹೀಗೆ ಗಂಡಸಿನ ಯಜಮಾನ್ಯತೆಯನ್ನು ಕೇವಲ

ಸಾಮಾಜಿಕ - ಆರ್ಥಿಕ - ಮಾನಸಿಕ ಕಾರಣಗಳಿಂದ ಒಪ್ಪಿಕೊಂಡಿದ್ದು ಮಾತ್ರವಲ್ಲದೆ ಜೈವಿಕವಾಗಿ ವಂಶವಾಹಿಂಗಳಲ್ಲಿ ಅಂತರ್ಗತ ಮಾಡಿಕೊಂಡಿರುವುದು ಕಾರಣ ಇರಬಹುದೆ? ಕಳೆದ ಶತಮಾನದಲ್ಲಿ ರಚಿತವಾದ ರೋಮ್ಯಾಂಟಿಕ್ ಆಂಗ್ಲ ಕಾದಂಬರಿಗಳಲ್ಲಿ ಹೆಂಗಸರು ಈ ಬಗೆಯ ದಾಸ್ಯದಿಂದ ಆನಂದ ಪಡುವುದನ್ನು ಕಾಣಬಹುದು. ನಮ್ಮ ಕನ್ನಡದ ಕಾದಂಬರಿಗಾರ್ತಿಯರು ಸಹ ಈ ಬಗೆಯ ರಚನೆಯನ್ನು ಮಾಡಿದ್ದಾರೆ. ಸಿಗರೇಟು ಸೇದುವ, ಮದ್ಯಪಾನ ಮಾಡುವ, ಹಲ್ಲೆ ಮಾಡುವ ಗಂಡಸರನ್ನು ಇಷ್ಟಪಡುವ ಹೆಂಗಸರನ್ನು ಕಂಡಿದ್ದೇನೆ. ಅಂಥವರು ಮಾತ್ರ ಗಂಡಸರೆಂದು ಕರೆಸಿಕೊಳ್ಳುವ ಯೋಗ್ಯತೆಯಿರುವವರೆಂದು ಮಾನ್ಯ ಮಾಡುವವರನ್ನು ನೋಡಿ ನಾನು ಬೆರಗಾಗಿದ್ದೇನೆ. ಇಂಥ ಗುಣಗಳಿಲ್ಲದವನು 'ಹೇತ್ಲಾಂಡಿ'ಯೆಂದು ಬಿರುದು ಪಡೆದುದನ್ನೂ ಕೆಲವು ಪ್ರಸಂಗಗಳಲ್ಲಿ ಕಂಡಿದ್ದೇನೆ.

ಈ ಬಗೆಯ ಹೆಂಗಸಿನ ಮನಸ್ಥಿತಿಗೆ ಮಾನಸಿಕ ಕಾರಣಗಳನ್ನು ನೀಡಿ ವಿಶ್ಲೇಷಣೆ ಮಾಡುವವರೂ ಇದ್ದಾರೆ. ಈ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಾನು ಮಾಡಲಾಗದ ಅನೇಕ ಕೆಲಸಗಳನ್ನು ತನ್ನ ಪ್ರಿಯಕರ / ಗಂಡನಲ್ಲಿ ಕಾಣಬಯಸುತ್ತಾಳೆ. ಸಮಾಜ ಅವಳಿಗೆ ಇಂಥದ್ದು ನೈತಿಕ - ಇಂಥದ್ದು ಅನೈತಿಕ ಎಂದು ತಿಳಿಹೇಳಿ ಅವಳ ಮನಸ್ಸಿನ ಆಳಕ್ಕೆ ಇಳಿಸಿಬಿಟ್ಟಿದೆ. ಅಂಥವುಗಳಿಗೆ ಮೌಲ್ಯಗಳ ಸ್ಥಾನ ನೀಡಿ ಗೌರವಿಸಿದೆ. ಮಹಿಳೆ ಈ ಮೌಲ್ಯಗಳ ಸಂರಕ್ಷಕಳು; ಅವಳಿಂದಾಗಿ ಈ ಸಮಾಜದ ನೈತಿಕತೆ ನಿಂತಿದೆ, ಅವಳಿಂದಾಗಿ ಕುಟುಂಬ ವ್ಯವಸ್ಥೆ ಭದ್ರವಾಗಿ ಉಳಿದಿದೆ, ಆಚಾರ ಸಂಪ್ರದಾಯ ಸಂಸ್ಕೃತಿಗಳು ಅವಳಿಂದಾಗಿ ಬದುಕಿಬಾಳುತ್ತಿವೆ - ಎಂಬಂಥ 'ಚಿನ್ನ'ದಂಥ ಮಾತುಗಳನ್ನಾಡಿ ಅವಳನ್ನು ಸದಾ ಅಟ್ಟಕ್ಕೇರಿಸುತ್ತಿದೆ, ಇಂಥ ಬೆಣ್ಣೆಯಂಥ ಮಾತುಗಳನ್ನು ಅವಳು ನಿಜಕ್ಕೂ ನಂಬಿಬಿಟ್ಟಿದ್ದಾಳೆ! ಜೊತೆಗೆ ತಾನು ಬರೆದ ಧಾರ್ಮಿಕ / ಪುರಾಣ ಗ್ರಂಥಗಳಲ್ಲಿ ಅವಳಿಗೆ ಸರ್ವಶಕ್ತಿ, ಮಾತೆ, ದೇವಿ ಮುಂತಾದ ಅಭೂತ ವೈಭವದ ಮಾತುಗಳಿಂದ ಕರೆದು, ವಾಸ್ತವ ನೆಲೆಯಲ್ಲಿ ಅವಳಿಗಿಲ್ಲದ ಸ್ಥಾನವನ್ನು ನೀಡಿ ವರ್ಣಿಸಲಾಗಿದೆ. ಇದನ್ನೆಲ್ಲಾ ಸ್ತ್ರೀ ನಂಬುತ್ತಾ ಬಂದಿದ್ದಾಳೆ. ಆ ಸಮಾಜ ವ್ಯವಸ್ಥೆ ಹೇಳುತ್ತಾ ಬಂದಿರುವ ಎಲ್ಲಾ ಕೆಲಸಗಳನ್ನೂ ಕಿಂಚಿತ್ ಊನವಿಲ್ಲದಂತೆ ಆಚರಿಸುತ್ತಾ ಬಂದಿದ್ದಾಳೆ. ಅವಳ ಎದೆಯಲ್ಲಿ 'ಓ ಗಂಡಸೇ ನೀನೆಷ್ಟು ಒಳ್ಳೆಯವನು!' ಎಂಬ ನಂಬುಗೆ ಸ್ಥಿರವಾಗುತ್ತಾ ಸಾಗಿದೆ.

ಆದರೆ ಕಾಲ ಬದಲಾಗುತ್ತಿದೆ. ಚಲನೆಯ ಚಕ್ರ ಮೇಲುಕೆಳಗಾಗುತ್ತಿದೆ. ಸ್ತ್ರೀಗೆ ಚರಿತ್ರೆಯುಂಟು ಮಾಡಿರುವ ಅರಿವಾಗುತ್ತಿದೆ. ಅವಳು ಬದುಕಿನಲ್ಲಿ ಇಂದು ನಿರ್ವಹಿಸುತ್ತಿರುವ ಪಾತ್ರಗಳು ವಾಸ್ತವದ ಕಟು ಸತ್ಯವನ್ನು ತೆರೆದು ತೋರಿಸುತ್ತಿವೆ. ಸಿಹಿಯ ವಿವಿಧ ರೂಪಗಳಲ್ಲಿರುವ ಹುನ್ನಾರದ ಕಹಿಗಳು ಬೆಳಕಿಗೆ ಬರುತ್ತಿವೆ.

೦೩-೦೧-೨೦೧೩

# ನಾಲಗೆಯಂ ಮಾರಿದೆಂ

'ನಾಲಗೆಯಂ ಮಾರಿದೆಂ' ಎಂಬ ಮಾತು ಹದಿಮೂರನೆಯ ಶತಮಾನದ ನಮ್ಮ ಕವಿ ಹರಿಹರನದು. ಅವನದೊಂದು ಬಗೆಯ ಕಟು ಶಿವನಿಷ್ಠೆ, ಭಕ್ತಿ. ಅನ್ಯ ದೇವರನ್ನು ಅವನು ಅಪ್ಪಿತಪ್ಪಿಯೂ ಸ್ಮರಿಸಲಾರ! ಅವನು ತನ್ನ ಮನಸ್ಸನ್ನು ಶಿವನ ಸ್ಮರಣೆಗೆ ಮಾತ್ರ ಮೀಸಲಿಟ್ಟಿದ್ದ; ತನ್ನ ನಾಲಗೆಯನ್ನು ಕೇವಲ ಶಿವಸ್ತುತಿಗೆ ಮಾತ್ರ ಬಳಸುತ್ತಿದ್ದ. ನಾಲಗೆಯನ್ನು ಶಿವನಿಗೆ ಮತ್ತು ಶಿವಶರಣರಿಗೆ 'ಮಾರಿದೆಂ' ಅನ್ನುತ್ತಾನೆ. ಈ ರೀತಿ ಅನ್ನಲು ಕೂಡ ಹುಚ್ಚುಧೈರ್ಯ ಬೇಕು. ಈ ಅಚಲ ನಂಬಿಕೆ ಮತ್ತು ವಿಶ್ವಾಸಗಳಿಂದ ಶಿವಶರಣರ ಅಥವಾ ಶಿವಸ್ತುತಿಗೆ ತನ್ನ ನಾಲಗೆಯನ್ನು ಮಾರಿಕೊಂಡಿದ್ದೇನೆಂದು ಯಾವ ಎಗ್ಗೂ ಇಲ್ಲದೆ ಹೇಳುತ್ತಾನೆ. ಈ ಮಾತನ್ನು ಆಡುವಾಗ ಅವನಿಗೆ ಅಳುಕಿಲ್ಲ; ಅದರ ಬದಲು ವೀರ ಅಭಿಮಾನವಿದೆ!

ಉದಾತ್ತ ಚರಿತನೂ ಸತ್ಯಕ್ಕಾಗಿ ತನ್ನ ಸಮಸ್ತವನ್ನೂ ತ್ಯಾಗ ಮಾಡಲು ಸಿದ್ಧನಾದ 'ಮಾನವ' ಹರಿಶ್ಚಂದ್ರನನ್ನು ನಾಯಕನನ್ನಾಗಿಸಿ 'ಹರಿಶ್ಚಂದ್ರ ಕಾವ್ಯ'ವನ್ನು ಬರೆದು ಕವಿ ರಾಘವಾಂಕನು ತನ್ನ ಸೋದರಮಾವನಾದ ಹರಿಹರನಿಗೆ ಅರ್ಪಿಸಲು ಹೋದಾಗ, 'ಮಾನವ'ನನ್ನು ಸ್ತುತಿಸಿ ಕಾವ್ಯ ಬರೆದಿರುವ ಅಳಿಯ ರಾಘವಾಂಕನ ಕೆನ್ನೆಗೆ ಹಲ್ಲು ಉದುರುವ ಹಾಗೆ ಹೊಡೆದನೆಂಬ ದಂತಕಥೆಯೂ ಇದೆ. ಅದು ದಂತಕಥೆಯೆಂದೇ ನಂಬೋಣ. ಆದರೆ ಆ ಕಥೆಯ ಆಶಯವು ಹರಿಹರನ ರುದ್ರನಿಷ್ಠೆಯನ್ನೂ, ಮತನಿಷ್ಠೆಯನ್ನೂ ಮತ್ತು ವ್ಯಕ್ತಿವಿಶೇಷಗಳ ವಿರೋಧಿ ಮನಸ್ಥಿತಿಯನ್ನು ತಿಳಿಸುತ್ತದೆ. ಅವನು ತನ್ನ 'ಪಂಪಾಶತಕ'ದಲ್ಲಿ ಹೀಗೆ ಹೇಳುತ್ತಾನೆ :

**ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ**
**ಅಕ್ಕಟಾ, ತನತನಗೆ ಇಂದ್ರ ಚಂದ್ರ ರವಿ ಕರ್ಣ ದಧೀಚಿ**
**ಬಲೀಂದ್ರನೆಂದು ಮೇಣ್**
**ಅನವರತಂ ಪೊಗಳ್ದು ಕೆಡಬೇಡ.**

ಹರಿಹರನಿಗೆ 'ಸಾಯುವ' ಮನುಷ್ಯರು ಮುಖ್ಯವಲ್ಲ; ಅವರ ಬಗ್ಗೆ ಬರೆವುದು, ಕಾವ್ಯ ಬರೆದು ಸ್ತುತಿಸುವುದು 'ಕೆಡುವ' ಕಾಯಕ. ಶಿವನನ್ನು ಅಥವಾ ಶಿವಭಕ್ತರನ್ನು ಕುರಿತು ಬರೆವುದು ಸಾರ್ಥಕ ಕೆಲಸ. ಅವನ ದೃಷ್ಟಿಯಲ್ಲಿ ಶಿವಭಕ್ತರು ಮನುಷ್ಯರಲ್ಲ, ಅವರು ಶಿವಸ್ವರೂಪಿಗಳು. ಆದ್ದರಿಂದಲೇ ಅವರು ನೇರವಾಗಿ - ನಾನಾ ಕಾರಣಗಳಿಂದ - ಭೂಲೋಕಕ್ಕೆ ಬಂದ ಗಣಗಳು ಅಥವಾ ಕೈಲಾಸವಾಸಿಗಳು. ಆದುದರಿಂದಲೇ ಅವರನ್ನು ಹರಿಹರ ಆಯೋನಿಜನಕರೆಂದು ಕರೆಯುತ್ತಾನೆ. (ಮಾನವರು ಮಾತ್ರ ಜನಿಸುತ್ತಾರೆ; ಸಾಯುತ್ತಾರೆ.) ಅವರು ಈ ಭೂಮಿಗೆ

ಒಂದು ಕೆಲಸ ನಿರ್ವಹಿಸಿದ ನಂತರ ಕೈಲಾಸದಿಂದ ವಿಮಾನವೊಂದು ಬಂದು ಅವರನ್ನು ಕರೆದುಕೊಂಡು ಹೋಗುತ್ತದೆ!

ಹರಿಹರನದು ದೈವಪರವಾದ ನಿಲುವು. ಅವನು ಮಾನವಪರವಾಗಿ ಯೋಚಿಸುವುದು ಅಹಿತವೆಂದು ಭಾವಿಸುತ್ತಾನೆ! ಆದರೆ ಅವನಿಗಿಂತ ಮೊದಲಿದ್ದ ವಚನಕಾರರು ಮಹಾ ಮಾನವತಾವಾದಿಗಳಾಗಿದ್ದರೆಂಬುದು ಐತಿಹಾಸಿಕ ಸತ್ಯ. ಅಂಥವರನ್ನು ಕಾವ್ಯನಾಯಕರನ್ನಾಗಿಸಿ ಇದೇ ಹರಿಹರ ಕಾವ್ಯಗಳನ್ನು ಬರೆದಿದ್ದಾನೆಂಬುದೂ ಸತ್ಯ! ಆದರೆ ಕೇವಲ ಒಂದು ಶತಮಾನದ ಅಂತರದಲ್ಲಿ ಹರಿಹರ ವಚನಕಾರರಿಗೆ ಅವರ ಮಾನವ ವೇಷ ಕಳಚಿ, ದೈವದುಡುಗೆಯನ್ನು ತೊಡಸಿಬಿಡುತ್ತಾನೆ! ಇದು ಚರಿತ್ರೆಯ ವ್ಯಂಗ್ಯ!

ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಮತ ಧರ್ಮ ಸಿದ್ಧಾಂತಗಳ ಮಂಡನೆಗಾಗಿ ಕಥಾ ರೂಪಕಗಳನ್ನು ಹೇಳಿಕೊಂಡು ಬಂದಿದೆ. ಸಾಹಿತ್ಯವನ್ನು ಪ್ರಚಾರ ಮಾಧ್ಯಮವನ್ನಾಗಿ ಬಳಸಿಕೊಂಡಿದೆ. ಆ ಪ್ರಕ್ರಿಯೆ ಆಧುನಿಕ ಕಾಲದಲ್ಲೂ ಬೇರೆಬೇರೆ ರೂಪಗಳಲ್ಲಿ ಅಭಿವ್ಯಕ್ತಿ ತಳೆದಿದೆ. ಧರ್ಮ ಸಿದ್ಧಾಂತಗಳೆಲ್ಲವೂ ಮನುಷ್ಯನ (-ಜೀವಿಗಳ) ಉದ್ಧಾರದ ಮಂತ್ರವನ್ನೇ ಜಪಿಸುತ್ತವೆ. ಆದರೆ ಭೌತಿಕ ನೆಲೆಯಲ್ಲಿ ಅವನ ಅಸ್ತಿತ್ವದ ಸ್ವರೂಪವನ್ನು, ವಾಸ್ತವತೆಯನ್ನು ತುಂಬ ಹಗುರವಾಗಿ ಕಾಣುತ್ತವೆ. ಅವನ ಉದ್ಧಾರವೆಂಬುದು ಅಮೂರ್ತರೂಪಿಯಾದ ಬೇರೊಂದು ಲೋಕದಲ್ಲಿದೆಯೆಂದೂ ಅದರ ಸಾಧನೆಯೇ ಈ ಲೋಕದ ಬದುಕಿನ ಪ್ರಮುಖ ಆಶಯವಾಗಿರಬೇಕೆಂದೂ ಒತ್ತಿ ಹೇಳುತ್ತವೆ. ಮಾನವತೆಯ ಉದ್ಧಾರವೆಂದರೆ ದೈವಕೃಪೆಯ ಸಾಧನೆಯೆಂದೇ ನಂಬಿಸಲು ಯತ್ನಿಸುತ್ತವೆ. ಆ ಕಾರಣದಿಂದಲೇ ಆ ಅಮೂರ್ತ ಸ್ವರೂಪಿಯಾದ ದೇವರನ್ನು ಒಲಿಸಿಕೊಳ್ಳಲು ಅವನನ್ನು ಸ್ತುತಿಸಬೇಕಾಗುತ್ತದೆ. ಅದಕ್ಕಾಗಿ ನಮ್ಮ ನಾಲಗೆಯನ್ನು ನಾವು ಮಾರಬೇಕಾಗುತ್ತದೆ! ಇದು ಎಂಥ ವಿಪರ್ಯಾಸ ಅಲ್ಲವೆ?

ಇಂದು ವರ್ತಮಾನದಲ್ಲೂ ಕೂಡ, ಆಧುನಿಕತೆಯ, ವ್ಯಕ್ತಿಸ್ವಾತಂತ್ರ್ಯದ, ವೈಚಾರಿಕ ಯುಗದಲ್ಲೂ ಕೂಡ ನಾವು ನಮ್ಮ ನಾಲಗೆಯನ್ನು ನಮ್ಮ ನಾನಾ ಬಗೆಯ ಸ್ವಾರ್ಥಗಳ ಈಡೇರಿಕೆಗಾಗಿ ಮಾರಿಕೊಳ್ಳುತ್ತೇವೆ. ನಮ್ಮ ಸುತ್ತಲಿನ ಅಸತ್ಯವನ್ನು ಸತ್ಯವೆಂದೂ, ಅಸಮಾನತೆಯನ್ನು ಸಾಮಾಜಿಕ ನ್ಯಾಯವೆಂದೂ ಕರೆದು ಪ್ರಭುತ್ವವನ್ನು ಸ್ತುತಿಸುತ್ತೇವೆ. ಅಥವಾ ಕಂಡ ಸತ್ಯವನ್ನು ಹೇಳಲಾರದ ಸ್ಥಿತಿಗೆ ನಮ್ಮ ನಾಲಗೆಯನ್ನು ನಾವೇ ನಿಶ್ಚಲಗೊಳಿಸಿಕೊಳ್ಳುತ್ತೇವೆ.

೧೭-೦೧-೨೦೧೩

# ದಾನಶೂರ ದುರ್ಯೋಧನ!

ವ್ಯಕ್ತಿ ಮೂಲತಃ ಸಂಪಾದನೆ ಮಾಡುವುದು ತನಗಾಗಿಯೇ, ತನ್ನ ಕುಟುಂಬದ ಸುಖಕ್ಕಾಗಿಯೇ. ಈ ಅರ್ಥದಲ್ಲಿ ಅವನು ವೃತ್ತ ಕಟ್ಟಿಕೊಳ್ಳುವುದರಲ್ಲಿ ಆಶ್ಚರ್ಯವಿಲ್ಲ. ತಾನು, ತನ್ನ ಮನೆ, ತನ್ನ ಬಂಧುಬಳಗ, ತನ್ನ ಜಾತಿ, ತನ್ನ ಊರು, ರಾಜ್ಯ, ಭಾಷೆ - ಹೀಗೆ ಅವನ ವೃತ್ತದ ಪರಿಧಿಯ ಪಕಳೆಗಳು ವಿಸ್ತಾರಗೊಳ್ಳುತ್ತಾ ಸಾಗುತ್ತವೆ. ತನ್ನದೆಂಬ ಈ ಸ್ವಾರ್ಥ ಆದರ್ಶದ ರೆಕ್ಕೆಗಳನ್ನು ತೊಟ್ಟುಕೊಳ್ಳುತ್ತಾ ಸಾಗಿದ ಹಾಗೆ ಅವನ 'ಕುಟುಂಬ'ದ ವ್ಯಾಪ್ತಿ ದೊಡ್ಡದಾಗುತ್ತಾ ಹೋಗುತ್ತದೆ. ತನ್ನದೆಂಬ ಆ ಮೂಲವನ್ನು ಅವನು ಚಿಕ್ಕದಾಗಿಸಿಕೊಂಡು 'ತನ್ನ' ಹೊರಗಿರುವ ಪ್ರಪಂಚವನ್ನು ನಿಜಕ್ಕೂ 'ತನ್ನದೆಂದು' ಪರಿಭಾವಿಸುವ ಎತ್ತರಕ್ಕೆ ತನ್ನ ಮನಸ್ಥಿತಿಯನ್ನು ಹದಗೊಳಿಸಿಕೊಳ್ಳಬೇಕು. ಆಗ 'ತನ್ನದೆಂಬುದು' ಸಮಷ್ಟಿಯಲ್ಲಿದೆಯೆಂದು ತಿಳಿದು ಉದಾರನಾಗುತ್ತಾನೆ, ಉದಾತ್ತನಾಗುತ್ತಾನೆ.

ಈ ಬಗೆಯ ಉದಾತ್ತ ಗುಣವಿರುವವನೇ ದಾನಶೂರನಾಗುತ್ತಾನೆ. ತಾನು ಸಂಪಾದಿಸುವುದು ಅಥವಾ ತನ್ನ ಬಳಿ ಇರುವುದು ತನ್ನದೆಂಬ ವ್ಯಾಮೋಹದಿಂದ ಅವನು ಮುಕ್ತನಾಗುತ್ತಾನೆ. ಆ ಬಗೆಯ ವ್ಯಾಮೋಹಮುಕ್ತನಾದವನು ಕರ್ಣ! ಅವನಿಗೆ ನೀಡುವುದರಲ್ಲಿ ಎಂದೂ ಅರೆಮನಸ್ಸೆಂಬುದಿರಲಿಲ್ಲ. ತನ್ನ ದಾನ ಗುಣದಿಂದ ಅವನು 'ದಾನಶೂರ ಕರ್ಣ'ನೆಂದು ಬಿರುದಾಂಕಿತನಾಗಿದ್ದನು. ಇಲ್ಲಿ ನಾವು ಗಮನಿಸಬೇಕಾದದ್ದು : ಈ ಬಿರುದನ್ನು ಅವನಿಗೆ ಯಾವ ರಾಜ ಮಹಾರಾಜರೂ ನೀಡಿರಲಿಲ್ಲ; ಯಾವ ಸಂಘ ಸಂಸ್ಥೆಗಳೂ ನೀಡಿರಲಿಲ್ಲ. ಅವನ ದಾನಶೀಲತೆಯನ್ನು ಕಂಡು, ಅವನಿಂದ ಉಪಕೃತರಾದ ಜನಸಮೂಹ ನೀಡಿದ ಬಿರುದಾಗಿತ್ತು. ಜನಸಮೂಹದ ಬಿರುದು ನಿಜವಾದ ಅಂತರಾಳದಿಂದ ಬಂದಿರುವಂಥದ್ದು. ಕರ್ಣನಿಗೆ ಜನ 'ದಾನಶೂರ'ನೆಂದು ಕರೆದು ಕೊಂಡಾಡುವುದನ್ನು ಕಂಡ ದುರ್ಯೋಧನನಿಗೆ ಒಮ್ಮೆ ಅಸೂಯೆಯಾಗುತ್ತದೆ. ಈ ಪ್ರಕರಣ 'ಜನಪದ ಮಹಾಭಾರತ' (ಸಂ : ಡಾ.ಪಿ.ಕೆ. ರಾಜಶೇಖರ)ದಲ್ಲಿ ಬರುತ್ತದೆ ಹಾಗೂ ಅತ್ಯಂತ ಕುತೂಹಲವನ್ನುಂಟು ಮಾಡುತ್ತದೆ.

ಕರ್ಣ ಹೇಗೆ ತಾನೇ ದಾನಶೂರನಾಗಲು ಸಾಧ್ಯ? ಅವನೇನು ತಾನೇ ಸ್ವತಃ ಕಷ್ಟಪಟ್ಟು ಬೆವರು ಸುರಿಸಿ ದುಡಿದು ದಾನ ಮಾಡುತ್ತಾನೇನು? ಅವನ ಬಳಿ ಇರುವ ಸಂಪತ್ತೆಲ್ಲವೂ ನಾನು ನೀಡಿದ್ದು. ನಾನು ನೀಡಿರುವ ಪದವಿಯಿಂದ ದತ್ತವಾದ ಸಂಪತ್ತನ್ನು ದಾನ ಮಾಡಿ 'ತಾನು ದಾನಶೂರ'ನೆಂದು ಬಿರುದಾಂಕಿತನಾಗಿ ಕೀರ್ತಿವಂತನಾಗುವುದು ಅಸಮರ್ಥನೀಯ. ನಿಜವಾದ ಅರ್ಥದಲ್ಲಿ ಆ ಬಿರುದು ನನಗೆ ಸಲ್ಲಬೇಕು. ನಾನೇ ನಿಜವಾದ 'ದಾನಶೂರ' ಎಂದು ದುರ್ಯೋಧನ

ತೀರ್ಮಾನಿಸುತ್ತಾನೆ. 'ದಾನಶೂರ ದುರ್ಯೋಧನ'ನೆಂದು ಬೋರ್ಡು ಬರೆಸಿ, ತನ್ನ ಮನೆಯ ಗೋಡೆಗೆ ನೇತುಹಾಕಿಸುತ್ತಾನೆ. ತನ್ನ ಬಳಿ ಬೇಡಿ ಬಂದವರಿಗೆಲ್ಲರಿಗೂ ಉದಾರವಾಗಿ ದಾನ ನೀಡಲಾರಂಭಿಸುತ್ತಾನೆ.

ಹೀಗಿರುವ ಸಂದರ್ಭದಲ್ಲಿ ಒಂದು ಮಳೆಗಾಲ ಬರುತ್ತದೆ. ಹಗಲು ರಾತ್ರಿಯೆನ್ನದೆ ಬಿಡುವಿಲ್ಲದ ಮಳೆ ಕಾಡಲಾರಂಭಿಸುತ್ತದೆ. ಎಲ್ಲೆಲ್ಲೂ ನೀರು. ಅನ್ನ ಆಹಾರ ತಯಾರಿಸಲು ಸ್ವಲ್ಪವೂ ಒಣಸೌದೆಯಿಲ್ಲದಂತೆ ಎಲ್ಲೆಡೆ ಖಾಲಿಯಾಗುತ್ತದೆ. ಇಂಥ ಸಂದರ್ಭದಲ್ಲಿ ಒಬ್ಬ ಬ್ರಾಹ್ಮಣನಿಗೆ ಪಿತೃವಿಯೋಗವಾಗುತ್ತದೆ. ಅವನ ತಂದೆಯ ಶವಸಂಸ್ಕಾರ ಮಾಡಲು ಸೌದೆ ಬೇಕಾಗುತ್ತದೆ. ಆದರೆ ಆ ಕಡು ಮಳೆಯ ಅಬ್ಬರದಲ್ಲಿ ಒಣಗಿದ ಸೌದೆ ಅವನಿಗೆಲ್ಲೂ ಸಿಗುವುದಿಲ್ಲ. ಚಿಂತಾಕ್ರಾಂತನಾಗಿ ಅವನು ಬರುತ್ತಿರುವಾಗ ದುರ್ಯೋಧನನ ಮನೆಯ ಗೋಡೆಯ ಮೇಲೆ ತೂಗು ಹಾಕಿದ 'ದಾನಶೂರ ದುರ್ಯೋಧನ' ಎಂಬ ಬೋರ್ಡು ಕಾಣಿಸುತ್ತದೆ. ಆಗ ಆ ಬ್ರಾಹ್ಮಣನು ದುರ್ಯೋಧನನನ್ನು ಭೇಟಿಯಾಗಿ ತನ್ನ ತಂದೆಯ ಶವಸಂಸ್ಕಾರಕ್ಕೆ ಒಣಗಿದ ಸೌದೆ ನೀಡುವಂತೆ ಕೋರುತ್ತಾನೆ. ಆಗ ದುರ್ಯೋಧನನು, 'ಎಲೈ ಬ್ರಾಹ್ಮಣನೇ, ಇಂಥ ಭಯಂಕರ ಮಳೆಗಾಲದಲ್ಲಿ ನನ್ನಲ್ಲಿರುವ ಸೌದೆಯನ್ನು ನಿನ್ನ ಅವಸರಕ್ಕೆ ನೀಡಿದಲ್ಲಿ ನಮಗೆ ತೊಂದರೆಯಾಗುವುದಿಲ್ಲವೆ? ನಮ್ಮ ಅರಮನೆಯಲ್ಲಿ ದಿನನಿತ್ಯ ಸಾವಿರಾರು ಜನರಿಗೆ ಆಹಾರ ತಯಾರಿಸಬೇಕು; ಸ್ನಾನಾದಿಗಳಿಗೆ ಬಿಸಿ ನೀರು ಬೇಕು. ನಿನಗೆ ಸೌದೆಯನ್ನು ನೀಡಲಾಗದು' ಎಂದು ಹೇಳುತ್ತಾನೆ.

ನಿರಾಶನಾದ ಬ್ರಾಹ್ಮಣನು ಚಿಂತಾಕ್ರಾಂತನಾಗಿ ಬರುತ್ತಿರಲು ಯಾರೋ ವೃದ್ಧರು ಅವನಿಗೆ ಸೌದೆಗಾಗಿ ಕರ್ಣನಲ್ಲಿಗೆ ಹೋಗಿ ಬೇಡಲು ಸೂಚಿಸುತ್ತಾರೆ. ಬ್ರಾಹ್ಮಣನಿಗೆ ಕರ್ಣನ ಮನೆಯ ಮುಂದೆ ಯಾವ ಬೋರ್ಡೂ ಕಾಣಿಸುವುದಿಲ್ಲ. ತನ್ನ ತಂದೆಯ ಶವ ಸಂಸ್ಕಾರಕ್ಕೆ ಸೌದೆ ನೀಡುವಂತೆ ಕರ್ಣನನ್ನು ವಿನಂತಿಸುತ್ತಾನೆ. ಆದರೆ ಕರ್ಣನ ಮನೆಯಲ್ಲಿ ಒಣಗಿದ ಸೌದೆಯಿರುವುದಿಲ್ಲ. ಕರ್ಣ ಹಿಂದೆ ಮುಂದೆ ಯೋಚಿಸುವುದಿಲ್ಲ. ಅಡ್ಡ ಯೋಚನೆ ಬರುವ ಮುನ್ನವೇ ತನ್ನ ಮನೆಯ ಒಂದು ಭಾಗವನ್ನು (ಒಪ್ಪಾರಲು) ಕೆಡವಿ, ಅಲ್ಲಿನ ಮರಮುಟ್ಟುಗಳನ್ನು ಬ್ರಾಹ್ಮಣನಿಗೆ ಶವ ಸಂಸ್ಕಾರಕ್ಕೆ ತೆಗೆದುಕೊಂಡು ಹೋಗಲು ತಿಳಿಸುತ್ತಾನೆ.

ಇದು ದಾನಶೀಲತೆಯ ನಿಜವಾದ ಸ್ವರೂಪ. ಕೇವಲ ಬೋರ್ಡು ಹಾಕಿಕೊಂಡರೆ ದಾನಶೂರನಾಗಲು ಸಾಧ್ಯವಿಲ್ಲ. ದಾನಶೀಲತೆಯೆಂಬುದು ಆಡಂಬರದ, ಪ್ರದರ್ಶನದ ವಸ್ತುವಲ್ಲ. ಅದು ಒಮ್ಮನಸ್ಸಿನಿಂದ ಉದ್ಭವಿಸುವ ಉದಾತ್ತ ನಡೆ; ಚಿತ್ತವೃತ್ತಿ.

೧೪-೦೨-೨೦೧೩

# ಮತ್ತೆ ಮರ ಚಿಗುರುತ್ತಿದೆ

ಸಂಕ್ರಮಣ ಕಳೆದು ನಿಧಾನವಾಗಿ ಮಾಗಿ ಕಾಲ ಹಿಂದಕ್ಕೆ ಸರಿಯುತ್ತಿದೆ. ಬೇಸಿಗೆಯ ಆಗಮನದ ಸೂಚನೆ ಮೈಮನಗಳಿಗೆ ಭಾಸವಾಗುತ್ತದೆ. ಸುಡುಬಿಸಿಲಿನ ತಾಪ ಚರ್ಮದ ಬಣ್ಣವನ್ನು ಬದಲಿಸುವ ಹುನ್ನಾರದಲ್ಲಿದೆ. ನಮ್ಮ ಅರಣ್ಯಗಳ, ಗ್ರಾಮೀಣ ಪ್ರದೇಶಗಳ ಹೊಲಗದ್ದೆಗಳ ಮರಗಿಡಗಳು ತಮ್ಮ ಮುಪ್ಪಾಗಿ ಸೊಬಗು ಕಳೆದುಕೊಂಡಿರುವ ಎಲೆಗಳನ್ನು ಒಂದೊಂದಾಗಿ ಕಳಚಿ ಕೆಳಗೆ ಬೀಳಿಸುತ್ತಿವೆ. ಕಾಡು, ಹೊಲಗದ್ದೆ, ಬಯಲು - ಮುಪ್ಪಿನ ನಿಡುಸುಸ್ತಿನ ಬಿಸಿ ಉಸಿರನ್ನು ಬಿಡುವಂತೆ ತೋರುತ್ತಿದೆ. ಇತ್ತ ಧೂಳು ಹಿಡಿದ ರಸ್ತೆ ಇಕ್ಕೆಲಗಳಲ್ಲಿ ಕಾದು ಬೆಂದ ಹೆಂಚಿನ ಮನೆಗಳಲ್ಲಿರುವ ವಯಸ್ಸಾದ ಮುದುಕ - ಮುದುಕಿಯರು ತಮ್ಮ ಒಣಗಿದ ಸುಕ್ಕುಗಟ್ಟಿದ ಚರ್ಮದ ಮೇಲೆ ಕೈಯಾಡಿಸುತ್ತಾ ಜಗುಲಿಗಳಲ್ಲಿ ಕುಳಿತು ಸದಾ ಏನನ್ನೋ ನಿರೀಕ್ಷೆ ಮಾಡುತ್ತಿರುತ್ತಾರೆ. ರಾತ್ರಿಯಾದೊಡನೆ ನಿದ್ದೆ ಬಾರದೆ ಆಗಸದ ನಕ್ಷತ್ರಗಳಲ್ಲಿ ತಮ್ಮ ನೆಲೆ ಯಾವುದಿರಬಹುದೆಂದು ಮಬ್ಬುಗಣ್ಣಿನಲ್ಲಿ ತಡಕಾಡುತ್ತಾರೆ. ಕವಿ ಪುತಿನ ಹೇಳುವಂತೆ ಧುತ್ತನೆ ಮೂಡಿ ಪ್ರೀತಿಯಿಂದ ಕರೆವ ಬೆಳಕಿಗೆ ಹಾತೊರೆಯುತ್ತಾರೆ. ಅಷ್ಟರಲ್ಲಿ ಅವರಿಗೆ ಮನೆಯ ಒಳಮನೆಯ ಬಾಣಂತಿ ಕೋಣೆಯಿಂದ ಎಳೆಯ ಮಗುವಿನ ಅಳುವ ಸದ್ದು ಕೇಳಿಬರುತ್ತದೆ. ಅವರ ಮುಖದ ಮೇಲೆ ಮಂದಹಾಸದ ಗೆರೆ ಮಿಂಚಿ ಮಾಯವಾಗುತ್ತದೆ.

ನಮ್ಮ ಸೀಮೆಯ ಸಸ್ಯ ಜಗತ್ತಿನಲ್ಲಿ ಸೃಷ್ಟಿಯ ಬಯಕೆ ಇಮ್ಮಡಿಯಾಗುತ್ತದೆ. ತಮ್ಮ ಮೈತುಂಬಿ ನಿಂತಿರುವ ಹಳದಿ ಮಿಶ್ರಿತ ಒಣ ಎಲೆಗಳನ್ನು ಬೀಳಿಸಿಕೊಳ್ಳಲು ವಾಯುದೇವನ ನೆರವನ್ನು ಬಯಸುತ್ತವೆ. ಆ ಎಲೆಗಳಿಗೆ ತಮ್ಮ ಜೀವನಾಳಗಳಿಂದ ರಸ ಹರಿಸುವ ಕ್ರಿಯೆಯನ್ನು ನಿಲ್ಲಿಸುತ್ತವೆ. ತಮ್ಮ ಬುಡದ ನೆಲ ನೀರು ಕಂಡು ಹಲವಾರು ತಿಂಗಳುಗಳೇ ಕಳೆದಿರುವುದು, ತಮ್ಮ ಬೇರಿನ ನೂರಾರು ನರನಾಡಿಗಳು ಒಣ ಮಣ್ಣಲ್ಲಿ ಉಸಿರುಗಟ್ಟಿ ತಿಣುಕಾಡುತ್ತಿರುವುದು ಅವಕ್ಕೆ ತಿಳಿಯದ ವಿಷಯವಲ್ಲ. ಒಣ ಅಂತರಾಳ, ಒಣ ಹೊರ ಮೈ, ಒಣ ಕಾಂಡ ರೆಂಬೆಗಳು..... ಒಟ್ಟಾರೆಯಾಗಿ ಅವುಗಳ ಬದುಕು ಬಣಗುಟ್ಟುತ್ತಿದೆ. ಅಂಥ ಬದುಕಿನ ನೀರಸ ಸುಡು ಸಂದರ್ಭದಲ್ಲಿ ಚೈತ್ರದ ನೆನಪಾಗುತ್ತದೆ; ಅದಕ್ಕಾಗಿ ಅವು ವಸಂತನ ಕೂಗಿ ಕರೆದು ಹಂಬಲಿಸುತ್ತವೆ. ಅದಕ್ಕಾಗಿಯೇ ಅವು ತಮ್ಮ ತಲೆಮಾರುಗಳ ಪರಂಪರೆಯ ಮೂಲಕ ಸಂಗ್ರಹಿಸಿಟ್ಟುಕೊಂಡಿರುವ ವಂಶವಾಹಿ ಚೈತನ್ಯ ಶಕ್ತಿಯನ್ನು ಅವಗಾಹನೆ ಮಾಡಿಕೊಂಡು, ತಾವು ಉದುರಿಸಲು ಇಚ್ಛಿಸಿರುವ ಮುದಿ ಎಲೆಗಳ ಬುಡದ ಕಂಕುಳುಗಳಿಂದ ಹೊಸ ಚಿಗುರು ಮೊಗ್ಗುಗಳನ್ನು ಹೊರಚಿಮ್ಮಿಸಲು ಪ್ರಯತ್ನಿಸುತ್ತವೆ.

ಹೊರಗಿನ ಸುಡು ಬಿಸಿಲು, ಚರ್ಮಸೀಳುವ ಬಿಸಿ ಒಣಗಾಳಿಗೆ ಹೆದರದೆ ಸುಕುಮಾರ ಕೋಮಲ ಚಿಗುರುಗಳು ಅದೆಂಥದೋ ಪವಾಡವೆಂಬಂತೆ (ಪವಾಡವೆಂಬುದು ಹೊರಗಣ್ಣಿನಿಂದ ನೋಡುವವರಿಗೆ ಆಗುವ ಅನಿಸಿಕೆ ಮಾತ್ರ; ಅದೊಂದು ನಿಸರ್ಗ ಸಹಜ ಕ್ರಿಯೆ) ಹೊರ ಜಗತ್ತನ್ನು ಇಣುಕಿ ನೋಡುತ್ತವೆ! ಆ ಚಿಗುರು ಶಕ್ತಿಯನ್ನು ನೋಡಿಯೇ ಅನುಭವಿಸಬೇಕು. ಕ್ಷಣಕ್ಷಣಕ್ಕೆ ತಮ್ಮ ಒಳಗಿರುವ ಅದಮ್ಯ ಚೈತನ್ಯದಿಂದ ಬೆಳೆದು ಪ್ರಕಾಶಿಸುವ ಅವುಗಳ ಸೊಬಗು ಪರಿಸರವನ್ನು ಮೈ ತುಂಬುತ್ತದೆ. ಸುಡು ಬಿಸಿಲಿಗೆ, ಒಣಗಾಳಿಗೆ ತರಗುಟ್ಟಿ ಉದುರುತ್ತಿರುವ ತಮ್ಮ ಹಿರೀಕ ಎಲೆಗಳ ಹಾಗೆ ಹೆದರದೆ - ಬದುಕನ್ನು ಎದುರಿಸುವ ಅವುಗಳ ಪರಿ ನಿರಾಶೆಯ ಕಾರ್ಮೋಡವನ್ನು ಹೊಡೆದೋಡಿಸುವಂಥದು. ಮುಂದೆ ಬರಲಿರುವ ವಸಂತ-ಚೈತ್ರಗಳ ನಿರೀಕ್ಷೆಯ ಭರವಸೆಯಲ್ಲಿ ಬದುಕನ್ನು ಕಟ್ಟಿಕೊಂಡು ನಿರ್ವಹಿಸುವ ಪರಿ ಅದು. ಎಂಥ ವೈಚಿತ್ರ್ಯ ನೋಡಿ! ಈಗ ಮುದಿಯಾಗಿ ಉದುರುತ್ತಿರುವ ಮುದಿ ಎಲೆಯು ಕೂಡ ಒಂದು ವರ್ಷದ ಹಿಂದೆ ಇದೇ ರೀತಿ ಜೀವ ಚೈತನ್ಯ ಚಿಮ್ಮಿಸುತ್ತಿರುವ ಚಿಗುರೇ ಆಗಿತ್ತು. ಅದು ಆಗ ತನ್ನ ಸಂಕುಲದ ಪ್ರತಿರೋಧವನ್ನು ಎದುರಿಸಿ ಬದುಕಿತ್ತು, ಬಾಳಿತ್ತು. ಅದರ ಬಾಳ ಪಯಣದಲ್ಲಿ ಕಡು ಬಿಸಿಲನ್ನೂ ಬಿರುಗಾಳಿಯನ್ನೂ ಮಳೆಯ ಮಸಲಧಾರೆಯನ್ನೂ ಅನಾಯಾಸವಾಗಿ ಎದುರಿಸಿತ್ತು. ಪ್ರಕೃತಿ ನಿಯಮವೇ ಹಾಗೆ! ಶಕ್ತಿಗುಂದಿದಾಗ ತೊಡೆ ನಡುಗುತ್ತದೆ, ತಲೆ ಅದುರುತ್ತದೆ, ಬುಡ ಕುಸಿಯುತ್ತದೆ!

ಮರ ಚಿಗುರುವ ಪ್ರಕ್ರಿಯೆಯೂ ಭಿನ್ನ. ಒಂದೊಂದು ಸಂಕುಲದ ಮರಗಳು ಒಮ್ಮೊಮ್ಮೆ ಚಿಗುರುತ್ತವೆ. ಎಲ್ಲವೂ ಒಮ್ಮೆಗೆ ಧಿಡೀರ್ ಎಂದು ಚಿಗುರು ಮೂಡಿಸುವುದಿಲ್ಲ. ತೊರೆ ಸಾಲುಗಳಲ್ಲಿ, ಊರ ರಸ್ತೆ ಬದಿಗಳಲ್ಲಿ ಇರುವ ಹೊಂಗೆ ಮರಗಳು ತುಸು ಮುಂಚೆಯೇ ಚಿಗುರಿ ನಿಂತುಬಿಡುತ್ತವೆ. ಕರುನಾಡ ಕಾಡುಗಳಲ್ಲಿ ಮುತ್ತುಗದ ಮರಗಳು ಎಲೆಗಿಂತ ಮೊದಲು ಹೂ ಬಿಡುತ್ತವೆ. ಅದೇ ರೀತಿ ಕಕ್ಕೆ ಮರಗಳು ಕೂಡ. ಇಡೀ ಕಾಡೇ ಒಣಗಿ ನಿಂತಂತೆ ತೋರುವ ಸಂದರ್ಭದಲ್ಲಿ ಕಕ್ಕೆ ಹೊಂಗೆ ಮುತ್ತುಗಳು ಹಿರಿಯಕ್ಕನಂತೆ ಸೊಬಗಿಸುತ್ತವೆ. ಇತರ ಮರಗಿಡಗಳಿಗೆ ಬದುಕಿನ ಆಸೆಯನ್ನು ಬಿತ್ತುತ್ತವೆ. ಹೌದು, ಹೀಗೆ ಮತ್ತೆ ಮರಗಳು ಚಿಗುರುತ್ತವೆ, ಬದುಕಿನಲ್ಲಿ ಭರವಸೆ ಮೂಡಿಸುತ್ತವೆ.

೨೮-೦೨-೨೦೧೩

# ಕೊನೆಗೂ ಸೋಲುವುದು ಹೆಣ್ಣು !

ಜಗದ್ವಿಖ್ಯಾತ ಪಾಪ್ ಗಾಯಕಿ ರಿಹಾನ್ನ ಹಲವಾರು ವರ್ಷ ಜೊತೆಯಲ್ಲಿ ಸಹಜೀವನ ನಡೆಸಿದ ತನ್ನ ಪ್ರಿಯಕರನಿಂದ ಇತ್ತೀಚೆಗೆ ಬೇರೆಯಾದಳು. ಅದಕ್ಕೆ ಅವಳು ನೀಡಿದ ಕಾರಣ : ಅವನು ನೀಡುತ್ತಿದ್ದ ದೈಹಿಕ ಹಾಗೂ ಮಾನಸಿಕ ಚಿತ್ರಹಿಂಸೆ! ಅವನು ಸಾಧಾರಣ ವ್ಯಕ್ತಿಯಲ್ಲ, ಪಾಪ್ ಸಂಗೀತ ಲೋಕದ ಆರಾಧ್ಯಮೂರ್ತಿ - ಕ್ರಿಸ್ ಬ್ರೌನ್! ಇಬ್ಬರಿಗೂ ಖ್ಯಾತಿ ಮತ್ತು ಸಂಪತ್ತು ಕಾಲಬುಡದಲ್ಲಿ ಬಿದ್ದಿದೆ. ಆದರೆ ಕಲೆಯ ಆರಾಧಕರಾದ ಅವರಲ್ಲಿ ಹೊಂದಾಣಿಕೆ ಬರಲಿಲ್ಲ. ಕಲೆ ಅವರನ್ನು ಪರಸ್ಪರ ಸಂವೇದನಾಶೀಲ ಮನೋಧರ್ಮದಲ್ಲಿ ಬೆಸೆಯಲು ವಿಫಲವಾಯಿತು. ಬಹುಶಃ ಅವರಿಗೆ ದತ್ತವಾದ ಕೀರ್ತಿ ಮತ್ತು ಸಂಪತ್ತುಗಳೇ ಕಾರಣವಾಗಿರಬೇಕು. ಇದಾದ ಕೆಲವೇ ದಿನಗಳಲ್ಲಿ ಅವಳು ದಿಗ್ಭ್ರಮೆ ಹುಟ್ಟಿಸುವ ಹೇಳಿಕೆ ನೀಡಿದಳು : 'ನನಗೆ ಕ್ರಿಸ್‌ನಿಂದ ಒಂದು ಮಗು ಪಡೆಯುವ ಆಸೆಯಿದೆ. ನಾನು ಅವನೊಡನೆ ಮತ್ತೆ ಜೀವಿಸಲು ಸಿದ್ಧಳಿದ್ದೇನೆ.' ಆದರೆ ಕ್ರಿಸ್‌ಬ್ರೌನ್‌ನಿಂದ ಅವಳಿಗೆ ಉತ್ತೇಜನಕಾರಿ ಪ್ರತಿಕ್ರಿಯೆ ಬರಲಿಲ್ಲ.

ಭಾರತದಲ್ಲೂ ಅಷ್ಟೆ - ಅನೇಕ ಚಿತ್ರತಾರೆಯರು, ಗಣ್ಯ ಉದ್ಯಮಿಗಳು ಮದುವೆಯಾದ ತಮ್ಮ ಪತ್ನಿಯರನ್ನು ಬಿಟ್ಟು ಬೇರೆಯವರನ್ನು ಲಗ್ನವಾಗುತ್ತಾರೆ. ಹಾಗಂತ ತಮ್ಮ ಪತಿ ಮತ್ತೊಂದು ಮದುವೆಯಾದರೆಂದು ಅವರಿಂದ ವಿಚ್ಛೇದನ ಪಡೆದವರ ಸಂಖ್ಯೆಯೂ ಕಡಿಮೆಯೇ. ಭಾರತೀಯ ಪರಂಪರಾಗತ ಸಾಮಾಜಿಕ ವ್ಯವಸ್ಥೆಯ ಬಹು ಪತ್ನಿತ್ವದ ಅಘೋಷಿತ ಹೇರಿಕೆಯನ್ನು ಸದ್ದಿಲ್ಲದೆ ಒಪ್ಪಿಕೊಂಡುಬಿಡುವ ಪರಿಯಿದು. ಕೆಲವು ಪತಿ ಮಹಾಶಯರು ಹೆಂಡತಿಯರ ಮೇಲೆ ಅಮಾನುಷ ದೈಹಿಕ ಹಲ್ಲೆಯನ್ನು ಮತ್ತು ಮಾನಸಿಕ ಹಿಂಸೆಯನ್ನು ಸಾರ್ವಜನಿಕವಾಗಿ ಮಾಡಿ ಅವಮಾನಿಸಿರುತ್ತಾರೆ. ಇಂಥ ಕೇಸುಗಳು ಪೊಲೀಸು - ನ್ಯಾಯಾಲಯಗಳ ಮೆಟ್ಟಲೇರಿ ದೊಡ್ಡ ಸುದ್ದಿ ಮಾಡುವುದೂ ಉಂಟು. ಆದರೆ ಸ್ವಲ್ಪ ದಿನಗಳ ನಂತರ ಪೀಡಿತ ಪತ್ನಿಯರು - ತಮ್ಮ ಪೀಡಕ ಪತಿಯರ ವಿರುದ್ಧ ನೀಡಿದ್ದ ದೂರಗಳನ್ನು ವಾಪಸ್ಸು ಪಡೆದು ಮತ್ತೆ ಅವರೊಡನೆ ಸಂಸಾರ ಮಾಡಲಾರಂಭಿಸುತ್ತಾರೆ!

ಮೇಲಿನ ಎಲ್ಲಾ ಸಂದರ್ಭಗಳಲ್ಲೂ ಬಹುಪಾಲು ಹೆಣ್ಣೇ ಸೋತು ವ್ಯವಸ್ಥೆಯ ಜೊತೆ ಹೊಂದಿಕೊಂಡು ಹೋಗುವುದು ಮಾಮೂಲು ಪ್ರಕ್ರಿಯೆಯಾಗಿದೆ. ಒಂದು ಕಾಲವಿತ್ತು; ಹೆಣ್ಣು ಹೊರಗಡೆ ದುಡಿಯಲು ಹೋಗುತ್ತಿರಲಿಲ್ಲ. ಅವಳಿಗೆ ಅವಳದೇ ಆದ ಆರ್ಥಿಕ ಸಂಪನ್ಮೂಲಗಳಿರಲಿಲ್ಲ. ಅವಳು ಜನ್ಮದಿಂದ ಹಿಡಿದು ಮರಣದವರೆಗೆ ಪರಾವಲಂಬಿಯೇ ಆಗಿರಬೇಕಾದ ಅನಿವಾರ್ಯತೆ ಸೃಷ್ಟಿಯಾಗಿತ್ತು. ಇದು ಜಗತ್ತಿನ ಹೆಚ್ಚುಕಡಿಮೆ ಎಲ್ಲ ಸಾಮಾಜಿಕ

- ಧಾರ್ಮಿಕ ವ್ಯವಸ್ಥೆಗಳಲ್ಲಿ ಸಮಾನವಾಗಿ ಕಂಡುಬರುವ ಅಂಶ. ಅಲ್ಲಿ ಹೆಣ್ಣೆ ಅಧೀನೆ. ಅವಳು ಸಂತಾನ ಮುಂದುವರಿಸುವ ಸಾಧನ; ಸುಖ ನೀಡುವ ಭೋಗ ವಸ್ತು, ಸರಕು! ಸರಕು ಎಂದು ಭಾವಿಸಿದ ಮೇಲೆ ಬಳಸುವ ವಸ್ತು. ಅದರ ಪ್ರಯೋಜನ ಮುಗಿದ ನಂತರ ಅದರ ಅಸ್ತಿತ್ವಕ್ಕೆ ಬೆಲೆಯಿಲ್ಲ. ಇದು ಚರಿತ್ರೆಯುದ್ದಕ್ಕೂ ಹೆಣ್ಣನ್ನು ನಡೆಸಿಕೊಂಡು ಬಂದಿರುವ, ಕಂಡಿರುವ, ಅವಳ ಮಾನಸಿಕ ನೆಲೆಯನ್ನು ನೆಯ್ದಿರುವ ಪರಿ. ಈ ಬಗೆಯ ನೆಯ್ಗೆಯನ್ನು ಪುರುಷ ಮನಸ್ಸು ತನ್ನ ಸುಖಕ್ಕಾಗಿ ಆಚಾರ, ಸಂಪ್ರದಾಯ, ಧಾರ್ಮಿಕ ವಿಧಿವಿಧಾನಗಳೆಂಬ ಹುಸ್ನಾರಗಳ ಮೂಲಕ ಅತ್ಯಂತ ಸೂಕ್ಷ್ಮವೂ ಸಂಕೀರ್ಣವೂ ಮನಮೋಹಕವೂ ಆಗಿರುವಂತೆ ಕುಸುರಿಸಿದೆ. ಈ ನೆಯ್ಗೆಯ ಸೂಕ್ಷ್ಮಮೋಹಕತೆಯಲ್ಲಿ ಹೆಣ್ಣಿನ ರಕ್ಷಣೆಯೂ ಸುಖವೂ ಅಡಗಿದೆಯೆಂದು ನಂಬಿಸಲಾಗಿದೆ. ದುರಂತವೆಂದರೆ ಆಧುನಿಕ ಕಲಿತ ಹೆಣ್ಣು ಕೂಡ ಇಂಥ ಸಾಮಾಜಿಕ ಬದುಕನ್ನು ಜೀವಿಸಲು ಅನೇಕ ಸಂದರ್ಭಗಳಲ್ಲಿ ಒಪ್ಪಿಕೊಂಡುಬಿಡುವುದು! ಅತ್ಯಾಧುನಿಕ ಜೀವನ ಶೈಲಿಯಿಂದ ರೂಪುಗೊಳ್ಳುತ್ತಿರುವ ಇಂದಿನ ತರುಣಿಯರು ಸದಾ ತಮ್ಮ ಬೇಕುಬೇಡಗಳನ್ನು ಪೂರೈಸಲು ತಮ್ಮ ಬೆಂಗಾವಲಿಗೆ ರಕ್ಷಣಾ ರೂಪವಾಗಿ ಕೆಲಸ ಮಾಡುವ ತರುಣನೊಬ್ಬನನ್ನು ತಮ್ಮೊಡನೆ ಇಟ್ಟುಕೊಳ್ಳಬಯಸುತ್ತಿರುವುದನ್ನು ಈ ನೆಲೆಯಿಂದ ನಾವಿಂದು ಅಧ್ಯಯನ ಮಾಡಬೇಕಿದೆ. ಇದು ಪುರುಷನನ್ನು ತನ್ನ ಅಗತ್ಯಗಳ ಪೂರೈಕೆಯ ಸೇವಕನನ್ನಾಗಿ ರೂಪಿಸುತ್ತಿದ್ದಾಳೆಂದು ವ್ಯಾಖ್ಯಾನಿಸುವುದು ತುಂಬ ಸರಳವೆಂದು ತೋರುತ್ತದೆ. ಆಧುನಿಕ ವಿದ್ಯೆಯಿಂದ ಸಬಲವಾಗುತ್ತಿರುವುದರ ಜೊತೆಗೆ ಸಂಪ್ರದಾಯಬದ್ಧ ನಿಯಮಗಳಿಗೆ ದಾಸಿಯಂತೆ ನಡೆದುಕೊಳ್ಳುತ್ತಿರುವ ಸ್ತ್ರೀಯರ ವರ್ತನೆಗಳನ್ನು ಮನಶ್ಶಾಸ್ತ್ರೀಯ ನೆಲೆಗಳಿಂದ ವಿಶ್ಲೇಷಿಸಿ, ಲಿಂಗಸಮಾನತೆಯ ಅಗತ್ಯಗಳತ್ತ ಅವಳನ್ನು ಚಿಂತಿಸುವಂತೆ ರೂಪಿಸಬೇಕಾಗಿದೆ. ಕೇವಲ ಆರ್ಥಿಕ ಸಬಲತೆಯೊಂದೇ ಸ್ತ್ರೀಯನ್ನು ದಾಸ್ಯದಿಂದ ಬಿಡುಗಡೆ ಮಾಡಲಾಗದು; ಅವಳು ಬೌದ್ಧಿಕವಾಗಿ ಸ್ವತಂತ್ರಳಾಗಬೇಕು. ಆಗ ರಿಹಾನ್ನಳಂಥ ಆಧುನಿಕರು ಮತ್ತೆ ಪುರುಷನ ಕ್ರೌರ್ಯಕ್ಕೆ ಅಥವಾ ಅವನ ಅಹಂ ಅನ್ನು ತೃಪ್ತಿಪಡಿಸುವ ಹುಸಿ ತೃಪ್ತಿಗೆ ಬಲಿಯಾಗರು.

ಪುರುಷನ ಮತ್ತು ತನ್ನ ಮಕ್ಕಳ ಎಲ್ಲ ಹಿಂಸೆಯನ್ನು ಸಹಿಸಿಕೊಳ್ಳುವ ಸಹನೆ ಹಾಗೂ ಅವರ ಎಲ್ಲಾ ತಪ್ಪುಗಳನ್ನು ಕ್ಷಮಿಸಿ, ಸಾಕುವ ಮಾತೃತ್ವದ ಗುಣ ಸಹಜವಾಗಿ ಹೆಣ್ಣಿಗಿದೆ. ಅದನ್ನೇ ಅವಳ ದೌರ್ಬಲ್ಯವೆಂದು ಪುರುಷ ಜಗತ್ತು ಭಾವಿಸಬಾರದು ಮತ್ತು ಆ ಗುಣವನ್ನು ಅಮೋಘವೆಂದು ವೈಭವೀಕರಿಸಿ, ಅವಳನ್ನು ಭಾವುಕಗೊಳಿಸಿ 'ಪುರುಷ ಮಾಯಾಜಾಲ'ದಲ್ಲಿ ಬೀಳಿಸಬಾರದು. ಪುರುಷನ ಚರಿತ್ರೆಯುದ್ದಕ್ಕೂ ನಡೆದು ಬಂದ ಈ ತಂತ್ರಗಾರಿಕೆಯನ್ನು ಮಹಿಳೆ ಅರ್ಥಮಾಡಿಕೊಂಡು 'ಮಾನಸಿಕವಾಗಿ' ಸೋಲುವುದರ ಬಗ್ಗೆ ಎಚ್ಚೆತ್ತುಕೊಳ್ಳಬೇಕು.

ಇಂದಿನ ಸಾಮಾಜಿಕ, ಸಾರ್ವಜನಿಕ ರಂಗದ ಎಲ್ಲ ಬಗೆಯ ಕರ್ತವ್ಯ ನಿರ್ವಹಣೆಯ ಪಾತ್ರಗಳನ್ನು ಮಹಿಳೆ ಯಶಸ್ವಿಯಾಗಿ ನಿರ್ವಹಿಸುತ್ತಿದ್ದಾಳೆ. ಇಂಥ ಸಂದರ್ಭದಲ್ಲಿ ಕೆಲವರಾದರೂ ಪುರುಷನ ಸಾಂಪ್ರದಾಯಿಕ ಹಿಡಿತಗಳಿಂದ ಬಿಡಿಸಿಕೊಂಡು ಬೌದ್ಧಿಕವಾಗಿ ಬೆಳೆದು ನಿಂತಿರುವುದು ಸಮಾನತೆಯ ಆಶಾಕಿರಣ.

೧೪-೦೩-೨೦೧೩

# ಸಾವಿನ ಭಯ

ಸ್ವರಕ್ಷಣೆಯ ಅಭಿವ್ಯಕ್ತಿ ಸ್ವರೂಪವೇ ಭಯ. ಸ್ವರಕ್ಷಣೆಯು ಎರಡು ವಿಧದಲ್ಲಿ ಸಂದರ್ಭಾನುಸಾರ ಪ್ರಕಟಗೊಳ್ಳುತ್ತದೆ. ಒಂದು - ದೈಹಿಕ ರಕ್ಷಣೆಯ ಆಶಯವಾದರೆ, ಮತ್ತೊಂದು ಬೌದ್ಧಿಕ ರಕ್ಷಣೆಯ ಉದ್ದೇಶದಿಂದ ಕೂಡಿರುವಂಥದ್ದು. ಈ ಎರಡನೆಯ ರಕ್ಷಣೆಯ ಪರಿಧಿಯಲ್ಲಿ ಮನಸ್ಸಿಗುಂಟಾಗುವ ಎಲ್ಲ ಭಯಮೂಲಗಳನ್ನು ಸೇರಿಸಿಕೊಳ್ಳಬಹುದು. ತಮ್ಮನ್ನು ತಾವು ಬೌದ್ಧಿಕ ಮಾನಸಿಕ ಪ್ರಕ್ರಿಯೆಗಳ ಎಲ್ಲ ಹಂತಗಳಲ್ಲಿ ಇತರರಿಂದ ರಕ್ಷಿಸಿಕೊಳ್ಳುವುದು ಇದರ ಉದ್ದೇಶ. ಬೌದ್ಧಿಕ - ಮಾನಸಿಕಗಳಿಂದುಂಟಾಗುವ ಆಘಾತಗಳಿಂದ ತಮ್ಮ ಬುದ್ಧಿ-ಮನಸ್ಸು-ಆತ್ಮಗಳನ್ನು ರಕ್ಷಿಸಿಕೊಳ್ಳುವುದರಿಂದ ಒಂದು ಬಗೆಯ ತೃಪ್ತಿ-ಸಮಾಧಾನ ದೊರೆಯುತ್ತದೆ. ಇದರಿಂದ ವ್ಯಕ್ತಿಗೆ ತನ್ನ ಪರಿಸರದಲ್ಲಿ ಆಗಬಹುದಾದ ಅವಮಾನಗಳು ತಪ್ಪಿ, ಸ್ಥಾನಮಾನಗಳು ಹಿರಿದಾಗಬಹುದು. ಈ ಬಗೆಯ ತೃಪ್ತಿಯು - ಅಹಂಕಾರದ ಈಡೇರಿಕೆಯು ಅವನ ದೈಹಿಕ ಆರೋಗ್ಯವನ್ನು ಹೆಚ್ಚಿಸಬಹುದು. ಆದರೆ ಈ ತೃಪ್ತಿ ಅತಿಯಾದಾಗ ಆತ್ಮರತಿಯ ವ್ಯಾಮೋಹವುಂಟಾಗಿ ರೋಗವಾಗಿಯೂ ಪರಿಣಮಿಸಬಹುದು. ಇಲ್ಲಿ ಸ್ವವಿಮರ್ಶೆ ಮತ್ತು ವಿವೇಕಗಳು ಕೆಲಸ ಮಾಡಬೇಕಾಗುತ್ತದೆ.

ದೈಹಿಕ ರಕ್ಷಣೆಯ ಭಯವು ಬಹುಪಾಲು ಪ್ರವೃತ್ತಿಮಟ್ಟದಲ್ಲಿ ಅಭಿವ್ಯಕ್ತವಾಗುತ್ತದೆ. ನಮ್ಮ ಸುಪ್ತ ಮನಸ್ಸು ಸದಾ ತನ್ನ ದೇಹವನ್ನು ಸಂರಕ್ಷಿಸುವ ಕೆಲಸದಲ್ಲಿ ಜಾಗೃತವಾಗಿರುವುದರಿಂದ ನಮ್ಮ ದೇಹ ಯಾವುದೇ ಸೂಕ್ಷ್ಮ ಅಪಾಯಗಳಿಗೂ ಸ್ವರಕ್ಷಣೆಯ ಹಾದಿಯಲ್ಲಿ ವರ್ತಿಸುತ್ತದೆ. ನಮ್ಮ ದೇಹವು ಪ್ರಕೃತಿ ವಿಕೋಪಗಳಿಂದ ರಕ್ಷಿಸಿಕೊಳ್ಳಲು, ಮೃಗಗಳಿಂದ ಪಾರಾಗಲು ಮತ್ತು ತನಗಿಂತ ಬಲಶಾಲಿಯಾದ ಶತ್ರುವಿನಿಂದ ಮುಕ್ತನಾಗಲು ಬೌದ್ಧಿಕ ಶಕ್ತಿಯ ನೆರವನ್ನು ಪಡೆಯುತ್ತದೆ. ಈ ಕಾರಣದಿಂದ ರಕ್ಷಣಾತ್ಮಕ ಬೌದ್ಧಿಕ ಶಕ್ತಿಯು ಪ್ರಾಣಿಗಳಲ್ಲಿ ವೃದ್ಧಿಯಾಗುತ್ತಾ ಸಾಗಿಬಂದಿದೆ. ತಮ್ಮ ಮತ್ತು ತಮ್ಮ ಸಂಕುಲಗಳ ರಕ್ಷಣೆಯ ಕಾರಣದಿಂದಾಗಿಯೇ ನಾಗರಿಕತೆಯ ಹಲವಾರು ಮಜಲುಗಳು, ವಿಜ್ಞಾನ-ತಂತ್ರಜ್ಞಾನದ ಅನೇಕ ಬಗೆಯ ಕೌಶಲಗಳು ಸೃಷ್ಟಿಯಾಗಿವೆ.

ತನಗೆ, ತನ್ನ ಕುಟುಂಬಕ್ಕೆ ಅಥವಾ ಸಮುದಾಯಕ್ಕೆ ಬರಬಹುದಾದ ಅಪಾಯಗಳನ್ನು ನಿರೀಕ್ಷಿಸುವ ವ್ಯಕ್ತಿ ಸ್ವರಕ್ಷಣೆಗಾಗಿ ಅನೇಕ ಬಾರಿ ಬುದ್ಧಿಶಾಲಿಯಾಗುವುದರ ಜೊತೆಗೆ ದುಷ್ಟನೂ ಆಗಬಹುದು. ನೂರು ಜನ ಸೋದರರನ್ನು ಹೊಂದಿದ್ದ ದೊರೆ ದುರ್ಯೋಧನ ಕೇವಲ ಐವರೇ ಐವರು ಪಾಂಡವರಿಗೆ ಹೆದರಿಕೊಂಡಿದ್ದಾದರೂ ಏಕೆ? ಬಾಲ್ಯದಿಂದಲೂ ಪಾಂಡವರನ್ನು ಹತ್ತಿರದಿಂದ ನೋಡಿದ್ದ ಅವನಿಗೆ ಅವರ ದೈಹಿಕ - ಬೌದ್ಧಿಕ ಸಾಮರ್ಥ್ಯಗಳು ದಿಗಿಲುಂಟು

ಮಾಡಿದ್ದವು. ಹತ್ತು ಸಾವಿರ ಆನೆಗಳ ಬಲವುಳ್ಳ ಭೀಮಸೇನನ ಸಾಮರ್ಥ್ಯವಂತೂ ಅವನಲ್ಲಿ ವಿಶೇಷವಾದ ಸಾವಿನ ಭಯವನ್ನು ಮೂಡಿಸಿತ್ತು. ಏಕ ಕಾಲದಲ್ಲಿ ತನ್ನ ಒಂದೊಂದು ಕೈಯಲ್ಲಿಯೇ ಭೀಮನು ದುರ್ಯೋಧನನ ಸೋದರರನ್ನು ಹಣ್ಣುಗಾಯಿ ನೀರುಗಾಯಿ ಮಾಡುತ್ತಿದ್ದನಂತೆ! ಈ ಪರಿಯ ಸಂಕಟವನ್ನು ಅನುಭವಿಸುತ್ತಿದ್ದ ತನ್ನವರನ್ನು ರಕ್ಷಿಸಲು ಸದಾ ಪಾಂಡವರು ಹಸ್ತಿನಾವತಿಯಿಂದ ದೂರವಿರುವಂಥ ಯಾವುದಾದರು ಕುಟಿಲ ಉಪಾಯವನ್ನು ದುರ್ಯೋಧನನು ಯೋಚಿಸುತ್ತಿದ್ದ. ಅದು ತನ್ನವರ ರಕ್ಷಣೆಯ ದೃಷ್ಟಿಯಿಂದ ಅನಿವಾರ್ಯವೂ ಆಗಿತ್ತು. ತನ್ನ ದುಷ್ಟ ಚತುಷ್ಟಯ ಕಾರಸ್ಥಾನದಲ್ಲಿ ಅವನು ಈ ಬಗ್ಗೆ ತಂತ್ರ ಹೆಣೆಯುತ್ತಿದ್ದ. ಇದು ಸಾವಿನ ಭಯದ ಮೂರ್ತ ಅಭಿವ್ಯಕ್ತಿ ಸ್ವರೂಪ.

ಸಾವಿನ ಭಯವನ್ನು ಗೆಲ್ಲುವುದು ಸಾಮಾನ್ಯರಿಂದ ಸಾಧ್ಯವಾಗುವ ಮಾತಲ್ಲ. ಸಾವಿನ ಹೊಸ್ತಿಲಲ್ಲಿ ಉಸಿರಾಡುವ ಸಂದರ್ಭದಲ್ಲೂ ಬದುಕುವ ಆಶೆ ಬಲವಾಗಿಯೇ ಕೆಲಸ ಮಾಡುತ್ತಿರುತ್ತದೆ. ಅದನ್ನು ತಪ್ಪೆಂದು ಯಾರೂ ಭಾವಿಸಬಾರದು. ಅದು ಜೀವಿಯ ನೈಜಕ್ರಿಯೆ. ಸದಾ ಸಾವನ್ನು ಎದುರಿಸಿ ಸವಾಲಾಗಿ ತೆಗೆದುಕೊಂಡು ಬದುಕುವುದೇ ಜೀವನದ ಸಹಜ ಪರಿಕ್ರಮ.

ಸಮಾಜದ ಒಳಿತಿಗೆ, ದೇಶದ ದಾಸ್ಯ ಬಿಡುಗಡೆಗೆ ಸಾವನ್ನು ತಾವಾಗಿಯೇ ಸ್ವೀಕರಿಸಲು ಸಿದ್ಧರಾದವರು ಚರಿತ್ರೆಯಲ್ಲಿ ನಮಗೆ ಸಿಗುತ್ತಾರೆ. ಚಂದ್ರಶೇಖರ್ ಆಜಾದ್, ಭಗತ್ ಸಿಂಗ್ ಅಂಥವರು ತಮ್ಮ ಅದಮ್ಯ ದೇಶ ಪ್ರೇಮದ ಫಲವಾಗಿ ಧೀರತನದಿಂದ ಸಾವನ್ನು ಸ್ವೀಕರಿಸುತ್ತಾರೆ. ಅವರಿಗೆ ತಮ್ಮ ದೇಹ ಮುಖ್ಯವಲ್ಲ; ಅದರ ವೈಯಕ್ತಿಕ ವ್ಯಾಮೋಹ ಮುಖ್ಯವಲ್ಲ. ದೇಶದ ಮುಂದೆ ತನ್ನದು ಮತ್ತು ತನ್ನತನವೆಂಬುದು ತೃಣವೆಂದು ಅವರು ಬಗೆದಿದ್ದರು. ದೇಶ ಪ್ರೇಮವೆಂಬುದು ಅವರಿಗೊಂದು ಸೈದ್ಧಾಂತಿಕ ಬದ್ಧತೆಯಾಗಿತ್ತು.

ಅದರಂತೆಯೇ ಸೈದ್ಧಾಂತಿಕ ಬದ್ಧತೆಯ ಉಗ್ರಗಾಮಿಗಳು ಮತ್ತು ಮತೀಯ ಉಗ್ರಗಾಮಿಗಳು ಭಿನ್ನರೀತಿಯ ನಂಬಿಕೆ ಮತ್ತು ಶ್ರದ್ಧೆಗಳಿಂದ ತಮ್ಮ ಪ್ರಾಣಹತ್ಯೆ ಮಾಡಿಕೊಳ್ಳಲು ಸಿದ್ಧರಾಗುತ್ತಾರೆ. ಇವರಿಗೆ ಸಮುದಾಯಕ್ಕಿಂತ ಅಥವಾ ದೇಶಕ್ಕಿಂತ ತಾವು ನಂಬಿರುವ ತತ್ತ್ವದ ಶ್ರದ್ಧೆಯೇ ಮುಖ್ಯವಾಗಿಬಿಡುತ್ತದೆ.

ಸಾವು ಸೃಷ್ಟಿಯಂತೆಯೇ ಅನಿವಾರ್ಯ ಕ್ರಿಯೆ. ರನ್ನನ ಸಗರ ಚಕ್ರವರ್ತಿ ಹೇಳುವಂತೆ 'ಮಾನವ ಜಂತುಗಳೆಂದು ಪುಟ್ಟಿದರೋ ಅಂದೇ ಸತ್ತರ್!' ಈ ಸತ್ಯವನ್ನು ಮನದ ಮೂಲೆಯಲ್ಲಿ ಭದ್ರಪಡಿಸಿಕೊಂಡು ಮನುಷ್ಯ ನೈತಿಕ ಸಹಜ ನೆಲೆಯಲ್ಲಿ ಬದುಕುವುದು ಮುಖ್ಯವಾಗುತ್ತದೆ.

೨೮-೦೩-೨೦೧೩

# ನಾನು, ನನ್ನದು

ಅದ್ವೈತ ಶಿಖಾಮಣಿ ಶ್ರೀ ಶಂಕರಾಚಾರ್ಯರು ವ್ಯಕ್ತಿಯ ಸಮಸ್ತ ದುಃಖಕ್ಕೆ ಮೂಲ ಕಾರಣ ಅವನಲ್ಲಿರುವ 'ತಾನು ಮತ್ತು ತನ್ನದು' ಎಂಬ ಮೋಹಗಳು ಎಂದು ಹೇಳಿದ್ದಾರೆ. ಹಾಗೆ ನೋಡಿದರೆ ವ್ಯಕ್ತಿಯ ಬದುಕಿನ ಎಲ್ಲಾ ರುಚಿ ಮತ್ತು ಅಭಿರುಚಿಗಳು ಈ 'ತಾನು ಮತ್ತು ತನ್ನದು' ಎಂಬ ಆಂತರಿಕ ಭಾವದ ಆಕಾಂಕ್ಷೆಗಳ ಅಭಿವ್ಯಕ್ತ ಸ್ವರೂಪಗಳೇ ಆಗಿವೆ. ಶಂಕರಾಚಾರ್ಯರು 'ತಾನು ಮತ್ತು ತನ್ನದು' ಎಂಬ ಈ ಉಪಾದಿಗಳ ಬಗ್ಗೆ ಹೊಸದಾಗಿ ಹೇಳುತ್ತಿಲ್ಲ. ಬಹು ಸೂಕ್ಷ್ಮವಾಗಿ ಅವಲೋಕಿಸಿದರೆ ಬುದ್ಧನ 'ಆಸೆಯೇ ದುಃಖಕ್ಕೆ ಮೂಲ ಕಾರಣ' ಎಂಬ ಸಿದ್ಧಾಂತದ ವಿವರಣಾ ರೂಪವಾಗಿ ಅದು ಕಾಣುತ್ತಿದೆ. ವ್ಯಕ್ತಿಯಲ್ಲಿ 'ತಾನು ಮತ್ತು ತನ್ನದು' ಎಂಬ ಭಾವಗಳನ್ನು ತೃಪ್ತಿಪಡಿಸಿಕೊಳ್ಳುವ ಅವನ ಕ್ರಿಯಾ ರೂಪಗಳೇ ಅವನ ಬದುಕಿನ ಉದ್ದೇಶಿತ ನಡೆಗಳಾಗಿರುತ್ತವೆ. ಈ ನಡೆಗಳು ತನ್ನ ವೈಯಕ್ತಿಕ ಈಡೇರಿಕೆಗಳ ಪರಿಧಿಯಲ್ಲೇ ಮಿತ ಸ್ವರೂಪದ ವ್ಯಾಪ್ತಿಯಲ್ಲಿದ್ದಾಗ ಅದರಿಂದ ಸಮಾಜದ ಇನ್ನಿತರ ಮನುಷ್ಯ - ಪ್ರಾಣಿ, ಸಸ್ಯ ಸಂಕುಲಗಳ ಬದುಕಿನ ಅಸ್ತಿತ್ವಕ್ಕೆ ಧಕ್ಕೆ ಬರುವುದಿಲ್ಲ. ಆದರೆ ಅದು ಮಿತಿ ಮೀರಿದಾಗ ದುರಾಸೆಯ ವ್ಯಾಪ್ತಿಗೆ ವಿಸ್ತರಿಸಿ ಕಬಳಿಕೆ ಸ್ವರೂಪವನ್ನು ಪಡೆಯುತ್ತದೆ. ಈ 'ಜಗತ್ತಿನ ಸಮಸ್ತವೆಲ್ಲವೂ ಇರುವುದು ತನಗಾಗಿಯೇ' ಎಂಬ ದುರಾಸೆಯಿಂದ ಅವನು ಲೋಭಿಯಾಗುತ್ತಾನೆ.

ಈ ಲೋಭತ್ವ ಅಷ್ಟು ಸುಲಭವಾಗಿ ಈಡೇರುವಂಥದ್ದಲ್ಲ. ಏಕೆಂದರೆ ಪ್ರತಿಯೊಂದು ವ್ಯಕ್ತಿ ಘಟಕವು ಇದೇ ಬಗೆಯ ತನ್ನ ಲೋಭತ್ವದ ಈಡೇರಿಕೆಗಾಗಿ ಮತ್ತೊಂದು ವ್ಯಕ್ತಿ ಘಟಕದ ಜೊತೆ ಸ್ಪರ್ಧಿಸುತ್ತಿರುತ್ತದೆ. ಈ ಬಗೆಯ ಸ್ಪರ್ಧೆ ಅಲ್ಪ ಗೆಲುವುಗಳನ್ನೂ ಅಧಿಕ ಸೋಲುಗಳನ್ನೂ ತಂದೊಡ್ಡುವುದರಿಂದ ಶಂಕರಾಚಾರ್ಯರು ಹೇಳುವಂತೆ ವ್ಯಕ್ತಿಗೆ ನೋವು ಸಹಜವಾಗಿ ಉಂಟಾಗುತ್ತದೆ. ವ್ಯಕ್ತಿಯಲ್ಲಿರುವ 'ತಾನು ಮತ್ತು ತನ್ನದು' ಎಂಬ ಭಾವಗಳು ಈಡೇರದಿದ್ದಾಗ, ಅವು ನೇರವಾಗಿ ಅವನೊಳಗಿರುವ ಅಹಂಕಾರಕ್ಕೆ ಪೆಟ್ಟು ತಾಗುತ್ತದೆ. ವ್ಯಕ್ತಿಯ ಅಂತರಂಗದ 'ಅಹಂ'ಗೆ ನೋವುಗಳುಂಟಾದಾಗ, ಅದು ಕುಟುಂಬದ ಮಟ್ಟದಲ್ಲಾಗಲೀ, ಸಾಮಾಜಿಕ ಮಟ್ಟದಲ್ಲಾಗಲೀ ವ್ಯಕ್ತಿ ಅವಮಾನವೆಂದೇ ಭಾವಿಸುತ್ತಾನೆ. ಇದು ವ್ಯಕ್ತಿಯ ದೈಹಿಕ ಸೋಲುಗಳಿಗಿಂತ ಮಿಗಿಲಾಗಿ ಅಂತರಂಗದ ಸೋಲುಗಳಿಂದುಂಟಾಗುವ ಪ್ರಕ್ರಿಯೆಯ ಅಭಿವ್ಯಕ್ತಿ.

ಈ 'ತಾನು ಮತ್ತು ತನ್ನದು' ಎಂಬ ಪರಿಕಲ್ಪನೆ ವ್ಯಕ್ತಿ ಘಟಕವನ್ನು ಮೀರಿ ಕುಟುಂಬದ ವ್ಯಾಪ್ತಿಗೂ ಅನೇಕ ಸಂದರ್ಭಗಳಲ್ಲಿ ವಿಸ್ತರಿಸುತ್ತದೆ. ಕೇವಲ ತನಗೊಬ್ಬನಿಗಾಗುವ ಅವಮಾನಗಳಿಂದ ಮಾತ್ರವಲ್ಲದೇ ವ್ಯಕ್ತಿಯು ಕುಟುಂಬದ ಇತರ ಸದಸ್ಯರ ನಡೆಯಿಂದ ಸಮಾಜದ

ಕಣ್ಣಳತೆಯಲ್ಲಿ ಕುಸಿಯುವ ಸಂದರ್ಭಗಳು ಬಂದಾಗ ಅಪಾರವಾದ ನೋವನ್ನನುಭವಿಸುತ್ತಾನೆ. ಈ ಕ್ರಿಯೆಯನ್ನು ತನ್ನ ಕುಟುಂಬದ ಸದಸ್ಯರು ತನಗೆ ಸಾಮಾಜಿಕ ಮಟ್ಟದಲ್ಲಿ ಮಾಡಿದ ಅವಮಾನವೆಂದು ಭಾವಿಸಿ ದುಃಖಿತನಾಗುತ್ತಾನೆ. ಇದೂ ಕೂಡ ಅವನೊಳಗಿರುವ 'ಅಹಂ'ನ ಅಭಿವ್ಯಕ್ತಿಯ ಮತ್ತೊಂದು ರೂಪವೇ ಆಗಿದೆ.

ಈ 'ತಾನು ಮತ್ತು ತನ್ನದು' ಎಂಬ ವರ್ತುಲದಿಂದ ಅಷ್ಟು ಸುಲಭವಾಗಿ ಬಿಡಿಸಿಕೊಳ್ಳಲು ಆಗುವುದಿಲ್ಲ. ಏಕೆಂದರೆ ವ್ಯಕ್ತಿ ಮೂಲತಃ ಕುಟುಂಬ ಜೀವಿ. ಕುಟುಂಬದ ಸಮಸ್ತ ಬಂಧುಗಳ ನಡುವೆ ವಂಶವಾಹಿಗಳ ಬೆಸುಗೆಯ ಕೊಂಡಿ ಹೆಣೆದುಕೊಂಡಿರುತ್ತದೆ. ಈ ಕೊಂಡಿಯ ಯಾವುದೇ ಒಂದು ಘಟಕ ಸಡಿಲಗೊಂಡರೂ ಕೊಂಡಿಯ ಬಿಗಿ ತಪ್ಪುತ್ತದೆ. ಆಗ ಬಂಧದ ಬಿಗಿ ತಪ್ಪುವುದರಿಂದ ಅದು ನೋವುಗಳ ಅಮೂರ್ತ ಸ್ವರೂಪದ ಮತ್ತೊಂದು ಬಗೆಯ ಸರಪಳಿಗಳನ್ನು ಸೃಷ್ಟಿ ಮಾಡಿಬಿಡುತ್ತದೆ. ಅದೇ ರೀತಿ ಇದೇ ಬಗೆಯ ಪ್ರಕ್ರಿಯೆ ಸಮಾಜ - ದೇಶಕ್ಕೂ ವಿಸ್ತರಿಸುತ್ತದೆ. ದೇಶದಲ್ಲಿ ಅಸಮಾನತೆಗಳು ತಾಂಡವವಾಡಿದಾಗ, ಭ್ರಷ್ಟಾಚಾರ ಅಧಿಕಗೊಂಡಾಗ, ಅನೈತಿಕ ನಡೆ ಎಲ್ಲೆಡೆ ವಿಜೃಂಭಿಸಿದಾಗ ಶುದ್ಧ ಚಾರಿತ್ರ್ಯದ ವ್ಯಕ್ತಿ ಘಟಕಗಳಿಗೆ ನೋವುಂಟಾಗುತ್ತದೆ. ಏಕೆಂದರೆ ವ್ಯಕ್ತಿಯನ್ನು ಈ ಸಮಾಜವನ್ನು ದೇಶವನ್ನು 'ತನ್ನ ಮತ್ತು ತನ್ನದು' ಎಂಬ ಭಾವನೆಯು ಬಂಧಿಸಿರುತ್ತದೆ. ಇದನ್ನು ಬೇಕಾದರೆ ನಾವು ಸಮಾಜ ಪ್ರೇಮ ಅಥವಾ ದೇಶ ಪ್ರೇಮ ಎಂದು ಕರೆಯಬಹುದು. ಈ ಪ್ರೇಮನಿಷ್ಠೆಗೆ ಭಂಗ ತರುವಂಥ ಘಟನೆಗಳು ಸಮಾಜದಲ್ಲಿ ನಡೆಯುತ್ತಿರುವಾಗ ಜಾಗತಿಕ ಮಟ್ಟದಲ್ಲಿ ತಮಗೆ ಅವಮಾನವಾಗುತ್ತಿದೆಯೆಂದು ವ್ಯಕ್ತಿ ಭಾವಿಸಿ ನೋವುಣ್ಣುತ್ತಾನೆ.

೧೧-೦೪-೨೦೧೩

## ಜಾತಿ ಸೂಚಕ ಹೆಸರುಗಳು!

ಭಾರತದ ಸ್ವಾತಂತ್ರ್ಯ ಹೋರಾಟದ ಕಾಲ ಮತ್ತು ಅನಂತರದ ಪ್ರಾರಂಭದ ಕಾಲ ನಿಜಕ್ಕೂ ಕನಸು ಕಟ್ಟುವ, ಆದರ್ಶವನ್ನು ಎದೆಯಲ್ಲಿ ಬಿತ್ತಿಕೊಳ್ಳುವ ಕಾಲಮಾನವಾಗಿತ್ತು. ಶತ ಶತಮಾನಗಳಿಂದ ಅಕ್ಷರ ವಂಚಿತವಾಗಿ ಬೆಳಕಿನ ಕಿಂಡಿಗಳನ್ನು ಕಾಣದಾಗಿದ್ದ ಭಾರತದ ಬಹುಸಂಖ್ಯಾತ ಮಂದಿ ಮೊಟ್ಟಮೊದಲ ಬಾರಿಗೆ ಬೆಳಕಿನ ನಿಜವಾದ ಸ್ವಾದವನ್ನು, ಆ ಬೆಳಕು ತಂದುಕೊಡುವ ಆತ್ಮಾಭಿಮಾನದ ಹೆಮ್ಮೆಯನ್ನು, ಅನುಭವಿಸಲು ಪ್ರಾರಂಭವಾದ ಕಾಲ. ಭಾರತದ ಶತಮಾನಗಳ ಅಜ್ಞಾನ ತಿಮಿರಕೂಪವಾಸಕ್ಕೆ ನಮ್ಮಲ್ಲಿ ಮಡುಗಟ್ಟಿದ್ದ ಜಾತಿವ್ಯವಸ್ಥೆ, ಮತಮೌಢ್ಯಗಳು ಮುಖ್ಯ ಕಾರಣವೆಂದು ಆ ಕಾಲಮಾನದ ಶಿಕ್ಷಣ ತಂದುಕೊಟ್ಟ ತಿಳಿವಾಗಿತ್ತು. ಆ ತಿಳಿವನ್ನು ವಿಸ್ತರಿಸುವ ಕೆಲಸವನ್ನು ಆಗಿನ ಕಾಲದ ಧೀಮಂತರಾದ ವಿವೇಕ, ಅರವಿಂದ, ಗಾಂಧಿ ಮುಂತಾದವರು ಮಾಡಿದರು. ಈ ತಳಹದಿಯ ಮೇಲೆ ಮುಂದೆ ಬಂದ ಲೋಹಿಯಾ, ಅಂಬೇಡ್ಕರ್ ಸಮಾಜದ ಸಂರಚನೆಯನ್ನು ಸೂಕ್ಷ್ಮವಾಗಿ ವಿಶ್ಲೇಷಣೆ ಮಾಡಿ ಜಾತಿವ್ಯವಸ್ಥೆ, ಮತಮೌಢ್ಯಗಳಿಂದ ಬಿಡುಗಡೆ ಹೊಂದುವುದು ಎಂದರೆ ಸ್ವಾತಂತ್ರ್ಯ ಪಡೆದುದಕ್ಕಿಂತ ಮೌಲಿಕವಾದದು ಎಂಬುದನ್ನು ಮನವರಿಕೆ ಮಾಡಿಕೊಟ್ಟರು. ಕನ್ನಡ ಸಂಸ್ಕೃತಿ ಸಂದರ್ಭದಲ್ಲಿ ಕುವೆಂಪು ಅವರು ತಮ್ಮ ಗದ್ಯ ಪದ್ಯಗಳಲ್ಲಿ ಜಡಮನಸ್ಸುಗಳನ್ನು ತಿದ್ದುವ, ಸರಿದಾರಿಯಲ್ಲಿ ಕರೆದೊಯ್ಯುವ ನಿಜವಾದ ನಾಡೋಜನ ಕೆಲಸವನ್ನು ಮಾಡಿದರು.

ಇಂಥ ಉದಾರ ತಿಳಿವಿನ ಸಂದರ್ಭದಲ್ಲಿ ಅಕ್ಷರ ಕಲಿತು ಬಿಡುಗಡೆಯ ಸಂತೋಷದಲ್ಲಿ ಅರಳುತ್ತಿದ್ದ ಹೊಸ ಜನಾಂಗವು ತಮ್ಮ ಬದುಕಿನಲ್ಲಿ ಜಾತಿ ಮತ ಮೌಢ್ಯ ಸಂಪ್ರದಾಯಗಳ ಚೌಕಟ್ಟನ್ನು ಉದ್ದೇಶಪೂರ್ವಕವಾಗಿ ಮುರಿದು, ಹೊಸ ಸಮಾಜ-ಸಮುದಾಯ ಸಂಬಂಧಗಳನ್ನು ಕಟ್ಟಲು ಉದ್ದೇಶಿಸಿತು. ತಮ್ಮ ಹೆಸರಿನ ಮುಂದೆ ಇರುತ್ತಿದ್ದ ಜಾತಿಸೂಚಕಗಳನ್ನು ಕಿತ್ತುಹಾಕಿ ಕೇವಲ ನಾಮಪದವಾಗಿ ಗುರುತಿಸಿಕೊಂಡು ಅರಳುವ ಕನಸುಕಂಡರು. ನಮ್ಮ ಸಮಾಜದ ಮೇಲ್ಜಾತಿಯ ಬ್ರಾಹ್ಮಣ ಸಮುದಾಯವೂ ಕೂಡ ತಮ್ಮ ಮೂಲ ಗೋತ್ರ ಸೂಚಕವಾದ ಹೆಸರುಗಳನ್ನು ಕೈಬಿಡಲು ಪ್ರಾರಂಭಿಸಿತು. ಗೌಡ, ಲಿಂಗಾಯತ, ಬ್ರಾಹ್ಮಣ ಇತ್ಯಾದಿ ಜಾತಿ ಸೂಚಕಗಳಿಂದಾಚೆ ಕೇವಲ ಭಾರತೀಯರೆಂಬಂತೆ, ಮನುಷ್ಯರೆಂಬಂತೆ ಗುರುತಿಸಿಕೊಂಡು ಅನೇಕತ್ವದಲ್ಲಿ ಭಾರತೀಯರೆಂಬ ಏಕತ್ವವನ್ನು ಸಾಧಿಸಲು ಯತ್ನಿಸಿದರು.

ಆದರೆ ಸ್ವಾತಂತ್ರ್ಯ ಬಂದು ಅರ್ಧ ಶತಮಾನ ಕಳೆದ ನಂತರ ತಮ್ಮ ಹಿರಿಯರ ಬೌದ್ಧಿಕತೆಯ ವಿಶಾಲ ತಳಹದಿಯ ಉದ್ದೇಶವನ್ನು ಮರೆತು ಅಕ್ಷರ ಕಲಿತ ಜನ ಮತ್ತೆ ತಮ್ಮ ಹೆಸರಿನ

ಮುಂದೆ ಜಾತಿ ಸೂಚಕಗಳನ್ನು ಇಟ್ಟುಕೊಂಡು ಹೆಮ್ಮೆಪಡುವುದು ಖೇದದ ಸಂಗತಿಯಾಗಿದೆ. ಬ್ರಾಹ್ಮಣರು ಮತ್ತೆ ದ್ವಿವೇದಿ, ತ್ರಿವೇದಿ, ಚತುರ್ವೇದಿ, ಕಾಶ್ಯಪ, ವಸಿಷ್ಠ, ಭಾರದ್ವಾಜ ಮುಂತಾದ ಸೂಚಕಗಳನ್ನಿಟ್ಟುಕೊಂಡು ತಮ್ಮ ತಮ್ಮಲ್ಲಿಯೇ ಹೆಚ್ಚುಗಾರಿಕೆಯ ಪೈಪೋಟಿಗಿಳಿದಿದ್ದಾರೆ. ಆಧುನಿಕ ಸಂಸ್ಕೃತ ಪದಗಳ ಹೆಸರುಗಳನ್ನಿಟ್ಟುಕೊಂಡು, ಅದರ ಮುಂದೆ...... ಗೌಡ ನೆಂದೋ, ........ ಮಠ ನೆಂದೋ ಕರೆದುಕೊಳ್ಳುವುದು ವಾಡಿಕೆ ಆಗತೊಡಗಿದೆ.

ಬ್ರಾಹ್ಮಣರಲ್ಲಿ ಒಂದು ಕಾಲದಲ್ಲಿ ತುಂಬಾ ಜನಪ್ರಿಯವಾಗಿದ್ದ 'ರಾವ್' ಎಂಬ ಪದವೂ ಕೂಡ ವರ್ಗಪಾರಮ್ಯವನ್ನು ಸೂಚಿಸುವಂತಿತ್ತು. ಈ 'ರಾವ್' ಮೂಲತಃ ಕನ್ನಡ 'ರಾಯ' ಪದದ ಅನುಕರಣೀಯ ಶಬ್ದ. 'ರಾಯ' ಸಂಸ್ಕೃತದ 'ರಾಜ' ಪದದ ತದ್ಭವ ರೂಪ. ಅಂದರೆ 'ರಾವ್' ಎನ್ನುವ ಪದ ಮೂಲತಃ ಕ್ಷತ್ರಿಯ ಜಾತಿಸೂಚಕವಾಗಿದ್ದದ್ದು, ಅದು ತಂದುಕೊಡುತ್ತಿದ್ದ ವರ್ಗಗರಿಮೆಯ ಶಕ್ತತೆಯ ಕಾರಣದಿಂದ ಬ್ರಾಹ್ಮಣರೂ ಕೂಡ ಅದನ್ನು ತಮ್ಮ ಹೆಸರಿನಲ್ಲಿ ಧರಿಸಿಕೊಂಡು ಬಿಟ್ಟರು!

ಕನ್ನಡದ ಹೆಸರುಗಳು ನಿಜಕ್ಕೂ ಎಷ್ಟು ಸುಂದರ! ಒಮ್ಮೆ ನಮ್ಮ ಗತಕಾಲದ ಗ್ರಾಮೀಣ ಬದುಕನ್ನು ಅವಲೋಕಿಸಿದರೆ, ಅಲ್ಲಿ ಚೆನ್ನ, ದುಂಡಿ, ಪುಟ್ಟ, ಕೆಂಪ, ಚುಕ್ಕಿ - ಈ ಬಗೆಯ ಯಾವ ವರ್ಗಸೋಂಕೂ, ಜಾತಿಸೋಂಕೂ ಇಲ್ಲದ ನೂರಾರು ಹೆಸರುಗಳು ಕಂಡು ಬರುತ್ತವೆ. ಗ್ರಾಮ ಸಂಸ್ಕೃತಿಯ ಆ ವಿವೇಕ ಅಕ್ಷರ ಕಲಿತು ನಾಗರಿಕತೆಯಲ್ಲಿ ಬಹುದೂರ ಸಾಗಿಬಂದಿರುವ ನಮ್ಮಲ್ಲಿ ಇಲ್ಲದಿರುವುದು ವಿಷಾದವೆನಿಸುತ್ತದೆ.

೨೫-೦೪-೨೦೧೩

# ಮೇಡ್ ಇನ್ ಫಾರಿನ್

ಜಗತ್ತಿನ ಇತರ ಭಾಗದ ಜನರಿಗೆ ಹೋಲಿಸಿದರೆ, ಭಾರತೀಯರಿಗೆ ವಿದೇಶಿ ವ್ಯಾಮೋಹ ತುಸು ಹೆಚ್ಚು ಎಂದೇ ಹೇಳಬೇಕು. ಬಹುಶಃ ಸತತ ಸಾವಿರಾರು ವರ್ಷಗಳ ವಿದೇಶಿ ಆಳ್ವಿಕೆ ಮತ್ತು ವಿದೇಶಿಗರ ಜೀವನ ಶೈಲಿಗಳ ಪ್ರಭಾವವೇ ಇದಕ್ಕೆ ಕಾರಣವಾಗಿರಬೇಕು. ಮೊದಲು ಆರ್ಯರು, ಅನಂತರ ಮುಸಲ್ಮಾನರು, ಆಮೇಲೆ ಯುರೋಪಿಯನ್ನರು ನಮ್ಮ ದೇಶವನ್ನು ಆಕ್ರಮಿಸಿ ನಮ್ಮನ್ನಾಳಿದರು. ಈ ಜನಾಂಗಗಳೆಲ್ಲ ನಾಗರಿಕತೆಯ ದೃಷ್ಟಿಯಿಂದ ಮತ್ತು ಮೈಬಣ್ಣದ ದೃಷ್ಟಿಯಿಂದ ಇಲ್ಲಿನ ಮೂಲ ನಿವಾಸಿಗಳಿಗಿಂತ ವಿಕಾಸಗೊಂಡಿದ್ದರು. ದೇವರು, ಧರ್ಮ, ರಾಜನೀತಿ, ನಗರ ನಿರ್ಮಾಣ ಮುಂತಾದ ವಿಷಯಗಳಲ್ಲಿ ಇಲ್ಲಿನ ಮೂಲನಿವಾಸಿಗಳಿಗಿಂತ ಅವರು ವಿಕಾಸಗೊಂಡಿದುದರ ಪರಿಣಾಮವಾಗಿ ಸಹಜವಾಗಿ ಇಲ್ಲಿನವರಿಗೆ ಆಕರ್ಷಕವಾಗಿ ಕಂಡಿರಬಹುದು. ಎತ್ತರವಾದ, ಕಣ್ಸೆಳೆಯುವ ಬಣ್ಣ ಮತ್ತು ಮೈಕಟ್ಟು ಇಲ್ಲಿನ ಮೂಲನಿವಾಸಿಗಳಿಗೆ ಅವರ ಬಗ್ಗೆ ಅಭಿಮಾನವನ್ನೂ, ತಮ್ಮ ಬಗ್ಗೆ ಕೀಳರಿಮೆಯನ್ನೂ ಮೂಡಿಸಿರಬಹುದು. ಈ ಭಾವನಾತ್ಮಕ ಕೀಳರಿಮೆ ಭಾರತೀಯರ ವಂಶವಾಹಿನಿಗಳಲ್ಲಿ ಎಷ್ಟರ ಮಟ್ಟಿಗೆ ರಕ್ತಗತವಾಗಿದೆಯೆಂದರೆ, ಇಂದಿಗೂ 'ವಿದೇಶಿ' ಎಂಬ ಪದ ಅವರಲ್ಲಿ ರೋಮಾಂಚನ ಉಂಟುಮಾಡುತ್ತದೆ.

ಆಧುನಿಕ ಮಾರುಕಟ್ಟೆ ಪ್ರಪಂಚವನ್ನು ಗಮನಿಸಿ. ಅದು ಪ್ರಕಟ ಮಾಡುವ ಬಗೆಬಗೆಯ ಚಿತ್ತಾಕರ್ಷಣೆಯ ಜಾಹೀರಾತುಗಳನ್ನು ಗಮನಿಸಿ. ತಮ್ಮ ಸರಕುಗಳ ಬಿಕರಿಯ ಉದ್ದೇಶದಿಂದ ಅವುಗಳನ್ನು ತೊಟ್ಟು ಉಟ್ಟು ಪ್ರದರ್ಶನ ಮಾಡಲು ವಿದೇಶಿ ಬೆಡಗಿಯರನ್ನೇ ಬಳಸುತ್ತಾರೆ. (ಈ ಅಂಶದಲ್ಲಿ ಇತ್ತೀಚಿಗೆ ಭಾರತೀಯ ಬೆಡಗಿಯರು ಕಾಣಿಸಿಕೊಳ್ಳುತ್ತಿರುವುದು ಒಂದು ಸಮಾಧಾನಕರವಾದ ಅಂಶ!) ಭಾರತೀಯ ಕಂಪನಿಗಳು ತಾವು ಮಾರಾಟ ಮಾಡುವ ಪೆನ್ನು, ವಾಹನ, ಅಡುಗೆಮನೆ ಉಪಕರಣ, ವಿದ್ಯುನ್ಮಾನ ಉಪಕರಣ ಮುಂತಾದ ಸರಕುಗಳನ್ನು ಜಾಹೀರಾತುಗೊಳಿಸುವ ಸಂದರ್ಭದಲ್ಲಿ ಇಂದಿಗೂ ಮರೆಯದೇ ಜರ್ಮನ್ ಟೆಕ್ನಾಲಜಿ, ಸ್ವಿಸ್ ಟೆಕ್ನಾಲಜಿ, ಕೊರಿಯನ್ ಟೆಕ್ನಾಲಜಿ, ಜಪಾನ್ ಟೆಕ್ನಾಲಜಿ - ಮುಂತಾದ ವಿದೇಶಿ ತಂತ್ರಗಾರಿಕೆಯ ಹೆಸರುಗಾರಿಕೆಯನ್ನು ಬಳಸಿ ಪ್ರಚಾರ ಮಾಡುತ್ತಿರುವುದನ್ನು ನಿತ್ಯ ನಮ್ಮ ಸಮೂಹ ಮಾಧ್ಯಮಗಳಲ್ಲಿ ಕಾಣುತ್ತೇವೆ. ಇದರ ಹಿಂದಿರುವ ಮುಖ್ಯ ಉದ್ದೇಶ - ವಿದೇಶಿ ತಂತ್ರಜ್ಞಾನ ನಮ್ಮ ದೇಶಿ ತಂತ್ರಜ್ಞಾನಕ್ಕಿಂತ ಉತ್ತಮವೆಂದು ಹೇಳುವುದಕ್ಕಿಂತ ಮಿಗಿಲಾಗಿ ಭಾರತೀಯರ ಮನಸ್ಸಿನಲ್ಲಿರುವ ವಿದೇಶಿ ವ್ಯಾಮೋಹದ ಕೀಳರಿಮೆಪೂರಿತ ಮನಸ್ಸನ್ನು ಆಕ್ರಮಿಸಿಕೊಳ್ಳುವುದೇ ಆಗಿದೆ.

ಡಾ. ರಾಮಮನೋಹರ ಲೋಹಿಯಾ ಅವರು ಶತಶತಮಾನಗಳಿಂದ ನಮ್ಮ ವಂಶವಾಹಿನಿಗಳಲ್ಲಿ ರಕ್ತಗತವಾಗಿ ಹರಿದುಬಂದಿರುವ ವಿದೇಶಿ ಶ್ರೇಷ್ಠತಾ ಆರಾಧನಾ ಭಾವವು ನಮ್ಮ ಗುಲಾಮಿತನದ ಸಂಕೇತವೆಂದು ಪರಿಗಣಿಸುತ್ತಾರೆ. ನಮ್ಮನ್ನಾಳಿದ ವಿದೇಶಿಯರು ಎಲ್ಲಾ ವಿಷಯಗಳಲ್ಲಿ ನಮಗಿಂತ ಶ್ರೇಷ್ಠರಾಗಿರುವುದರಿಂದ - ನಮ್ಮಲ್ಲಿ ದೇಸಿ ಪ್ರಜ್ಞೆ ಜಾಗೃತವಾಗದೆ ಕೀಳರಿಮೆಯ ಕಾರಣದಿಂದ ಆಳುವ ಜನಾಂಗದ ಜ್ಞಾನ, ತಂತ್ರಜ್ಞಾನ, ಜೀವನಶೈಲಿ, ಮುಂತಾದವುಗಳನ್ನು ಅನುಕರಿಸಲು ತೊಡಗುತ್ತಾರೆ. ಈ ಕೀಳರಿಮೆಯ ಮನಸ್ಥಿತಿಯನ್ನು ಶಿಕ್ಷಣವು ನೀಗಿಸಿ ಸ್ವಂತ ವ್ಯಕ್ತಿತ್ವವನ್ನೂ, ರೂಪ ಆಕಾರಗಳನ್ನೂ ಮೂಡಿಸುವ ಸಾಧನವಾಗಿ ಕೆಲಸ ಮಾಡುತ್ತದೆ ಎಂದು ಗಾಂಧೀಜಿ ಹಾಗೂ ಡಾ. ಅಂಬೇಡ್ಕರ್ ತಮ್ಮ ಬರಹಗಳಲ್ಲಿ ವಿಶ್ಲೇಷಿಸಿದ್ದಾರೆ.

ನಮ್ಮ ದೇಶವಾಸಿಗಳಿಗೆ ಕೇವಲ ವಿದೇಶಿ ವಸ್ತುಗಳ ವ್ಯಾಮೋಹ ಮಾತ್ರವಲ್ಲ ವಿದೇಶದಲ್ಲಿ ನೆಲೆಸಿರುವ ಗಂಡೂ ಕೂಡ ಆಕರ್ಷಕನಾಗಿ, ಬೆಲೆಯುಳ್ಳವನಾಗಿ ಕಂಡುಬಿಡುತ್ತಾನೆ! ಹಿಂದೆ ಮುಂದೆ ನೋಡದೆ ತಮ್ಮ ಮಗಳನ್ನು ವಾರ ಒಪ್ಪತ್ತರಲ್ಲೇ ಮದುವೆ ಮಾಡಿ ಕಳುಹಿಸಿಬಿಡುವ ಭಂಡ ಧೈರ್ಯವನ್ನೂ ಮೆರೆದುಬಿಡುತ್ತಾರೆ! ಇಂದು ಜಗತ್ತು ಒಂದು ಪುಟ್ಟ ಹಳ್ಳಿಯಾಗಿ ಹತ್ತಿರವಾಗುತ್ತಿದ್ದರೂ; ತಾನು, ತನ್ನದು, ತನ್ನ ಕುಟುಂಬ, ತನ್ನ ಊರು, ತನ್ನ ಭಾಷೆ ಮತ್ತು ತನ್ನ ದೇಶವೆಂಬ ಸ್ವಾಭಿಮಾನವೊಂದೇ ವ್ಯಕ್ತಿಯ ಭೌತಿಕ ಅಭಿವೃದ್ಧಿ ಮತ್ತು ಬೌದ್ಧಿಕ ವಿಕಾಸದ ಬೆಳವಣಿಗೆಯಾಗಲು ಸಾಧ್ಯವೆಂಬುದನ್ನು ಮರೆಯಬಾರದು

೦೯-೦೫-೨೦೧೩

# ನಕ್ಕಾಗ ಎಲ್ಲರ ಹಲ್ಲೂ ಬೆಳ್ಳಗೆ

ನಕ್ಕಾಗ ಎಲ್ಲರ ಹಲ್ಲೂ ಬೆಳ್ಳಗೆ ಕಾಣುತ್ತವೆ. ಎಲ್ಲರ ಕಣ್ಣುಗಳು ಬಿಳುಪಾಗಿಯೇ ಹೊಳೆಯುತ್ತವೆ. ಎಲ್ಲರ ನಾಲಗೆಯ ಬಣ್ಣ ಒಂದೇ ಆಗಿರುತ್ತದೆ. ಎಲ್ಲರ ರಕ್ತವು ಕೆಂಪಗೇ ಇರುತ್ತದೆ. ಈ ಸಾರ್ವತ್ರಿಕ ಸತ್ಯವನ್ನು ಅರ್ಥ ಮಾಡಿಕೊಂಡುಬಿಟ್ಟರೆ ಜಗತ್ತಿನಲ್ಲಿ ಯಾರೂ ವರ್ಣಭೇದ ನೀತಿಯನ್ನು ಅನುಸರಿಸಲಾರರು. ಜಗತ್ತಿನ ಮೂರು ಮುಖ್ಯ ಜನಾಂಗಗಳನ್ನು ಅವರ ಚರ್ಮದ ಬಣ್ಣ, ಮುಖ ಚಹರೆ, ಕೂದಲಿನ ಆಧಾರದ ಮೇಲೆ ಗುರುತಿಸುತ್ತಾರೆ. ಹಾಗೆ ನೋಡಿದರೆ ಜಗತ್ತಿನ ಆದಿ ಮಾನವನ ವರ್ಣ ಕಪ್ಪಗೆ ಅಥವಾ ಕಡು ತಾಮ್ರವರ್ಣದ್ದಾಗಿತ್ತೆಂದು ಮಾನವ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಈ ಕಪ್ಪು ಅಥವಾ ಕಡು ತಾಮ್ರದ ಜನರು ನಾನಾ ಕಾರಣಗಳಿಂದ ಜಗತ್ತಿನ ಬೇರೆಬೇರೆ ಹವಾಮಾನ ಪ್ರದೇಶಗಳಿಗೆ ವಲಸೆ ಹೋದಾಗ ಅವರ ಚರ್ಮದ ಮೆಲನಿನ್ ಅಂಶವು ಕಡಿಮೆಯಾಗುತ್ತಾ ಬಂದು ಲಕ್ಷಾಂತರ ವರ್ಷಗಳ ಅವಧಿಯಲ್ಲಿ ಬಿಳಿಯ ವರ್ಣಕ್ಕೆ ತಿರುಗಿತೆಂದು ವಿಜ್ಞಾನ ಸಕಾರಣವಾಗಿ ಗುರುತಿಸುತ್ತದೆ. ಹೀಗಾಗಿ ತಾವು ಅತ್ಯಂತ ಶ್ರೇಷ್ಠ ವರ್ಣದವರೆಂದು ಬೀಗುವ ಶ್ವೇತ ವರ್ಣೀಯರು ಒಂದಾನೊಂದು ಕಾಲದ ಕಪ್ಪು ವರ್ಣೀಯರ ಸಂತಾನವೇ ಎಂಬುದನ್ನು ಮರೆಯಬಾರದು.

ಭಾರತದ ಆದಿವಾಸಿಗಳು ಕಪ್ಪು ವರ್ಣೀಯರೇ ಆಗಿದ್ದರು. ಮಧ್ಯ ಏಷ್ಯಾದಿಂದ ವಲಸೆ ಬಂದ ಆರ್ಯರು ಬಿಳಿಯರಾಗಿದ್ದರು. ಇವರಿಬ್ಬರ ನಡುವೆ ನಿರಂತರವಾಗಿ ಶತಶತಮಾನಗಳ ನಡುವೆ ನಡೆದ ವರ್ಣ ಸಂಕರದ ಕಾರಣದಿಂದಾಗಿ - ಜಗತ್ತಿನ ಮೂರು ಮುಖ್ಯ ಜನಾಂಗಗಳ ಯಾವ ಲಕ್ಷಣವೂ ಹೋಲದ ಅಥವಾ ಎಲ್ಲ ಲಕ್ಷಣಗಳ ಸಮ್ಮಿಶ್ರದ ನವೀನ ತಳಿಯೊಂದು ಭಾರತದಲ್ಲಿ ಸೃಷ್ಟಿಯಾಯಿತು. ಭಾರತದ ಉತ್ತರ ಮತ್ತು ಈಶಾನ್ಯ ತುದಿಯಲ್ಲಿ ಚೈನಾ ಮತ್ತು ಜಪಾನ್ ಮತ್ತಿತರ ದೇಶಗಳ ಜನಾಂಗೀಯ ಲಕ್ಷಣವೂ ಕೂಡ ಭಾರತೀಯರ ಮೇಲೆ ಆಗಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಜಗತ್ತಿನ ಎಲ್ಲಾ ಸಮ್ಮಿಶ್ರ ಜನಾಂಗೀಯ ಭೌತಿಕ ಚಹರೆ ಲಕ್ಷಣಗಳನ್ನೊಳಗೊಂಡಿರುವ ಈ ದೇಶವು ನಿಜವಾದ ಅರ್ಥದಲ್ಲಿ ಬೌದ್ಧಿಕ ಹೆಚ್ಚುಗಾರಿಕೆಯನ್ನು ಗಳಿಸಲು ಸಾಧ್ಯವಾಯಿತು. ಏಕೆಂದರೆ ಸಸ್ಯವಾಗಲಿ ಪ್ರಾಣಿಗಳಾಗಲಿ ಸದಾ ಕಸಿಗೊಳ್ಳುತ್ತಾ ಸಾಗಿದಾಗ ಮಾತ್ರ ಹೊಸ ಬಗೆಯ, ನಾನಾ ನಮೂನೆಯ ಸೃಷ್ಟಿ ಸಾಧ್ಯ.

ಜಗತ್ತಿನ ಎಲ್ಲ ಜನಾಂಗಗಳ ಬೌದ್ಧಿಕ ಕಸುವನ್ನು ಜೀರ್ಣಿಸಿಕೊಂಡಿರುವ ಭಾರತೀಯರು ಶ್ರೇಷ್ಠ ವಿಜ್ಞಾನಿಗಳೂ, ವೈದ್ಯರೂ, ವಾಸ್ತುಶಿಲ್ಪ ತಜ್ಞರೂ, ಆಡಳಿತ ನಿರ್ವಾಹಕರೂ ಆಗಿ ವಿಕಾಸಗೊಳ್ಳಲು ಸಾಧ್ಯವಾಯಿತು. ಆದರೆ ಆಶ್ಚರ್ಯವೂ ದುರಂತವೂ ವಿಚಿತ್ರವೂ ಆದ ಸತ್ಯವೊಂದು

ಇಲ್ಲೇ ಬಿಚ್ಚಿಕೊಳ್ಳುತ್ತದೆ. ಎಲ್ಲ ಜನಾಂಗಗಳ ದೈಹಿಕ - ಮಾನಸಿಕ ವಂಶವಾಹಿನಿಗಳನ್ನು ತಲೆ ತಲೆಮಾರುಗಳ ಅಂತರದಲ್ಲಿ ತನ್ನದಾಗಿಸಿಕೊಂಡು ಜೀರ್ಣಿಸಿಕೊಂಡಿರುವ ಭಾರತೀಯರು ದೈಹಿಕವಾಗಿ ಬೇರೆ ಜನಾಂಗಗಳಷ್ಟು ದೇಹದಾರ್ಢ್ಯ ಶಕ್ತತೆಯನ್ನು ಮೆರೆಯಲು ವಿಫಲವಾಗಿರುವುದು ಸತ್ಯ. ಆ ಎಲ್ಲಾ ಜನಾಂಗಗಳಿಗಿಂತ ದೈಹಿಕವಾಗಿಯೂ ಬಲಾಢ್ಯಗೊಳ್ಳಬೇಕಾದದ್ದು ನೀರಿಕ್ಷಿತ ಆಶಯ. ಆದರೆ ಆಟೋಟಗಳಲ್ಲಿ, ದೈಹಿಕ ಶಕ್ತಿ ಬಯಸುವ ಕ್ರೀಡೆಗಳಲ್ಲಿ ಭಾರತೀಯರು ತೀರ ಹಿಂದೆ ಬಿದ್ದಿರುವುದು ಆಶ್ಚರ್ಯವಾದರೂ ಸತ್ಯ ಸಂಗತಿಯಾಗಿದೆ.

ಭಾರತೀಯರು ಜಗತ್ತಿನ ಬಿಳಿಯ ಜನಾಂಗಕ್ಕೆ ಹೋಲಿಸಿದರೆ ವರ್ಣತಾರತಮ್ಯ ಮಾಡುವುದು, ವರ್ಣದ ಕಾರಣದಿಂದ ಕೀಳಾಗಿ ಭಾವಿಸುವುದು, ಅವಮಾನಿಸಿವುದು ಕಡಿಮೆ. ಇದಕ್ಕೆ ಮೂಲ ಕಾರಣ ಭಾರತೀಯರು ಸಾವಿರಾರು ವರ್ಷಗಳ ಅಂತರದಲ್ಲಿ ನಡೆಸಿಕೊಂಡು ಬಂದಿರುವ ವರ್ಣಸಂಕರವೇ ಆಗಿದೆ. ಹೀಗಾಗಿ ಭಾರತದ ಗಂಡು ಹೆಣ್ಣುಗಳು ತಾವು ಮದುವೆಯಾಗುವಾಗ ಸಂಗಾತಿಗಳ ಬಣ್ಣವನ್ನು ಆದ್ಯತೆಯ ಮೇರೆಗೆ ಮಾಪನ ಮಾಡುವುದಿಲ್ಲ. ಆದರೆ ಕಳೆದ ಶತಮಾನದಿಂದೀಚೆಗೆ ಪಾಶ್ಚಾತ್ಯರ ಪ್ರಭಾವದಿಂದಾಗಿ ಕರಿಯ ಬಿಳಿಯ ಎಂಬ ತೆಳುವಾದ ತಾರತಮ್ಯ ಭಾವ ಮೂಡಿರುವುದು ಸುಳ್ಳಲ್ಲ.

ಭಾರತದ ಮೂಲ ಆತ್ಮದ ಪ್ರೀತಿ ಕಪ್ಪು ವರ್ಣದ ಮೇಲೆ ಇದೆ ಎಂದರೆ ತಪ್ಪಾಗಲಾರದು. ಭಾರತೀಯರ ಕಪ್ಪು ವರ್ಣದ ಪ್ರೀತಿಯ ಸಂಕೇತಗಳಾಗಿ ಈ ದೇಶದ ಇಬ್ಬರು ಮಹಾನ್ ದೇವತೆಗಳಾದ 'ಕೃಷ್ಣ' ಮತ್ತು 'ಶಿವ' ಕಾಣಿಸಿಕೊಳ್ಳುತ್ತಾರೆ. ಅವರಿಬ್ಬರೂ ಕರಿಯರೇ, ನೀಲಮೇಘ ಶ್ಯಾಮರೇ! ಈ ಕಡು ಕಪ್ಪು ವರ್ಣದ ಮಂಗಳ ಮೂರ್ತಿಗಳನ್ನು ಅವರು ಆರಾಧಿಸುತ್ತಿರುವ ಪರಿಯೇ ಬಿಳಿಯ ಜನಾಂಗಕ್ಕೆ ಉದಾತ್ತ ಮಾರ್ಗದರ್ಶಕ ಬೆಳಕಾಗಿ ತೋರಬಾರದೆ?

೨೩-೦೫-೨೦೧೩

# ಮಾಂಸಾಹಾರ

ಕಾಡಿನಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತ ಜೀವನ ಸಾಗಿಸುತ್ತಿರುವ ಪ್ರಾಣಿಗಳ ಸಮತೋಲನವನ್ನು ಪ್ರಕೃತಿ ಬಹು ಎಚ್ಚರಿಕೆಯಿಂದ ಕಾಪಾಡಿಕೊಳ್ಳುತ್ತದೆ. ಸಸ್ಯಾಹಾರಿ ಪ್ರಾಣಿಗಳು ಮಾಂಸಾಹಾರಿ ಪ್ರಾಣಿಗಳಿಗಿಂತ ನೂರಾರು ಪಟ್ಟು ಅಧಿಕ ಸಂಖ್ಯೆಯಲ್ಲಿರುತ್ತವೆ. ಅವುಗಳಿಗೆ ಬೇಕಾದ ಆಹಾರ ಸಸ್ಯಸಂಪತ್ತು ನಿಸರ್ಗದಲ್ಲಿ ಹೇರಳವಾಗಿ ದೊರಕುತ್ತದೆ. ಇವುಗಳಿಗೆ ಹೋಲಿಸಿದಾಗ ಮಾಂಸಾಹಾರಿ ಪ್ರಾಣಿಗಳು ಸಂಖ್ಯೆಯಲ್ಲಿ ವಿರಳ. ಸಸ್ಯಾಹಾರಿ ಪ್ರಾಣಿಗಳನ್ನು ತಿಂದು ಬದುಕಲೇಬೇಕಾದ ಇವು ತಮ್ಮ ಅಗತ್ಯಕ್ಕೆ ಮೀರಿ ಪ್ರಾಣಿಗಳನ್ನು ಬೇಟೆಯಾಡುವುದಿಲ್ಲ. ಹೊಟ್ಟೆ ತುಂಬಿದ ಮಾಂಸಾಹಾರಿ ಪ್ರಾಣಿಯೊಂದು ಪಕ್ಕದಲ್ಲೇ ಸುಳಿದಾಡುವ ತನ್ನ ಆಹಾರ ಜೀವಿಯನ್ನು ನಿರ್ಮಮಕಾರವಾಗಿ ಕಾಣುತ್ತದೆ. ಪ್ರಕೃತಿಯ ಈ ಅದ್ಭುತ ವಾಸ್ತವವನ್ನು ನೋಡಿ ಮನುಷ್ಯ ಕಲಿಯಬೇಕಾದದ್ದು ಬಹಳಷ್ಟಿದೆ.

ಪ್ರಕೃತಿ ಸಮತೋಲನವನ್ನು ತಮ್ಮ ಪಾಡಿಗೆ ತಾವು ಕಾಪಾಡಿಕೊಂಡು ಬರುತ್ತಿರುವ ಕಾಡಿಗೆ ಮನುಷ್ಯ ಹೋಗಿ ಅಲ್ಲಿನ ಜೀವಿಗಳನ್ನು ಬೇಟೆಯಾಡುವುದು ಕ್ರೂರ ಕೃತ್ಯವೆಂದು ಬಗೆಯಬೇಕಾಗುತ್ತದೆ. ಕಾಡು ಪ್ರಾಣಿಗಳನ್ನು ಆಹಾರಕ್ಕಾಗಲಿ, ವಿನೋದಕ್ಕಾಗಲಿ, ಬೇಟೆಯಾಡುವುದು ಜೀವ ವಿರೋಧಿಯೂ, ನಿಸರ್ಗ ನಿಯಮ ವಿರೋಧಿಯೂ ಆಗಿರುತ್ತದೆ. ತಾನು ಸಾಕಿಲ್ಲದ, ಅಭಿವೃದ್ಧಿಪಡಿಸದ ಯಾವ ಸಸ್ಯ - ಪ್ರಾಣಿ ಸಂಪತ್ತಿನ ಮೇಲೂ ಮನುಷ್ಯನಿಗೆ ಹಕ್ಕಿಲ್ಲ. ಕಾಡು-ಕಾಡಿನ ಪ್ರಾಣಿಗಳ ಪ್ರಪಂಚ. ಅಲ್ಲಿ ಅವು ತಮ್ಮ ಜೀವನ ಕ್ರಮಕ್ಕನುಗುಣವಾದ ಆಹಾರಸೇವನೆಯ ಮೂಲಕ ಸಮತೋಲನವನ್ನು ಕಾಪಾಡಿಕೊಂಡು ಬದುಕುತ್ತಿರುತ್ತವೆ. ಅಲ್ಲಿಗೆ ಮನುಷ್ಯನ ಪ್ರವೇಶವಾದೊಡನೆಯೇ ಆ ಸಮತೋಲನಕ್ಕೆ ಧಕ್ಕೆಯುಂಟಾಗಿ ಪ್ರಕೃತಿ ನಿಯತಿಯಲ್ಲಿ ಏರುಪೇರಾಗುತ್ತದೆ. ಅದರ ಪರಿಣಾಮ ಮಾನವ ಪ್ರಪಂಚದ ಮೇಲೂ ಆಗುತ್ತದೆ ಎಂಬುದನ್ನು ಮನುಷ್ಯ ಅರಿಯುವಷ್ಟರಲ್ಲಿ ಅನಾಹುತ ಸಂಭವಿಸಿರುತ್ತದೆ. ಈ ಅಂಶವನ್ನೇ ನಮ್ಮ ಪರಿಸರವಾದಿಗಳು ನಾಗರಿಕ ಪ್ರಪಂಚಕ್ಕೆ ತಿಳಿಸಲು ಹೆಣಗಾಡುತ್ತಿದ್ದಾರೆ.

ಮಾಂಸಾಹಾರ ಮಾನವನ ಅತ್ಯಂತ ಪ್ರಿಯವಾದ, ಆದಿಕಾಲದಿಂದಲೂ ನಡೆದು ಬಂದಿರುವ ಆಹಾರ ಪದ್ಧತಿ. ಅಪಾರವಾದ ಸಮುದ್ರ ಈ ಬೇಡಿಕೆಯನ್ನು ಬಹುಮಟ್ಟಿಗೆ ಈಡೇರಿಸುತ್ತದೆ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆದಾಡುವುದನ್ನು ನಿಲ್ಲಿಸಿ, ಊರು ಕಟ್ಟಿ ಒಂದೆಡೆ ವಾಸ ಮಾಡಲಾರಂಭಿಸಿದ ಮಾನವ ತನ್ನ ಬದುಕಿಗೆ ಮಾಂಸಾಹಾರಕ್ಕಿಂತ ಮಿಗಿಲಾಗಿ ಸಸ್ಯೋತ್ಪನ್ನಗಳನ್ನು ಬಳಸಲು ಪ್ರಾರಂಭಿಸಿದ. ಈ ಹಂತದಲ್ಲೇ ಅವನು ಕೃಷಿಕನಾದ. ಕೃಷಿಯಲ್ಲಿ

ತನಗೆ ಬೇಕಾದ ಬೆಳೆಗಳನ್ನು ಬೆಳೆಯುವುದರ ಜೊತೆಗೆ, ತನಗೆ ಬೇಕಾದ ಪ್ರಾಣಿಗಳನ್ನೂ ಸಾಕಿ 'ಕೃಷಿ' ಮಾಡಲಾರಂಭಿಸಿದ.

ಅಂದರೆ ಮನುಷ್ಯ ತನ್ನ ಆಹಾರಕ್ಕಾಗಿ ಹೇಗೆ ಸಸ್ಯಗಳನ್ನು ಬೆಳೆಯುತ್ತಾನೋ ಹಾಗೆಯೇ ತನಗೆ ಬೇಕಾದ ಪ್ರಾಣಿಗಳನ್ನು ಸಾಕಿ ಸಲಹಿ ಅವು ಹದಕ್ಕೆ ಬಂದಾಗ ತನ್ನ ಆಹಾರಕ್ಕಾಗಿ ಬಳಸಲು ಶುರುಮಾಡಿದನು. ಈ ಪ್ರಾಣಿಗಳ ಮೇಲೆ ಅವನಿಗೆ ಸಹಜವಾದ ಹಕ್ಕು ಪ್ರಾಪ್ತವಾಗಿರುತ್ತದೆ. ಹೇಗೆ ದವಸ ಧಾನ್ಯಗಳನ್ನು ತಿನ್ನಲೆಂದೇ ಬೆಳೆಯುತ್ತಾನೋ, ಹಾಗೆಯೇ ತಾನು ಸಾಕುವ ಕುರಿ, ಕೋಳಿ, ಮೇಕೆ, ಹಂದಿ ಮುಂತಾದ ಪ್ರಾಣಿಗಳನ್ನೂ ಸಹ ತಿನ್ನಲೆಂದೇ ಸಾಕಿ ಬೆಳಸುತ್ತಾನೆ. ಇವುಗಳ್ನು ಕೊಂದು ತಿನ್ನುವುದರಿಂದ ಯಾವ ಬಗೆಯ ಕ್ರೌರ್ಯವನ್ನು ಬಗೆದಂತಾಗುವುದಿಲ್ಲ. ಜಗತ್ತಿನ ಎಲ್ಲಾ ಭಾಗಗಳಲ್ಲೂ ಮನುಷ್ಯ ಸಸ್ಯಗಳನ್ನು ಕೃಷಿ ಮಾಡಿ ಬೆಳೆದಂತೆಯೇ ಪ್ರಾಣಿಗಳನ್ನೂ ಸಹ ತನ್ನ ಆಹಾರಕ್ಕಾಗಿ ಮತ್ತು ಆರ್ಥಿಕ ಅನುಕೂಲಕ್ಕಾಗಿ ಸಾಕುತ್ತಾನೆ. ಕೇವಲ ಪ್ರಾಣಿಗಳ ಮೇಲಿನ ಪ್ರೀತಿಯಿಂದ ಸಾಕುತ್ತೇವೆ ಎಂಬ ಮಾತು ತುಂಬ ಔಪಚಾರಿಕವಾದುದು. ಆಧುನಿಕ ನಗರಗಳಲ್ಲಿ ಬೆಕ್ಕು, ನಾಯಿ ಮುಂತಾದ ಮುದ್ದು ಪ್ರಾಣಿಗಳನ್ನು ಸಾಕಿ ಆನಂದಿಸುವುದುಂಟು. ಇದೇ ಬಗೆಯ ಪ್ರೀತಿಯನ್ನು ಕೋಳಿ, ಕುರಿ, ಮೇಕೆ ಮುಂತಾದ ಪ್ರಾಣಿಗಳಿಗೆ ಅನ್ವಯಿಸಿ ಮಾತನಾಡುವುದು ಕೃತಕವಾದೀತು.

ತಾನು ಸಾಕದ ಕಾಡು ಪ್ರಾಣಿಗಳನ್ನು ಬೇಟೆಯಾಡುವ ಹಕ್ಕು ಮನುಷ್ಯನಿಗಿಲ್ಲ. ಕಾಡಿನ ಪ್ರಪಂಚವೇ ಬೇರೆ. ಈ ಸತ್ಯವನ್ನು ಅರ್ಥಮಾಡಿಕೊಂಡರೆ ಪ್ರಕೃತಿಗೆ ಅವನು ಸಲ್ಲಿಸುವ ದೊಡ್ಡ ಗೌರವವಾಗುತ್ತದೆ.

೦೬-೦೬-೨೦೧೩

# ಕಾಲ

'ಕಾಲ' ಒಂದು ವಸ್ತುವಿನ ಸೃಷ್ಟಿ ಮತ್ತು ಲಯಗಳ ಪ್ರಾರಂಭ ಮತ್ತು ಅಂತ್ಯವನ್ನು ಸೂಚಿಸುತ್ತದೆ. ಒಂದು ವಸ್ತು, ಘಟನೆ, ಸಂಗತಿ - ಮುಂತಾದ ಸಮಸ್ತ ಲೋಕ ವ್ಯವಹಾರಗಳೆಲ್ಲವೂ ಈ 'ಕಾಲ'ದ ನಿಯಂತ್ರಣದಲ್ಲೇ ಸಾಗುತ್ತವೆ. 'ಕಾಲ' ಸೃಷ್ಟಿಯ ಸಮಸ್ತದ ಚಲನಶೀಲತೆಯನ್ನು ಮತ್ತು ಅದರ ನಿಲುಗಡೆಯ ಹಂತವನ್ನು ನಿರ್ಧರಿಸುತ್ತದೆ. ಇಲ್ಲಿ ನಿಲುಗಡೆ ಎಂದರೆ ಮುಕ್ತಾಯವಲ್ಲ. ಒಂದು ಸಂಗತಿ, ಒಂದು ಘಟನೆ ಅಥವಾ ಒಂದು ಜೀವಿಯ ಸರಪಳಿಯಾಕಾರದ ಚಲನಶೀಲತೆಯನ್ನು 'ಕಾಲ' ರೂಪಿಸಿಬಿಡುತ್ತದೆ. ಅಂದರೆ ಒಂದು ಸಂಗತಿ, ಒಂದು ಘಟನೆ ಅಥವಾ ಒಂದು ಜೀವಿಯ ಕೊನೆಯಲ್ಲಿಯೇ ಮತ್ತೊಂದು ಸಂಗತಿ, ಘಟನೆ ಅಥವಾ ಜೀವಿಯ ಪ್ರಾರಂಭದ ಘಳಿಗೆಯಾಗಿಬಿಡುತ್ತದೆ. ಇದು 'ಕಾಲ' ಜಗತ್ತನ್ನು ನಿರ್ವಹಿಸಿಕೊಂಡು ಬಂದಿರುವ ಪರಿ.

'ಕಾಲ' ಎಂಬುದು ಒಂದು ಸರಳ ರೇಖೆಯ ಆದಿ ಮತ್ತು ಅಂತ್ಯವೆಂದು ನಾವು ಪರಿಭಾವಿಸಿದರೆ, ಈ ಆದಿ ಮತ್ತು ಅಂತ್ಯದ ನಡುವಿನ ಅವಧಿಯನ್ನು ನಾವು ಬದುಕು ಎಂದು ತಿಳಿಯಬೇಕಾಗುತ್ತದೆ. 'ಕಾಲ'ದ ಆರಂಭ ಬದುಕಿನ ಎಳಸುಕಾಯಿಯ ಸ್ವರೂಪದ್ದಾಗಿದ್ದು, ಅದರಲ್ಲಿ ಕೋಮಲತೆ, ಮುಗ್ಧತೆ ಪ್ರಧಾನ ಗುಣಗಳಾಗಿರುತ್ತವೆ. 'ಕಾಲ'ದ ಮಧ್ಯಭಾಗವು ಗಡಸಾಗಿದ್ದು ತನ್ನ ರುಚಿಯಲ್ಲಿ ಹೆಚ್ಚು ಒಗರನ್ನು, ಹುಳಿಯನ್ನು ಒಳಗೊಂಡಿರುತ್ತದೆ. ಈ ಎರಡು ಹಂತಗಳು ಬದುಕಿನ ಸತ್ವವನ್ನು ಸಂಪೂರ್ಣವಾಗಿ ಗ್ರಹಿಸುವ ಮನಸ್ಥಿತಿಯನ್ನು ಹೊಂದಿರುವುದಿಲ್ಲ. ಅಲ್ಲಿ ಅನುಭವದ ಕೊರತೆ. ಆತುರದ ಚಪಲತೆ, ವಿವೇಚನೆ ಇಲ್ಲದ ತೀರ್ಮಾನದ ನಡೆ - ಕಂಡುಬರುವ ಸಾಧ್ಯತೆಯೇ ಹೆಚ್ಚು. ಈ ಹಂತಗಳಲ್ಲಿ ಕೆಲವು ಆಕಸ್ಮಿಕ ಸಂದರ್ಭಗಳಲ್ಲಿ ಬದುಕು ಕೊನೆಯಾಗಬಹುದು. ಆದರೆ ಈ ಕೊನೆ ಸಹಜವಾಗಿ ಸಂಭವಿಸಿದ ಕೊನೆಯಲ್ಲ. ಇಲ್ಲಿ ಬದುಕು ಇನ್ನು ತಿಳಿಯಬೇಕಾದದ್ದು, ಕಲಿಯಬೇಕಾದದ್ದು ಬಾಕಿ ಉಳಿದುಕೊಂಡುಬಿಟ್ಟಿರುತ್ತದೆ. ಇಂತಹ ಸಂದರ್ಭದಲ್ಲಿ ಕೊನೆಯಾಗುತ್ತಿರುವ ಬದುಕಿಗೂ ಮತ್ತು ಅದರ ಸುತ್ತಲ ಆವರಣಕ್ಕೂ ಒಂದು ಬಗೆಯ ಅತೃಪ್ತಿ ಉಳಿದುಬಿಡುತ್ತದೆ.

'ಕಾಲ'ದ ನಡೆಯಲ್ಲಿ ಅತೃಪ್ತಿಯಿಲ್ಲದ ಘಟ್ಟವೇ ಅದರ ಅಂತ್ಯದ ಸಮಯ. ಈ ಅಂತ್ಯದ ಸಮಯದಲ್ಲಿ ಬದುಕು ತನ್ನ ಎಳಸುತನವನ್ನು, ಕೋಮಲತೆಯನ್ನು, ಒಗರುತನವನ್ನು ಮತ್ತು ಹುಳಿಯುತನವನ್ನು ಕಳೆದುಕೊಂಡು ಮಾಗುತ್ತದೆ. ತನ್ನ ಅಪಾರವಾದ ಬದುಕಿನ ನಡೆಯಲ್ಲಿ ವಿಶಿಷ್ಟ ಬಗೆಯ ಸವಾಲುಗಳನ್ನು ಎದುರಿಸಿ, ಅನೇಕ ಬಗೆಯ ಮನೋವೃತ್ತಿಗಳ ಜೊತೆ

ಸಂಘರ್ಷಿಸಿ, ಸುಖ-ದುಃಖ, ಕಷ್ಟ-ಕೋಟಲೆಗಳಲ್ಲಿ ಮಿಂದು-ಬೆಂದು ಮೈ ಮನಸ್ಸುಗಳು ಅರಳಿರುತ್ತವೆ. ಈ ಅರಳುವಿಕೆಯಲ್ಲಿ ತನ್ನೆಲ್ಲಾ ದುಡುಕು ದುಮ್ಮಾನಗಳನ್ನು, ಸೇಡು ಕೋಪ ತಾಪಗಳನ್ನು ಕಳೆದುಕೊಂಡು ತನ್ನ ಸುತ್ತಲ ಪರಿಸರಕ್ಕೆ ಏನನ್ನಾದರೂ ಒಳಿತನ್ನು ಮಾತ್ರ ಬಿಟ್ಟು ಹೋಗುವ ಮನೋಸ್ಥಿರತೆ ಮೂಡುತ್ತದೆ. ಈ ಮನೋಸ್ಥಿರತೆಯು ತನ್ನ ಬಾಲ್ಯ ಯೌವನಗಳ ವೈಯಕ್ತಿಕ ಸ್ವಾರ್ಥ ಮೋಹಗಳ ಬಂಧನದಿಂದ ಬಿಡುಗಡೆಗೊಂಡು ಸಾಮಾಜಿಕವಾಗುವ ಸ್ಥಿತಿ. ವ್ಯಕ್ತಿ ಈ ಸ್ಥಿತಿಗೇರಿದಾಗ ಮಾತ್ರ ಅವನು ತನ್ನ ಅಂತ್ಯದಲ್ಲಿ ತನ್ನ ಸುತ್ತಲ ಸಮಾಜಕ್ಕೆ ಕೇವಲ ಸಿಹಿಯನ್ನು ಕೊಡುವ ಹಣ್ಣಾಗುತ್ತಾನೆ. 'ಕಾಲ'ದ ಈ ಅಂತ್ಯದ ಗೆರೆಯ ಸ್ಥಿತಿ ಎಲ್ಲದರಲ್ಲೂ ಮೂಡಬೇಕು. ಒಂದುವೇಳೆ ಅಂತ್ಯದ ಈ ಪರಿಪಕ್ವ ಸ್ಥಿತಿ ಮೂಡದಿದ್ದಲ್ಲಿ ಅದಕ್ಕೆ 'ಕಾಲ' ಕಾರಣವಲ್ಲ. ವ್ಯಕ್ತಿ ಬದುಕನ್ನು ಗ್ರಹಿಸಲಾಗದ, ತನ್ನ ಒಗರುತನವನ್ನು ಕಳೆದುಕೊಳ್ಳಲಾಗದ ವಿಫಲತೆಯೇ ಇದಕ್ಕೆ ಕಾರಣ.

ನಮ್ಮಲ್ಲಿ ಸಾವನ್ನು 'ಕಾಲ' ಎಂದು ಕರೆಯುತ್ತಾರೆ. 'ಕಾಲನ ಕರೆ ಬಂತು' ಎಂದರೆ ಸಾವು ಬಂದು ಅಪ್ಪಳಿಸಿತು ಎಂದೇ ಅರ್ಥ. ನಮ್ಮ ಪುರಾಣದಲ್ಲಿ ಸಾವಿಗೂ ಒಬ್ಬ ದೇವರಿದ್ದಾನೆ! ಅವನೇ ಯಮ. 'ಯಮ' ಎಂದರೆ ಕಾಲವೆಂದೇ ಅರ್ಥ. ಪ್ರತಿಯೊಬ್ಬ ಅಥವಾ ಪ್ರತಿಯೊಂದು ವಸ್ತು ಮತ್ತು ಜೀವಿಗೆ ಸೃಷ್ಟಿ ಇರುವಂತೆಯೇ ಅಂತ್ಯವೂ ಇರುತ್ತದೆ. ಈ ಸೃಷ್ಟಿ ಮತ್ತು ಅಂತ್ಯದ ಅವಧಿಯನ್ನು ನಿಗದಿ ಮಾಡಿ ಅಂತ್ಯ ಬಂದ ಕೂಡಲೇ ಆ ವ್ಯಕ್ತಿ ಅಥವಾ ವಸ್ತುವಿಶೇಷವನ್ನು ತನ್ನಲ್ಲಿಗೆ ಕರೆದುಕೊಂಡುಬಿಡುವ ಉದ್ಯೋಗ ಇವನದು. ಈ ಪೌರಾಣಿಕ ಪರಿಕಲ್ಪನೆಯೂ ಕೂಡ 'ಕಾಲ'ದ ಅನಿವಾರ್ಯತೆಯನ್ನು ಮತ್ತು ಅದು ಈ ಜಗತ್ತಿನಲ್ಲಿ ನಿರ್ವಹಿಸುವ ಕೆಲಸವನ್ನು ಪ್ರತಿಧ್ವನಿಸುತ್ತದೆ. ಜಗತ್ತಿನಲ್ಲಿ ಉಸಿರಾಡುವ ಜೀವಿಗಳಾಗಲೀ, ಉಸಿರಾಡದ ಘನವಸ್ತುಗಳಾಗಲೀ ಈ ಕಾಲದ ನಿಯಮಕ್ಕೊಳಪಟ್ಟು ಇರಲೇಬೇಕಾಗುತ್ತದೆ. ಹಾಗಿದ್ದಾಗ ಮಾತ್ರ ಸೃಷ್ಟಿಯಲ್ಲಿ ಹಳೆಯದು ಹೋಗಿ; ಹೊಸತನ, ಮುಗ್ಧತೆ, ಕೋಮಲತೆ ಮತ್ತು ಯೌವ್ವನದ ಬಿರುಸುಗಳು ಮೂಡಲು ಸಾಧ್ಯ!

೨೦-೦೬-೨೦೧೩

# ನಮಗಂದಿನಂದವೆ ಸಾಕು!

ಶ್ರಮಕ್ಕೆ ತಕ್ಕ ಪ್ರತಿಫಲವನ್ನು ನಿರೀಕ್ಷೆ ಮಾಡುವುದು ತಪ್ಪಲ್ಲ. ಅದು ವ್ಯಕ್ತಿಯ ಹಕ್ಕು ಕೂಡ ಹೌದು. ಒಂದು ವೇಳೆ ವ್ಯಕ್ತಿಯ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದಿದ್ದಾಗ ಅಸಹಕಾರ, ಸತ್ಯಾಗ್ರಹ ಮುಂತಾದ ಪ್ರತಿಭಟನೆಯ ಮೂಲಕ ವ್ಯವಸ್ಥೆಯ ಕಣ್ಣು ತೆರೆಸಬೇಕಾದದ್ದು ಅನಿವಾರ್ಯವಾಗುತ್ತದೆ. ಈ ಬಗೆಯ ಪ್ರತಿಭಟನೆಯು ವ್ಯಕ್ತಿಗತವಾದಾಗ ಸೋಲಾಗುವ ಸಂಭವವೇ ಹೆಚ್ಚು. ಆದುದರಿಂದ ಹಕ್ಕೊತ್ತಾಯದ ಕೂಗು ಒಂದು ಸಮುದಾಯದ ಧ್ವನಿಯಾಗಿ ಪರಿವರ್ತನೆಗೊಂಡಾಗ ಅದು ಸಾರ್ಥಕವಾಗುತ್ತದೆ.

ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವುದು ನ್ಯಾಯೋಚಿತವೇ ಆಗಿದೆ. ಆದರೆ ಶ್ರಮಕ್ಕೆ ಮೀರಿದ ಅಧಿಕ ಪ್ರತಿಫಲವನ್ನು ಪಡೆಯುವುದು ತಪ್ಪಾಗುತ್ತದೆ ಎಂದು 'ಜನಪದ ಮಹಾಭಾರತ' (ಸಂ: ಡಾ. ಪಿ.ಕೆ. ರಾಜಶೇಖರ) ಅಭಿಪ್ರಾಯ ಪಡುತ್ತದೆ. ಅರಗಿನ ಮನೆಯಿಂದ ಪಾರಾಗಿ ಬಂದ ಪಾಂಡವರು ತಮ್ಮ ತಾಯಿಯೊಡನೆ ಏಕಚಕ್ರೀ ನಗರದ ಕುಂಬಾರನ ಮನೆಯೊಂದರಲ್ಲಿ ಆಶ್ರಯ ಪಡೆದಿರುತ್ತಾರೆ. ಅವರು ತಮ್ಮ ಹೊಟ್ಟೆಪಾಡಿಗಾಗಿ ಭಿಕ್ಷೆ ಬೇಡಿ ಬದುಕುತ್ತಿರಲಿಲ್ಲ. ಅದರ ಬದಲು ಆ ಊರಿನ ಕೃಷಿಕರ ಮನೆಗಳಲ್ಲಿ, ಹೊಲ ಗದ್ದೆಗಳಲ್ಲಿ ಕೆಲಸ ಮಾಡಿ ಕೂಲಿ ಪಡೆದು ಬದುಕುತ್ತಿದ್ದರು. ಭೀಮಸೇನನು ಒಬ್ಬ ಗೌಡನ ಹೊಲದ ಕೆಲಸಕ್ಕೆ ಹೋಗುತ್ತಾನೆ. ಅಲ್ಲಿ ಅವನು ನೂರು ಆಳುಗಳು ಒಂದು ತಿಂಗಳಲ್ಲಿ ಮಾಡುವ ಕೆಲಸವನ್ನು ಒಂದೇ ದಿನದಲ್ಲಿ ಮಾಡಿ ಮುಗಿಸಿದ. ಅದರಿಂದ ಸುಪ್ರೀತನಾದ ಗೌಡನು ನೂರು ಆಳುಗಳು ಒಂದು ತಿಂಗಳ ಅವಧಿಯಲ್ಲಿ ಮಾಡಿದ ಕೆಲಸಕ್ಕನುಗುಣವಾಗಿ ಲೆಕ್ಕ ಹಾಕಿ, ಕೂಲಿಯ ರೂಪದಲ್ಲಿ ಒಂದು ಬಂಡಿಯ ತುಂಬ ರಾಗಿಯನ್ನು ಕೊಟ್ಟು ಕಳುಹಿಸುತ್ತಾನೆ. ಅತ್ಯಂತ ಸಂತೋಷದಿಂದ ಭೀಮನು ಅಷ್ಟೂ ರಾಗಿಯನ್ನು ಮನೆಗೆ ತರುತ್ತಾನೆ. ಅದನ್ನು ಕಂಡ ಧರ್ಮರಾಯನು ಧರ್ಮಸೂಕ್ಷ್ಮದ ಮಾತುಗಳನ್ನಾಡಿ, 'ನೀನು ನಿನ್ನ ವ್ಯಕ್ತಿಗತ ಶ್ರಮವನ್ನು ಬಳಸಿ ಒಂದು ದಿನದ ಕೆಲಸವನ್ನು ಮಾಡಿರುವೆ. ನಿನ್ನ ಶ್ರಮಕ್ಕನುಗುಣವಾದ ಕೆಲಸವನ್ನಷ್ಟೇ ನೀನು ಮಾಡಿರುವುದು. ಆದರೆ ಅದಕ್ಕೆ ಪ್ರತಿಫಲವಾಗಿ ನೀನು ನೂರು ಆಳುಗಳು ಒಂದು ತಿಂಗಳ ಅವಧಿಯಲ್ಲಿ ಮಾಡಿ ಪಡೆಯುವ ಪ್ರತಿಫಲವನ್ನು ಪಡೆದು ತಂದಿರುವೆ. ಇದು ಸರಿಯಲ್ಲ. ನಿನ್ನ ಶ್ರಮಕ್ಕೆ ಮಿರಿದ ಪ್ರತಿಫಲವನ್ನು ಪಡೆಯುವುದು ಪಾಪ. ಅದು ಅನ್ಯಾಯದ ಪ್ರತಿಫಲವಾಗಿಬಿಡುತ್ತದೆ. ನಿನ್ನ ಒಂದು ದಿನದ ಶ್ರಮದ ಕೂಲಿಯ ರೂಪದ ರಾಗಿಯನ್ನಿಟ್ಟುಕೊಂಡು ಉಳಿದ ರಾಗಿಯನ್ನು ಗೌಡನಿಗೆ ಹಿಂತಿರುಗಿಸು' ಎಂದು ಹೇಳಿ ಭೀಮನಿಂದ ರಾಗಿಯನ್ನು ಹಿಂತಿರುಗಿಸುತ್ತಾನೆ.

ಈ ಪ್ರಸಂಗವು ದುಡಿಮೆ ಮತ್ತು ಪ್ರತಿಫಲಗಳ ನಡುವಿನ ಸೂಕ್ಷ್ಮ ಸಂಬಂಧಗಳನ್ನು ಕುರಿತು ಮಾತನಾಡಿದೆ. ನಾವು ನಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ನಿರೀಕ್ಷೆ ಮಾಡುವುದು ಎಷ್ಟು ಸರಿಯೋ, ನಮ್ಮ ಶ್ರಮಕ್ಕಿಂತ ಹೆಚ್ಚು ಪ್ರತಿಫಲವನ್ನು ಪಡೆಯುವುದು ಕೂಡ ಅಷ್ಟೇ ತಪ್ಪು ಎಂಬ ಧರ್ಮಸೂಕ್ಷ್ಮವನ್ನು ಅನಾವರಣಗೊಳಿಸಿದೆ.

ನಮ್ಮ ದೈನಂದಿನ ಬದುಕಿಗೆ ಎಷ್ಟು ಬೇಕೋ ಅಷ್ಟು ಮಾತ್ರ ದುಡಿಯಬೇಕು ಮತ್ತು ಪ್ರತಿಫಲವನ್ನು ನಿರೀಕ್ಷೆ ಮಾಡಬೇಕು ಎಂದು ವಚನಕಾರ್ತಿ ಲಕ್ಕಮ್ಮಳು ಹೇಳುತ್ತಾಳೆ. ಅವಳ ಮತ್ತು ಅವಳ ಗಂಡ ಆಯ್ದಕ್ಕಿ ಮಾರಯ್ಯನ ಕಾಯಕ ಅಕ್ಕಿಯನ್ನು ಆಯ್ದು ತಂದು ಜೀವಿಸುವ ಪರಿಕ್ರಮದ್ದು. ಒಮ್ಮೆ ಆಯ್ದಕ್ಕಿ ಮಾರಯ್ಯನು ದಿನದ ಆವಶ್ಯಕತೆಗಿಂತ ಹೆಚ್ಚು ಅಕ್ಕಿಯನ್ನು ಆಯ್ದು ತಂದುಬಿಡುತ್ತಾನೆ. ಅದನ್ನು ಕಂಡ ಲಕ್ಕಮ್ಮಳು ಹೀಗೆ ಹೇಳುತ್ತಾಳೆ :

**'ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ**
**ಈಸಕ್ಕಿಯಾಸೆ ನಿಮಗೇಕೆ?**
**ನಮಗಂದಿನಂದವೆ ಸಾಕು**
**ಕೊಂಡು ಹೋಗಿ ಅಲ್ಲಿಯೇ ಸುರಿದು ಬನ್ನಿ'**

ಲಕ್ಕಮ್ಮಳ ಈ ಮಾತಿನಲ್ಲಿ ಬಂಡವಾಳ ವಿರೋಧಿ ಮನಸ್ಥಿತಿ ಕಂಡುಬರುತ್ತದೆ.

ಕೂಡಿಡುವುದು ದುರಾಸೆಯ ರೋಗವಾಗಿ ಪರಿಣಮಿಸಿ ವರ್ಗಸೃಷ್ಟಿಗೆ ಕಾರಣವಾಗುತ್ತದೆ. ಸಮಾಜದ ಎಲ್ಲರೂ ತಮ್ಮ ದೈನಂದಿನ ಆವಶ್ಯಕತೆಗನುಗುಣವಾಗಿ ಅಂದಂದಿಗೆ ಮಾತ್ರ ದುಡಿದು ಜೀವಿಸಿದರೆ ಆರ್ಥಿಕ ಸಮಾನತೆ ಸಹಜವಾಗಿ ಮೂಡುತ್ತದೆ. ಆದರೆ ಧರ್ಮರಾಯ ಮತ್ತು ಲಕ್ಕಮ್ಮಳ ಪರಂಪರೆಯನ್ನು ಸದಾ ಜಪಿಸುತ್ತ ಬಂದಿರುವ ನಾವು ಬಂಡವಾಳಶಾಹಿ ವರ್ಗ ಸಂಸ್ಕೃತಿಯನ್ನು ಸೃಷ್ಟಿಸಿರುವುದು ವಿಷಾದವೆನಿಸುತ್ತದೆ.

೦೪-೦೭-೨೦೧೩

# ಪ್ರಕೃತಿ ಸುಂದರ, ಅಷ್ಟೇ ಕ್ರೂರ!

ಕುವೆಂಪು ಅವರು ತಮ್ಮ ಪ್ರಕೃತಿ ಗೀತೆಗಳಲ್ಲಿ ಸೌಂದರ್ಯಾನುಭೂತಿಯನ್ನು ಗ್ರಹಿಸಿ, ಅನುಭವಿಸಿ, ಅದರಲ್ಲಿಯೇ ಒಂದಾಗಿ ಅದೇ ಆಗಿ ಮೂಡಿಬಿಡುತ್ತಾರೆ. ಆ ರಸಪರವಶತೆ ನಮಗೆ ಅತೀತ ಅನುಭವವೆನ್ನಿಸಿದರೂ ಅದು ಅವರ ಅನುಭವಗ್ರಹಿಕೆಯಲ್ಲಿ ಅತ್ಯಂತ ಹೃದಯಗಮ್ಯ ಸತ್ಯ ಅಷ್ಟೇ ಅಲ್ಲ. ವಾಸ್ತವ ಸತ್ಯವೂ ಆಗಿಬಿಡುತ್ತದೆ. ಹೀಗಾಗಿ ಅವರ ಪ್ರಕೃತಿ ಗೀತೆಗಳಲ್ಲಿ ಉಚ್ಚ-ನೀಚ, ಮೇಲು-ಕೀಳು, ದೈತ್ಯ-ಕ್ರಿಮಿ ಎಂಬ ಅಂತರ ಮೂಡುವುದಿಲ್ಲ. ಅವರು ಎಲ್ಲದರಲ್ಲೂ ಬೆರಗನ್ನೂ ವಿಶೇಷ ಸತ್ವವನ್ನೂ ಸೌಂದರ್ಯವನ್ನೂ ಕಂಡುಬಿಡುತ್ತಾರೆ. ಅವರು ಚಿತ್ರಿಸುವ ಹುಲ್ಲು ಹೂವು ಮರಗಿಡ ಪ್ರಾಣಿ ಪಕ್ಷಿಗಳ ವೈವಿಧ್ಯಸಾಗರದಲ್ಲಿ ಸೌಂದರ್ಯದ ಕಂಪು ಹೊರಹೊಮ್ಮುತ್ತದೆ; ಆ ಕಂಪನ್ನು ಸಹೃದಯನು ಅನುಭವಿಸಿ ಆನಂದಿಸಬೇಕೆಂಬ ಬಯಕೆ ತೀವ್ರವಾಗಿರುತ್ತದೆ.

ಪ್ರಕೃತಿ ಕವನಗಳಲ್ಲಿ ಕಾಣುವ ಕವಿ ಕುವೆಂಪು, ಅತ್ಯಂತ ಭಿನ್ನವಾಗಿ ಅವರ ಗದ್ಯಕೃತಿಗಳಲ್ಲಿ ಕಾಣುತ್ತಾರೆ. ಅಲ್ಲಿ ಪ್ರಕೃತಿಯ ಇನ್ನೊಂದು ಅಸೌಂದರ್ಯ ಮುಖವನ್ನು ಅವರು ಅನಾವರಣ ಮಾಡುತ್ತಾರೆ. ಮೇಲ್ನೋಟಕ್ಕೆ ಕಾಣುವುದೇ ಸತ್ಯವಲ್ಲ, ಸುಂದರವಲ್ಲ; ಪ್ರಕೃತಿಗೆ ಭೀಕರವಾದ, ನಿಷ್ಕರುಣವಾದ, ಹೊರ ಸೌಂದರ್ಯಕ್ಕೆ ವಿರುದ್ಧವಾದ ಅಸಹ್ಯವೂ ಕೊಳಕೂ ದುರ್ವಾಸನೆಯುಕ್ತವೂ ಆದ ಮುಖವಿದೆ. ಅದು ಮನುಷ್ಯ ಜೀವಿಗಳನ್ನು - ಪ್ರಾಣಿ ಸಮುಚ್ಚಯವನ್ನು ಆವರಿಸಿ ಕಿತ್ತು ತಿಂದು ಹಿಂಸಿಸುತ್ತದೆ. ಅದು ಬದುಕಿನ ಕಠೋರ ವಾಸ್ತವ ಮುಖದ ಇರುವಿಕೆಯ ಅನುಭವವನ್ನು ಭೀತಕಣ್ಣುಗಳಿಂದ ಕಂಡು, ಅದನ್ನು ಜೀರ್ಣಿಸಿಕೊಂಡು ಸವಾಲುಗಳನ್ನು ಸ್ವೀಕರಿಸಲು ಸಿದ್ಧನಾಗುವಂತೆ ಜೀವಿಯನ್ನು ಉದ್ದೀಪಿಸುತ್ತದೆ. ಇದು ಜೀವವನ್ನು ಇಂಚು ಇಂಚಾಗಿ ಗಟ್ಟಿಗೊಳಿಸುವ ಕ್ರಿಯೆ. ಕುವೆಂಪು ಅವರ ಈ ಪ್ರಕೃತಿ ಚಿತ್ರಣ ಜೀವ ಜಗತ್ತಿನ ಗೂಢ ಸಂಕೀರ್ಣ ಸೂಕ್ಷ್ಮಾತಿಸೂಕ್ಷ್ಮ ಸಂಗತಿಗಳನ್ನು ತಿಳಿವಳಿಕೆಗೆ ತಂದುಕೊಡುವ ಸೃಷ್ಟ್ಯಾತ್ಮಕ ಪ್ರತಿಭೆ!

ಕುವೆಂಪು ಅವರ ಈ ಎರಡೂ ಬಗೆಯ ಪ್ರಕೃತಿ ಚಿತ್ರಣವೂ ಒಂದೇ ಸತ್ಯದ ಎರಡು ವಾಸ್ತವ ಮುಖವೇ ಆಗಿದೆ. ಆದರೆ ಇವುಗಳಲ್ಲಿ ಯಾವುದು ಕಟು ವಾಸ್ತವ? ಯಾವುದು ಲಘು ವಾಸ್ತವ? ಪ್ರಕೃತಿಯ ಪಕ್ಷಿನೋಟದ ರಮಣೀಯತೆಯು ಆನಂದ ತಂದುಕೊಡುತ್ತದೆ, ನಿಜ. ಆದರೆ ಅವರ ಆಳದ ಬುಡದಲ್ಲಿ, ಅಂತರಂಗದಲ್ಲಿ ನಿತ್ಯನಿಮಿಷವೂ ನಡೆಯುತ್ತಿರುವ ಘನ ಘೋರ ಸಾವಯುವ ರಾಸಾಯನಿಕ ಕ್ರಿಯೆಯು ಉತ್ಪತ್ತಿ ಮಾಡುವ ಶಕ್ತಿ ವಿಶೇಷವು ಆನಂದದ ಅನುಭೂತಿಯನ್ನುಂಟು ಮಾಡುವ ಬದಲು ಜೀವಿಗೆ ಯಾತನೆಯನ್ನು ಮೂಡಿಸುತ್ತದೆ.

ಅದರ ಈ ಘನಘೋರ ಕ್ರಿಯಾತ್ಮಕ ಚಟುವಟಿಕೆಯ ಆಶಯವಾದರೂ ಏನು? ಮೇಲಿನ ಸೌಂದರ್ಯ ಸೃಷ್ಟಿಯೇ ಅಲ್ಲವೆ? ಆ ಸೃಷ್ಟಿಯಲ್ಲಿ ತಾನು ಬದುಕಲು ಮತ್ತು ತನ್ನ ಸಂತತಿ ಮುಂದುವರಿಯಲು ಶ್ರಮವಲ್ಲದೆ ಮತ್ತೇನಿದೆ? ತನ್ನ ಹೊರ ಮೈನ ಸೌಂದರ್ಯ ರಾಶಿ ಲಘುವಾದರೂ ಮತ್ತೆ ಮತ್ತೆ ಋತುಋತುಮಾನಗಳಲ್ಲಿ ವೈವಿಧ್ಯಮಯಗೊಳಿಸುವ ಉದ್ದೇಶವಾದರೂ ಅದೇ ತಾನೇ? ಅಂತರಂಗವೇ ನಿಧಾನ, ಸತ್ಯ! ಮೇಲ್ಮೈ ಕ್ಷಣಿಕ, ಸುಂದರ ಸತ್ಯ! ಸೃಷ್ಟಿಗೆ ಎರಡೂ ಅನಿವಾರ್ಯ. ಕೋಮಲತೆ-ಕಠೋರತೆ ಒಮ್ಮುಖವಾಗಿ ಸಾಗಿದಾಗ ಮಾತ್ರ ಬದುಕಿನಲ್ಲಿ ಸತ್ಯದ ಮಂಥನ ಸಾಧ್ಯ. ಕೋಮಲತೆ ಕಠೋರತೆಯ ಸ್ಪರ್ಶದಿಂದ ಬದುಕನ್ನು ಎದುರಿಸುವ ಶಕ್ತಿಯನ್ನು ಪಡೆದರೆ, ಕಠೋರತೆ ಕೋಮಲತೆಯ ಸಂಸರ್ಗದಿಂದ ಹೃದಯವಂತವಾಗುತ್ತದೆ. ಕುವೆಂಪು ಈ ಎರಡೂ ಸತ್ಯಗಳನ್ನು ತಮ್ಮ ಪದ್ಯ ಗದ್ಯಗಳಲ್ಲಿ ಅನಾವರಣ ಮಾಡಿ ಸೌಂದರ್ಯ-ಭೀಕರತೆಗಳೆರಡೂ ಸೃಷ್ಟಿಯ ಚಲನಶೀಲತೆಯ ಎರಡು ಅನಿವಾರ್ಯ ಅಗತ್ಯಗಳೆಂದು ಬಿಂಬಿಸುತ್ತಾರೆ.

ಸದಾ ಚಲನಶೀಲವಾದ, ಸ್ಥಿತ್ಯಂತರವನ್ನು ಬಯಸುವ, ರೂಪಾಂತರ ಬಯಸುವ ಪ್ರಕೃತಿಯ ಬಯಲಗಣ್ಣಿಗೆ ಅದರ ಹೊರಮೈ ಮಾತ್ರ ಗೋಚರಿಸುತ್ತದೆ. ಪಕ್ಷಿನೋಟಕ್ಕೆ ಭಯಂಕರ ಸುಡು ಸುಡುವ ಮರಳುಗಾಡುಗಳು, ಆಳಪಾತಾಳ ಕಣಿವೆಗಳೂ ಸುಂದರವಾಗಿ ಕಾಣುತ್ತವೆ. ಸಾಗರ ಹೊರ ಮೈನ ವೈವಿಧ್ಯಮಯ ಬಣ್ಣ ವಿಸ್ತಾರ ಲಲಿತ ಅಲೆಗಳ ಆಳ ಅಂತರಂಗದಲ್ಲಿರುವ ಭಯ ಮೂಡಿಸುವ ಅಗ್ನಿಕುಂಡಗಳು ಕುದಿಯುತ್ತಿರುತ್ತವೆ. ಪ್ರಕೃತಿಗೆ ತನ್ನ ಸಮತೋಲನವನ್ನು ತೂಗಿಸಿಕೊಳ್ಳುವ ಸಹಜ ಗುಣವಿರುತ್ತದೆ. ಆದುದರಿಂದಲೇ ಅದು ಕೆಲವೊಮ್ಮೆ, ಕೆಲವು ಕಡೆಗಳಲ್ಲಿ ನಗುತ್ತಿರುವಂತೆ ಭಾಸವಾದರೆ, ಮತ್ತೆ ಅದೇ ವೇಳೆಯಲ್ಲಿ ಹಲವು ಕಡೆ ಅಳುತ್ತಿರುವಂತೆ ಅಥವಾ ತನ್ನ ಆವರಣವನ್ನೇ ಅಳಿಸುತ್ತಿರುತ್ತದೆ. ಭೂಮಿಯನ್ನು ನಡುಗಿಸಿ ಪಾತಾಳ ಸೃಷ್ಟಿಮಾಡಿ, ಬೆಂಕಿ ಉಗುಳಿ ವಿನಾಶ ಮಾಡಿ, ಆಕಾಶ ತೂತು ಮಾಡಿ ಮುಸಲಧಾರೆ ಕರೆದು ಅತಿರೇಕವನ್ನು ಮಿತಗೊಳಿಸುವ ಕೆಲಸ ಮಾಡುತ್ತದೆ.

ಪ್ರಕೃತಿಯ ಅಂಶವಾದ ನಾವು ಈ ಸತ್ಯವನ್ನು ಅರ್ಥ ಮಾಡಿಕೊಂಡರೆ, ಅದರ ಸೌಂದರ್ಯ ಮತ್ತು ಕ್ರೂರತೆಗಳು ಪ್ರಾಕೃತಿಕ ನ್ಯಾಯದ ಮುಖಗಳಂತೆ ಗೋಚರಿಸಿ ಹೃದಯಕ್ಕೆ ಶಾಂತತೆ ಮೂಡುತ್ತದೆ.

೧೮-೦೭-೨೦೧೩

# ಲಿಂಗ ಭಂಗ

ನಮ್ಮ ಆದ್ಯ ವಚನಕಾರ ದೇವರ ದಾಸಿಮಯ್ಯನು ಹೆಣ್ಣಿಗೆ ಹೆಣ್ಣು ಆತ್ಮವಿರುತ್ತದೆಯೆಂದೂ, ಗಂಡಿಗೆ ಗಂಡು ಆತ್ಮವಿರುತ್ತದೆಯೆಂದೂ - ಇವೆರೆಡು ಲಿಂಗಗಳ ನಡುವೆ ಸುಳಿದಾಡುವ ಆತ್ಮ ಗಂಡೂ ಅಲ್ಲ, ಹೆಣ್ಣೂ ಅಲ್ಲವೆಂದು ಹೇಳುತ್ತಾನೆ. ಅವನ ಪ್ರಕಾರ 'ಆತ್ಮ' ಹೆಣ್ಣುಗಂಡುಗಳ ನಡುವೆ ಆಗಿಂದಾಗ್ಗೆ ಸುಳಿದಾಡುವ - ಅದಲು ಬದಲಾಗುವ ಶಕ್ತಿವಿಶೇಷ! ಗಂಡಿನ ಒಳಗೆ ಇದ್ದಾಗ ಗಂಡಾಗುತ್ತದೆ; ಹೆಣ್ಣಿನ ಒಳಗೆ ಇದ್ದಾಗ ಹೆಣ್ಣಿನಂತೆ ವರ್ತಿಸುತ್ತದೆ. ಅಂದರೆ ಅದಕ್ಕೆ ತನ್ನದೇ ಆದ ವ್ಯಕ್ತಿತ್ವ, ಸ್ವರೂಪ, ಸ್ವಂತಿಕೆ ಇಲ್ಲವೆ? - ಎಂಬ ಅನುಮಾನಕ್ಕೆ ಎಡೆಮಾಡಿಕೊಡುತ್ತದೆ. ಬಹುಶಃ ಈ ಪರಿಕಲ್ಪನೆ ಅಥವಾ ನಂಬಿಕೆ ದೇವರ ದಾಸಿಮಯ್ಯನ ಕಾಲಘಟ್ಟದ್ದು. ಈ ನಂಬಿಕೆ ಭಾರತೀಯರಲ್ಲಿ ಇಂದಿಗೂ ಹರಿದು ಬಂದಿದೆ; ಈ ನಂಬಿಕೆ ಜೀವಂತವೂ ಇದೆ.

ಇದು ಭಾರತೀಯರಲ್ಲಿರುವ ಪುನರ್ಜನ್ಮದ ನಂಬಿಕೆಯ ಮೇಲೆ ನಿಂತಿರುವಂಥದ್ದು. ಆತ್ಮವೆಂಬುದು ಕೂಡ ಈ ನಂಬಿಕೆಯ ಆಧಾರದ ಮೇಲೆ ಜನಮನದಲ್ಲಿ ಬದುಕಿರುವಂಥದ್ದು. ಆ ನಂಬಿಕೆಯು ಅಲ್ಲಾಡಲು ಶುರುವಾದರೆ ಅದರ ಬುಡವು ಅಲ್ಲಾಡತೊಡಗುತ್ತದೆ. ವೈಚಾರಿಕ ನೆಲೆಯಲ್ಲಿ ವಿಶ್ಲೇಷಣೆ ಮಾಡಿ ನೋಡಿ : ಪುನರ್ಜನ್ಮವೆಂಬುದು ಇಲ್ಲ. ಸೃಷ್ಟಿಯು ಜನಿಸುತ್ತದೆ, ಸಾಯುತ್ತದೆ. ಅದು ಸತ್ತ ಮೇಲೆ ಅದರ ಅಸ್ತಿತ್ವ ಮುಗಿಯುತ್ತದೆ. ಅದು ತನ್ನ ಸಂಕುಲ ಮುಂದುವರಿಕೆಗಾಗಿ ತನ್ನ ವಂಶವಾಹಿಗಳನ್ನು ಮತ್ತೊಂದರ ಒಡಲಲ್ಲಿ ಸ್ಕಲಿಸಿ ಕರ್ತವ್ಯ ಮುಗಿಸುತ್ತದೆ. ಆ ವಂಶವಾಹಿಗಳು ತಮ್ಮ ಪೂರ್ವಿಕರ ಭೌತಿಕ - ಬೌದ್ಧಿಕ ಗುಣಲಕ್ಷಣಗಳನ್ನು ಮುಂದುವರಿಸಿಕೊಂಡು ಬರುತ್ತವೆ. ಅದನ್ನೇ ಪುನರ್ಜನ್ಮವೆಂದು ಕರೆಯುವುದು ಅವೈಚಾರಿಕವಾದುದು. ಗಂಡು ಸತ್ತ ಮೇಲೆ ಅದರಲ್ಲಿರುವ ಆತ್ಮ (ಮನಸ್ಸು?) ಅವನೊಡನೆಯೇ ಪ್ರಕೃತಿಯಲ್ಲಿ ವಿಲೀನವಾಗುತ್ತದೆ; ಹೆಣ್ಣು ಸತ್ತಮೇಲೆ ಅದರೊಳಗಿರುವ ಆತ್ಮವೂ ಅದೇ ಗತಿ ಕಾಣುತ್ತದೆ. ಅಂದಮೇಲೆ ಅಲ್ಲಿಂದಿಲ್ಲಿಗೆ ಸುಳಿದಾಡುವ ಪ್ರಶ್ನೆಯೇ ಬರುವುದಿಲ್ಲ.

ಅಂದರೆ ಹೆಣ್ಣಿನೊಳಗಿರುವ ಆತ್ಮ ಹೆಣ್ಣಿನದೇ ಆಗಿರುತ್ತದೆ; ಗಂಡಿನೊಳಗಿರುವ ಆತ್ಮ ಗಂಡಿನದೇ ಆಗಿರುತ್ತದೆ. ಅದು ತನ್ನ ಲಿಂಗ ಸಹವರ್ತಿಯಾಗಿ ಕಾರ್ಯ ನಿರ್ವಹಿಸುತ್ತದೆ. ಆ ಲಿಂಗದ ಅಂತ್ಯದ ಜೊತೆ ಅದೂ ಅಂತ್ಯವಾಗುತ್ತದೆ.

ಈ ಸತ್ಯವನ್ನು ನಾವು ಅರ್ಥ ಮಾಡಿಕೊಳ್ಳತೊಡಗಿದಾಗ ಲಿಂಗ ಆಧಾರಿತ ಅಹಂಕಾರದ ಮೌಲ್ಯ ವಿವೇಚನೆಯ ಬಗ್ಗೆ ಮನಸ್ಸು ಹರಿಸಬಹುದು. ಗಂಡಿಗೆ ತಾನು ಗಂಡೆಂಬ

ಅಭಿಮಾನವಿರಬೇಕು; ಹೆಮ್ಮೆಯೂ ಇರಬೇಕು. ಹೆಣ್ಣಿಗೂ ಇದೇ ಮನಸ್ಥಿತಿ ಇರಬೇಕು. ಆದರೆ ಈ ಅಭಿಮಾನ - ಹೆಮ್ಮೆಗಳು ತಾನೇ ಹೆಚ್ಚೆಂಬ ಅಹಂಕಾರದ ಸ್ವರೂಪವನ್ನು ಪಡೆಯಬಾರದು. ನಮ್ಮ ಪ್ರಾಚೀನ ಪರಂಪರಾಗತ ಪುನರ್ಜನ್ಮದ ನಂಬಿಕೆಯ ಪ್ರಕಾರ ಬೇರೆಬೇರೆ ಲಿಂಗ ಪ್ರವೇಶ ಮಾಡಿದ ಆತ್ಮ ಹಿಂದಿನ ಜನ್ಮದ ನೆನಪುಗಳನ್ನು, ಲಿಂಗಾಧಾರಿತವಾಗಿ ಅನುಭವಿಸಿದ ಕಷ್ಟಕೋಟಲೆಗಳನ್ನು ಹೊಸ ಜನ್ಮದಲ್ಲಿ ಬೇರೆ ಲಿಂಗದ ದಿರಿಸಿನಲ್ಲಿ ತೀರಿಸಿಕೊಳ್ಳಲು ಉದ್ದೇಶಿಸಿದರೆ ಎಂಥ ಅಪಾಯವಾದೀತು. ಕಲ್ಪಿಸಿಕೊಳ್ಳಿ. ಆದುದರಿಂದಲೇ ಜನ್ಮಾಂತರವೆಂಬುದು ಕಲ್ಪನೆಯ ಕೂಸೆಂದು ವೈಚಾರಿಕವಾಗಿ ವಿಶ್ಲೇಷಿಸಿ, ಈಗ ಜನಿಸಿರುವ ಲಿಂಗವು ತನ್ನ ದೈಹಿಕ - ಮಾನಸಿಕ ಪ್ರವೃತ್ತಿಗಳ ವರ್ತನೆಗಳಿಗನುಗುಣವಾಗಿ ಜೀವಿಸಬೇಕಾಗುತ್ತದೆ. ಅದೇ ಸರಿಯಾದ ಪ್ರಕೃತಿಯ ಚಲನಶೀಲ, ಸಮತೋಲನ ನಿಯಮ, ಇದೇ ಲಿಂಗ ಸಾಮರಸ್ಯ ಅಥವಾ ಹೊಂದಾಣಿಕೆಯ ಅನುಕ್ರಮ ವಿಧಾನ. ಇದರಿಂದ ಪ್ರವೃತ್ತಿಯ ಬಯಕೆಗಳು ಈಡೇರಿ, ಸಂಕುಲ ಮುಂದುವರಿಯಲು ಸಾಧ್ಯವಾಗುತ್ತದೆ. ಇಲ್ಲಿ ಒಂದು ಲಿಂಗ ಮತ್ತೊಂದು ಲಿಂಗದೊಳಗೆ ಐಕ್ಯವಾಗುವ ಅಥವಾ ಅರ್ಪಿತವಾಗುವ ಕ್ರಿಯೆ ಜರುಗುವುದರಿಂದ ಲಿಂಗಾಧಾರಿತ ಅಹಂಕಾರ ನಿರಶನ ಹೊಂದಿ ಸಮಾನತೆ ಮೂಡುತ್ತದೆ. ಇದನ್ನೇ ನಾವು ಲಿಂಗಭಂಗ ಕ್ರಿಯೆಯೆಂದು ಗುರುತಿಸಬೇಕಾಗುತ್ತದೆ.

ಆದರೆ ನಮ್ಮ ವ್ಯವಸ್ಥಿತ ರೂಢಿಗತ ಸಮಾಜದಲ್ಲಿ ಲಿಂಗಾಧಾರಿತ ಶೋಷಣೆ ನಿರಂತರವಾಗಿ ನಡೆದು ಬಂದಿರುವುದರಿಂದ, ಮಾನಸಿಕ ಮತ್ತು ಪ್ರವೃತ್ತಿಯ ಸಹಜ ನಿಯಮಾಧಾರಿತ ಲೀನತೆ ಸಾಧ್ಯವಾಗದೆ ಕೇವಲ ದೈಹಿಕ ಮತ್ತು ಅಧಿಕಾರಗಳು ವಿಜೃಂಭಿಸಿದವು. ತನ್ಮೂಲಕ ಲಿಂಗದ ಮೇಲೆ ಲಿಂಗವು ಕಾಲ-ಸಂದರ್ಭಕ್ಕನುಗುಣವಾಗಿ ದಬ್ಬಾಳಿಕೆ ನಡೆಸಿದವು. ಒಂದು ಲಿಂಗಧರ್ಮ ಮತ್ತು ಮತಮೌಢ್ಯಗಳನ್ನೂ ತನಗೆ ಹೇಗೆ ಬೇಕೋ ಹಾಗೆ ನೆಯ್ದುಕೊಂಡು ಮತ್ತೊಂದು ಲಿಂಗವನ್ನು ದಾಸ್ಯಕ್ಕೆ ದೂಡಿ ದುಡಿಸಿಕೊಂಡಿದೆ. ಇದು ಚರಿತ್ರೆ; ನಡೆದ ಸತ್ಯ.

ಆಧುನಿಕ ಶಿಕ್ಷಣ ಸ್ತ್ರೀಗೆ ಅರಿವನ್ನು ಮೂಡಿಸಿದೆ. ಜೊತೆಗೆ ಅವಳು ಆರ್ಥಿಕವಾಗಿಯೂ ಸಬಲೀಕರಣಗೊಳ್ಳುತ್ತಿದ್ದಾಳೆ. ಪುರುಷ ನಿರ್ವಹಿಸುತ್ತಿದ್ದ ಹೆಚ್ಚುಕಡಿಮೆ ಎಲ್ಲ ಸಾಮಾಜಿಕ - ಆರ್ಥಿಕ - ಆಡಳಿತಾತ್ಮಕ ಪಾತ್ರಗಳನ್ನು ಅವಳು ಇಂದು ಸಮರ್ಥವಾಗಿ ನಿರ್ವಹಿಸುತ್ತಿದ್ದಾಳೆ. ಈ ಸಂದರ್ಭದಲ್ಲಿ ಅವಳು ಕೂಡ ಚರಿತ್ರೆಯಿಂದ ಪಾಠ ಕಲಿಯುವಂಥದ್ದು ಬಹಳಷ್ಟಿದೆ. ಅದೇ ಲಿಂಗಭಂಗ ಕ್ರಿಯೆ!

೦೧-೦೮-೨೦೧೩

# ಆಧುನಿಕ 'ಮಯ' ಸದನಗಳು

ಪಾಂಡವರು ಇಂದ್ರಪ್ರಸ್ಥಕ್ಕೆ ಹೋದಾಗ ಅದು ಬೆಂಗಾಡಾಗಿತ್ತು. ಅದನ್ನು ಫಲಭರಿತ ಪ್ರದೇಶವನ್ನಾಗಿ ಮಾಡಲು ದೇವತೆಗಳು ಸಹಾಯ ಮಾಡುತ್ತಾರೆ. ಪಾಂಡವರಿಗೆ ಅತ್ಯಂತ ಸುಂದರವಾದ, ಚಮತ್ಕಾರ ಭರಿತವಾದ ಸದನವೊಂದನ್ನು ಶಿಲ್ಪಿ 'ಮಯ'ನು ನಿರ್ಮಿಸಿಕೊಡುತ್ತಾನೆ.

ಅದರೊಳಗಿನ ಕಣ್ಕಟ್ಟುಗಳು ಆದಿವಾಸಿಯೊಬ್ಬನು ದೊಡ್ಡ ಶಹರದಲ್ಲಿ ಕಕ್ಕಾವಿಕ್ಕಿಯಾಗುವಂತೆ ಎಂಥವರನ್ನು ದಿಕ್ಕು ತಪ್ಪಿಸುತ್ತಿದ್ದವು ಮತ್ತು ಅವರನ್ನು ನಗೆಪಾಟಲಿಗೆ ಗುರಿ ಮಾಡುತ್ತಿದ್ದವೆಂದು ಮಹಾಭಾರತ ಹೇಳುತ್ತದೆ. ಅಂಥ 'ಮಯ' ಸದನದಲ್ಲಿ ಹಸ್ತಿನಾವತಿಯ ಯುವರಾಜ ಸುಯೋಧನ ಕಕ್ಕಾವಿಕ್ಕಿಯಾಗಿ ದ್ರೌಪದಿಯ ನಗೆಗೆ ಗುರಿಯಾಗಿ ಅವಮಾನಿತನಾಗುತ್ತಾನೆ. ಅದೇ ಮುಂದೆ ಜೂಜಿನ ಪ್ರಸಂಗಕ್ಕೆ ಕಾರಣವಾಗಿ, ದ್ರೌಪದಿಯ ಮಾನಾಪಹರಣದಂಥ ಹೀನ ಕೃತ್ಯಕ್ಕೂ ಕಾರಣವಾಗುತ್ತದೆ.

ದ್ರೌಪದಿಯ ನಗೆಯೊಂದೇ ದುರ್ಯೋಧನನಲ್ಲಿ ಪಾಂಡವರ ಮೇಲಿನ ದ್ವೇಷವನ್ನು ಇಮ್ಮಡಿಗೊಳಿಸಿತೆಂದು ಬಗೆಯುವುದು ತಪ್ಪಾಗುತ್ತದೆ. ಇಂದ್ರಪ್ರಸ್ಥದಲ್ಲಿ ಅವನು ಕಂಡ ಪಾಂಡವರ ಸಂಪತ್ತು, ವೈಭವ ಅವನಲ್ಲಿ ಲೋಭವನ್ನು, ಆಸೆಯನ್ನು ಉಂಟು ಮಾಡುತ್ತದೆ. ಆದರೆ ಪಾಂಡವರ ಮೇಲೆ ಯುದ್ಧ ಮಾಡಿ ಅವರ ರಾಜ್ಯ ಕೋಶಗಳನ್ನು ವಶಪಡಿಸಿಕೊಳ್ಳುವುದು ದುಸ್ಸಾಧ್ಯವೆಂದು ಅವನಿಗೆ ತಿಳಿದಿತ್ತು. ಅದಕ್ಕೆ ಅವನು ಅಡ್ಡ ದಾರಿಯನ್ನು ಹಿಡಿದನು. ದ್ಯೂತವನ್ನು ಆಡಿ ಅವರ ದೇಶ ಕೋಶವನ್ನು ಕಬಳಿಸಿ, ಅವರನ್ನು ವನವಾಸಕ್ಕೆ ಕಳಿಸಿದ. ಇದಕ್ಕೆಲ್ಲಾ ಒಂದು ಪ್ರಮುಖ ನೆಪ 'ಮಯ' ನಿರ್ಮಿತ ಸದನ!

ಇಂದಿನ ವರ್ತಮಾನದ ಆಧುನಿಕತೆಯ ಶ್ರೀಮಂತಿಕೆಯನ್ನು ಮೆರೆಯುತ್ತಿರುವ, ಶ್ರೀಮಂತವರ್ಗ ಕಲಿಯುವ ಪಾಠ ಈ ಮಯ ಸದನದ ಪ್ರಸಂಗದಲ್ಲಿ ಧ್ವನಿತವಾಗುತ್ತದೆ. ನಮ್ಮ ಪ್ರಾಚೀನ ಗ್ರಾಮ ಸಂಸ್ಕೃತಿಯಲ್ಲಿಯೇ ಏಕೆ, ಆ ಕಾಲದ ನಗರಗಳಲ್ಲೂ ಶ್ರೀಮಂತ ಸದನಗಳು ಖಂಡಿತವಾಗಿ ಅಪರೂಪವಾಗಿದ್ದವು. ರಾಜನ ಅರಮನೆ ಅಥವಾ ಜಮೀನ್ದಾರನ ದೊಡ್ಡ ಮಣ್ಣಿನ ವಾಡೆಗಳು ಮಾತ್ರ ಅಲ್ಲೊಂದು ಇಲ್ಲೊಂದು ಕಾಣಿಸಿಕೊಳ್ಳುತ್ತಿದ್ದವು. ಅವುಗಳನ್ನು ಹೊರತುಪಡಿಸಿದರೆ ಇಡೀ ಗ್ರಾಮ ಅಥವಾ ನಗರ ಸಮಾನವಾದ ಗೃಹ ಸೌಲಭ್ಯವನ್ನೂ ಸಾಮ್ಯತೆಯನ್ನೂ ರೂಢಿಸಿಕೊಂಡಿತ್ತು. ಬಡವ - ಶ್ರೀಮಂತರ ನಡುವೆ ಅಡುಗೆ ಮನೆಯ ಪರಿಕರಗಳಲ್ಲಿ ಆಹಾರ ಅಭ್ಯಾಸದಲ್ಲಿ ಅಂಥ ವ್ಯತ್ಯಾಸವಿರುತ್ತಿರಲಿಲ್ಲ. ಹೀಗಾಗಿ ಪರಸ್ಪರ ಅಸೂಯೆ - ದ್ವೇಷಗಳ ಪ್ರಮಾಣ ಅತ್ಯಂತ ಕಡಿಮೆಯಲ್ಲಿರುತ್ತಿತ್ತು. ಅದು ಆರ್ಥಿಕ ಕಾರಣಗಳಿಗಿಂತ

ಮಿಗಿಲಾಗಿ ವೈಯಕ್ತಿಕ ರಾಗ ದ್ವೇಷಾದಿಗಳ ನೆಲೆಯಲ್ಲಿ ಮೆರೆದಾಡುತ್ತಿತ್ತು. ಬಡವ-ಶ್ರೀಮಂತರ ನಡುವೆ ಶೋಷಕ-ಶೋಷಿತ ವಿಕಲ್ಪಗಳು ಇದ್ದರೂ ಅವು ಅನೇಕ ಸಂದರ್ಭದಲ್ಲಿ ಮೌಢ್ಯ, ಜನ್ಮಾಂತರ ಕರ್ಮಫಲ ಅಥವಾ ಹಣೆಬರಹಗಳ ನಂಬಿಕೆಯಡಿ ಮರೆಯಾಗಿಬಿಡುತ್ತಿದ್ದವು. ಒಬ್ಬ ಚೆನ್ನಾಗಿ ಬಾಳಿ ಬದುಕುತ್ತಿದ್ದರೆ ಅದು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯದ ಫಲವೆಂದೂ, ತೊಂದರೆ ಅನುಭವಿಸಿದರೆ ಅದು ಆ ಜನ್ಮದಲ್ಲಿ ಮಾಡಿದ ಪಾಪದ ಫಲವೆಂದೂ ಸುಮ್ಮನೆ ನಂಬಿ ಬಿಸಿಯುಸಿರು ಬಿಡುತ್ತಿದ್ದರು.

ಆದರೆ ಆಧುನಿಕ ಹಳ್ಳಿಗಳ ಮತ್ತು ನಗರಗಳ ಗೃಹ ಸಾಮ್ಯತೆಯ ಅಂತರ ಹೆಚ್ಚಿ, ಜೀವನ ಶೈಲಿಗಳ ರೀತಿ ರಿವಾಜುಗಳು ಭಿನ್ನ ಸ್ವರೂಪ ಪಡೆಯುತ್ತಿವೆ. ಸಾಮಾನ್ಯ ಹಳ್ಳಿಗಳಲ್ಲೂ ಆಧುನಿಕ 'ಮಯ' ಸದನಗಳು ತಲೆ ಎತ್ತಿನಿಂತಿವೆ. ಅದೂ ಒಂದು ಅಥವಾ ಎರಡಲ್ಲ. ಅಂಥ ಅನೇಕ ಸದನಗಳು ನಗರದ ನವನಾಗರಿಕತೆಗೆ ಸರಿಸಾಟಿಯಾಗಿ ತಲೆ ನಿಮಿರಿಸಿ ನಿಂತಿವೆ. ಆದರೆ ಅವುಗಳ ಪಕ್ಕದಲ್ಲಿ ಹೆಂಚಿನ ಮನೆಗಳೂ ಗುಡಿಸಲುಗಳೂ ಅಪಶಕುನದಂತೆ ದುಃಖಿಸುತ್ತಿರುವುದು, ಪರಿತಪಿಸುವುದು ಅತಿಯಾಗತೊಡಗಿದೆ. ನಗರಗಳಲ್ಲಂತೂ ಇಂಥ 'ಮಯ'ಗಳು ಬಡಾವಣೆ ಬಡಾವಣೆಗಳಾಗಿ ನಿರ್ಮಿತಗೊಂಡು, ತಮ್ಮ ಪಕ್ಕದಲ್ಲಿ ಸೇವೆಗೆಂದು ವ್ಯವಸ್ಥಿತವಾಗಿ ಕೊಳೆಗೇರಿಗಳನ್ನು ಜೋಪಾನವಾಗಿ ಕಾಯ್ದಿರಿಸಿಕೊಂಡಿವೆ.

ಆದರೆ ಈಗ ಹಳೆಯ ಕಾಲದಂತಿಲ್ಲ. ಆಲೋಚನಾ ವಿಧಾನಗಳು ಬದಲಾಗಿವೆ, ಕರ್ಮಫಲ, ಪಾಪ-ಪುಣ್ಯ ಪರಿಕಲ್ಪನೆಗಳು ಜನಮನದ ಆಂತರ್ಯದಲ್ಲಿ ಇನ್ನೂ ಜೀವಂತವಾಗಿದ್ದರೂ ಅವುಗಳ ಬಗೆಗಿನ ಹೆದರಿಕೆ ಕಡಿಮೆಯಾಗಿದೆ. ಅದಕ್ಕೆ ಮೂಲ ಕಾರಣ- ವರ್ತಮಾನದ ಆಲೋಚನಾ ವಿಧಾನಗಳು. ಆಧುನಿಕ ಬದುಕಿನ ಭೋಗಲಾಲಸೆ ವ್ಯಕ್ತಿಯ ಜೀವನ ಗತಿಯನ್ನು ನಿರ್ಧರಿಸತೊಡಗಿದೆ. ನಗರ ಮತ್ತು ಗ್ರಾಮೀಣ ಬದುಕಿನಲ್ಲಿ ಹೆಜ್ಜೆಹೆಜ್ಜೆಗೂ ತಲೆ ಎತ್ತುತ್ತಿರುವ 'ಮಯ' ಸದನಗಳು ಸಾಮಾನ್ಯರನ್ನು ಅತೃಪ್ತಿಯ ಕಡೆಗೆ, ಈರ್ಷೆಯ ಕಡೆಗೆ ತುಡಿಸುತ್ತಿವೆ. ಇದಕ್ಕೆ ಮುಖ್ಯ ಕಾರಣ ಈ ಆಧುನಿಕ 'ಮಯ' ಸದನಗಳು ಪಾಂಡವರಿಗೆ ದಕ್ಕಿದ ಹಾಗೆ - ಪವಾಡ ಸ್ವರೂಪದವಲ್ಲ. ಅವು ಅಕ್ರಮವಾಗಿ, ವಂಚನೆಯಿಂದ, ಶೋಷಣೆಯಿಂದ ಸಂಪಾದಿಸಿದ ಹಣದಿಂದ ನಿರ್ಮಿತವಾದಂಥವು.

ಶ್ರೀಮಂತರು ಬದುಕುತ್ತಿರುವ ಈ ಭೋಗ ಜೀವನ ವಿಧಾನವು ತಮಗೆ ದಕ್ಕಬೇಕಾದ ಸಂಪತ್ತಿನಿಂದ ಅನುಭವಿಸುತ್ತಿರುವುದು ಎಂದು ಬಡಬಗ್ಗರು-ಶೋಷಿತರು ಅರ್ಥ ಮಾಡಿಕೊಂಡುಬಿಟ್ಟಿದ್ದಾರೆ! ಈ ತಿಳಿವಳಿಕೆಯನ್ನು ತಪ್ಪು ಎಂದು ನಿರ್ದಾಕ್ಷಿಣ್ಯವಾಗಿ ಹೇಳುವುದು ಆತುರದ ಮಾತಾದೀತು. ಇದರ ಬಗ್ಗೆ ಇಂದು ಸಮಾಜ ಗಂಭೀರವಾಗಿ ಚಿಂತಿಸಿ ಹೆಜ್ಜೆ ಇಡಬೇಕಾಗಿದೆ. ಇಲ್ಲದಿದ್ದಲ್ಲಿ ಮುಂದೆ ಸಂಭವಿಸಬಹುದಾದ ಅಪಾಯ ತಪ್ಪುವುದಿಲ್ಲ.

೧೫-೦೮-೨೦೧೩

# ದೇಶ ಮತ್ತು ಧರ್ಮ

ರಾಮಾಯಣ ಮಹಾಕಾವ್ಯದ ಅಂತ್ಯದಲ್ಲಿ ಶ್ರೀರಾಮಚಂದ್ರನು ವಿಭೀಷಣನನ್ನು ರಾಜನನ್ನಾಗಿ ಪಟ್ಟಾಭಿಷೇಕ ಮಾಡುತ್ತಾನೆ. ಆ ಸಂದರ್ಭದಲ್ಲಿ ಅತ್ಯಂತ ಸಂಪದ್ಭರಿತವಾಗಿರುವ ಲಂಕೆಯಲ್ಲೇ ಶ್ರೀರಾಮನು - ಸೀತಾ, ಲಕ್ಷ್ಮಣರೊಡನೆ ಇರಬೇಕೆಂಬ ಮಾತು ಪ್ರಸ್ತಾಪಕ್ಕೆ ಬರುತ್ತದೆ. ಆಗ ಶ್ರೀರಾಮನು ತಾಯಿ ಮತ್ತು ತಾಯ್ನೆಲ ನಮಗೆ ಪವಿತ್ರವಾದವು. ನಮ್ಮ ಗಮ್ಯ ಮತ್ತು ಗುರಿ ಅವೇ ಆಗಿರಬೇಕು. ಅಲ್ಲೇ ನಮ್ಮ ಜನ್ಮಕ್ಕೆ ಅರ್ಥಪ್ರಾಪ್ತಿ ಆಗುವಂಥದ್ದು ಎಂಬ ಮಾತುಗಳನ್ನಾಡಿ ಲಂಕೆಯಲ್ಲಿರಲು ನಿರಾಕರಿಸಿ ಸೀತಾ, ಲಕ್ಷ್ಮಣರೊಡನೆ ಅಯೋಧ್ಯೆಗೆ ಮರಳುತ್ತಾನೆ.

ಈ ಪ್ರಸಂಗ ನಮ್ಮ ತಾಯ್ನೆಲವೆಂಬುದು ಸರ್ವ ಸಂಗತಿಗಳಿಗಿಂತಲೂ ಶ್ರೇಷ್ಠವಾದುದು ಎಂಬುದನ್ನು ಪ್ರತಿಪಾದಿಸುತ್ತದೆ. ಅಲ್ಲೇ ನಮ್ಮ ಬಾಳಿನ ಅರ್ಥವಿದೆ; ಅದರ ಮೇಲಿನ ಪ್ರೀತಿಯು ಮಾತೃ ಸದೃಶವಾದುದಾಗಿದೆ. ಅದರ ರಕ್ಷಣೆ ಮತ್ತು ಅಭಿವೃದ್ಧಿಗಾಗಿ ನಾವು ದುಡಿಯಬೇಕಾಗಿದೆ. ಎಂಬ ಸತ್ಯವನ್ನು ಬಹಿರಂಗಪಡಿಸುತ್ತದೆ. ನಾವು ಜಗತ್ತಿನ ಯಾವುದೇ ಮೂಲೆಯಲ್ಲಿದ್ದರೂ ನಮ್ಮ ಅಂತಿಮ ಗಮ್ಯ ನಮ್ಮ ತಾಯ್ನೆಲವೇ ಆಗಿರಬೇಕೆಂಬ ಚಿರ ತತ್ವವನ್ನು ರಾಮಾಯಣ ನಮ್ಮ ಅರಿವಿಗೆ ಮೂಡಿಸುತ್ತದೆ. ರಾಮಾಯಣದ ಈ ತತ್ವವೇ ಶತಶತಮಾನಗಳಿಂದ ನಿಶ್ಶಬ್ದವಾಗಿ ನಮ್ಮ ಸಾಹಿತ್ಯದಲ್ಲಿ ಹರಿದು ಬರುತ್ತಿದೆ. ಅದು ಪರಂಪರೆಯನ್ನು ಮುಂದುವರಿಸುವ ಶುಷ್ಕ ಮಾರ್ಗವಾಗಿರದೆ, ಬದುಕಿನ ಚಿರಮೌಲ್ಯಗಳಲ್ಲಿ ಪ್ರಮುಖವಾಗಿರುವುದರಿಂದ ಅದು ವರ್ತಮಾನಕ್ಕೆ ಬೇಕಾಗಿರುವ ಅಗತ್ಯ ದಾರಿದೀಪವಾಗಿದೆ. ಗ್ರಾಮೀಣ ಬದುಕನ್ನು ನಿರಾಕರಿಸುತ್ತಾ, ನಾಗರಿಕತೆಯ ಕೃತಕ ಆಡಂಬರಕ್ಕೆ, ತಾತ್ಕಾಲಿಕ ಆಕರ್ಷಣೆಗೆ ಒಳಗಾಗುತ್ತಿರುವ ತರುಣ ಜನಾಂಗಕ್ಕೆ ಅಗತ್ಯವಾಗಿ ಬರಬೇಕಾದ ತಿಳಿವಳಿಕೆಯಿದು. ಈ ರಾಮಾಯಣದ ಚಿರಮೌಲ್ಯವನ್ನೇ ಬೇರೆಬೇರೆ ಸ್ವರೂಪಗಳಲ್ಲಿ ನಮ್ಮ ಕುವೆಂಪು, ಕಾರಂತರು ನಿರೂಪಿಸಿದ್ದಾರೆ. ಕಾರಂತರ 'ಮರಳಿ ಮಣ್ಣಿಗೆ' ಮತ್ತು 'ಚಿಗುರಿದ ಕನಸು' ಕಾದಂಬರಿಗಳು, ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಕೃತಿ ಈ ತತ್ವವನ್ನು ಸಮರ್ಪಕವಾಗಿ ಮಂಡಿಸುತ್ತವೆ. 'ಬಂಗಾರದ ಮನುಷ್ಯ'ದಂಥ ಚಲನಚಿತ್ರವಂತೂ ಈ ತತ್ವವನ್ನು ಪರಿಣಾಮಕಾರಿಯಾಗಿ ಪ್ರತಿಫಲಿಸುತ್ತದೆ.

ದೇಶಕ್ಕೆ ಒಂದು ಸೀಮೆ ಇರುತ್ತದೆ. ಆ ಸೀಮೆಗೆ ವಿಶಿಷ್ಟವಾದ ಭಾಷೆ. ಆಹಾರ ಪದ್ಧತಿ, ಹವಾಮಾನ, ಜೀವನ ಶೈಲಿ ಇರುತ್ತವೆ. ಇವುಗಳ ಆಧಾರದ ಮೇಲೆ ಅಲ್ಲಿಗೇ ವಿಶಿಷ್ಟವಾದ ಸಂಸ್ಕೃತಿ ಮೂಡಿರುತ್ತದೆ. ಈ ಸಂಸ್ಕೃತಿಯ ಅಂಗವಾಗಿ ಧಾರ್ಮಿಕ ಪರಿಕಲ್ಪನೆಯೂ ಮೂಡಿರುತ್ತದೆ.

ಅಂದರೆ ಒಂದು ದೇಶದ ಸಮಗ್ರ ಸಂಸ್ಕೃತಿಯ ಅವಿಭಾಜ್ಯ ಅಭಿನ್ನ ಉತ್ಪನ್ನವೇ ಧರ್ಮ. ಆದುದರಿಂದಲೇ ಅದು ತಾನು ಜನಿಸಿದ ದೇಶದ ಸೀಮೆಯ ಆಚಾರ ಭಾಗ ಮಾತ್ರವಾಗಿರಬೇಕಾಗುತ್ತದೆ. ಭಾಷೆಯ ಸ್ವರೂಪದಂತೆ. ಅದು ಬೇರೊಂದು ಸೀಮೆಯ ಸಂಸ್ಕೃತಿಯ ಮೇಲೆ ಆಕ್ರಮಣ ಮಾಡಹೊರಡುವುದು ಅಕ್ಷಮ್ಯವೂ, ಅತಿ ಕ್ರೂರವೂ ಆಗಿ, ಮತ್ತೊಂದು ಸಂಸ್ಕೃತಿಯನ್ನು ಗುಲಾಮನನ್ನಾಗಿಸಿಕೊಳ್ಳಲು ಹೊರಟ ದುಷ್ಕೃತ್ಯ ಮಾದರಿಯಾದುದಾಗುತ್ತದೆ.

ಆದರೆ ಇಂದು ಧರ್ಮ ಸೀಮೆಯನ್ನು ದಾಟುವ ಕೆಲಸವನ್ನು ಜಾಗತಿಕ ಮಟ್ಟದಲ್ಲಿ ನಡೆಸುತ್ತಿದೆ. ಈ ಕಾರಣದಿಂದಾಗಿಯೇ ಧರ್ಮಕ್ಕೆ ಸೀಮೆಯ ಹಂಗಿಲ್ಲ. ಅದನ್ನು ದಾಟಿ ಧಾರ್ಮಿಕ ಸಾಮ್ರಾಜ್ಯವನ್ನು ಸ್ಥಾಪಿಸುವುದೇ ಮುಖ್ಯವೆಂದು ಪ್ರಬಲ ಜನಸಂಖ್ಯೆಯ ಬಾಹುಳ್ಯವಿರುವ ಧರ್ಮಗಳು ಹೇಳುತ್ತಿವೆ. ಈ ನಿಟ್ಟಿನಲ್ಲಿ ಜಗತ್ತಿನಲ್ಲಿ ಧರ್ಮಯುದ್ಧಗಳು ನಡೆದಿವೆ, ನಡೆಯುತ್ತಿವೆ. ಈ ಧರ್ಮಮೂಲ ಸಿದ್ಧಾಂತವು ವ್ಯಕ್ತಿಯನ್ನು ದೇಶಮೂಲವಾದಿತನದಿಂದ ಧರ್ಮಮೂಲಭೂತವಾದಿಯನ್ನಾಗಿ ಪರಿವರ್ತಿಸುತ್ತದೆ. ಅವನಿಗೆ ದೇಶಕ್ಕಿಂತ ಧರ್ಮವೇ ಪ್ರಧಾನವಾಗಿ, ದೇಶದ್ರೋಹದಂಥ ಕೆಲಸ ಮಾಡಲು ಹೇಸಿಗೆ ಅನ್ನಿಸುವುದಿಲ್ಲ. ಧಾರ್ಮಿಕ ಮೂಲಭೂತವಾದಿಗಳಿಗೆ ತನ್ನ ಸೀಮೆ, ಅದರ ಭಾಷೆ ಮತ್ತು ಅಲ್ಲಿನ ಬದುಕು ಮುಖ್ಯವಾಗುವುದೇ ಇಲ್ಲ. ಮಾನವೀಯ ಮೌಲ್ಯಗಳಿಗಿಂತ ನಂಬಿಕೆಯ ಆಧಾರದ ಮೇಲೆ ಮೂಡಿದ ಧಾರ್ಮಿಕ ಆಚರಣೆಗಳು ಮುಖ್ಯವಾಗುತ್ತವೆ. ತನ್ನ ಧರ್ಮವೇ ಶ್ರೇಷ್ಠವೆಂಬ ಅಹಂಕಾರದಿಂದ ಜಗತ್ತನ್ನು ಅದರ ಬಹುರೂಪಕತೆಯಿಂದ ಧಾರ್ಮಿಕ ಏಕರೂಪಕತೆಗೆ ಪರಿವರ್ತಿಸುವ ಕೆಲಸವನ್ನು ಮೂಲಭೂತವಾದ ಯತ್ನಿಸುತ್ತದೆ. ಅದಕ್ಕಾಗಿ ಅಮಾನವೀಯ ಕೃತ್ಯಗಳನ್ನು ಎಸಗಿ, ಅದಕ್ಕೆ ಧರ್ಮದ ಮುಖವಾಡ ಧರಿಸಿ ನಗುತ್ತದೆ. ಅದಕ್ಕೆ 'ಧರ್ಮವನ್ನು ರಕ್ಷಿಸಿದವನಿಗೆ ಧರ್ಮ ರಕ್ಷಣೆ ನೀಡುತ್ತದೆ' ಎಂಬ ಹುಸಿ ಸಿದ್ಧಾಂತದ ಲೇಪನ ಹಚ್ಚಲಾಗುತ್ತದೆ.

ಪ್ರತಿಯೊಬ್ಬನಿಗೂ ಆತ ಹುಟ್ಟಿದ ನೆಲ, ಧರ್ಮಕ್ಕಿಂತಲೂ ಶ್ರೇಷ್ಠವಾದುದೆಂಬ ಅರಿವು ಮೂಡಬೇಕು. ಧರ್ಮವೆಂಬುದು ಆ ನೆಲದ ಸಂಸ್ಕೃತಿಯ ಒಂದಂಶವೇ ಹೊರತು, ಅದೇ ಎಲ್ಲವೂ ಅಲ್ಲವೆಂಬ ತಿಳಿವಳಿಕೆ ಬರಬೇಕು. ಆಗ ಮಾತ್ರ ದೇಶದ ಸಮಗ್ರತೆ ಸೋದರತ್ವದ ಮೂಲಕ ಅರಳಲು ಸಾಧ್ಯ.

೨೯-೦೮-೨೦೧೩

# ಗಂಡ

ಗಂಡನೆಂದರೆ ಬಲಾಢ್ಯನೂ ಶೂರನೂ ಶಕ್ತಿ ಸಂಪನ್ಮೂಲ ಉಳ್ಳವನೂ ಆದ ವ್ಯಕ್ತಿ ಎಂಬ ಅರ್ಥವಿದೆ. ಕಾಲಾಂತರದಲ್ಲಿ ಇದಕ್ಕೆ ಒಡೆಯ, ಯಜಮಾನ ಎಂಬ ಅರ್ಥಗಳು ಸೇರಿಕೊಂಡಿವೆ. ಅಂದರೆ ಗಂಡನೆಂಬ ಶಬ್ದಕ್ಕೆ ಲಿಂಗಾಧಾರಿತ ಅರ್ಥವನ್ನೂ ಇಟ್ಟು ನೋಡಿದರೆ ಇಲ್ಲಿ ಒಳಿತು ಅನ್ನಿಸುತ್ತದೆ. ಬಲಾಢ್ಯಳೂ ಶೂರಳೂ ಶಕ್ತಿ ಸಂಪನ್ಮೂಲಳೂ ಆಗಿರುವ ಸ್ತ್ರೀಯೂ ಕೂಡ ಗಂಡುತನವನ್ನು ಉಳ್ಳವಳಾಗಿರುವ ಸಾಧ್ಯತೆಯಿದೆ. ಚರಿತ್ರೆಯಲ್ಲಿ ಪುರುಷನಂತೆ ಅಥವಾ ಅವನಿಗಿಂತ ಮಿಗಿಲಾಗಿ ಗಂಡುತನವನ್ನು ಮೆರೆದ ಅನೇಕ ಸ್ತ್ರೀಯರು ನಮಗೆ ಸಿಗುತ್ತಾರೆ. ಆದರೆ ಪುರುಷಪ್ರಧಾನ ವ್ಯವಸ್ಥೆ ಪ್ರಾರಂಭವಾದ ನಂತರ ಗಂಡುತನಕ್ಕಿರುವ ಗುಣಲಕ್ಷಣಗಳು ಪುರುಷನಲ್ಲಿ ಮಾತ್ರ ಗೋಚರಿಸುತ್ತವೆ ಅಥವಾ ಇವೆ ಎಂದು ಭ್ರಮಿಸಿ ಗಂಡುತನವನ್ನು ಪುರುಷನಿಗೆ ಅನ್ವಯಿಸಿ ಸೀಮಿತಗೊಳಿಸಲಾಗಿದೆ. ಗಂಡನೆಂಬ ಪದವನ್ನು ಪುರುಷನಿಗೇ ಅನ್ವಯಿಸಿ ಸೀಮಿತಗೊಳಿಸಲಾಗಿದೆ.

ಗಂಡ ಎಂಬ ಶಬ್ದಕ್ಕೆ ಇನ್ನೂ ಇಂದು ಅರ್ಥವಿದೆ. ಏನು ಗಂಡ ಕಾದಿದೆಯೋ? ಎಂಬ ಮಾತಿನಲ್ಲಿ ಅಪಾಯ, ತೊಂದರೆಗಳ ನಿರೀಕ್ಷೆಯ ದಿಗಿಲು ಕಾಣುತ್ತದೆ. ಅಂದರೆ ಗಂಡನೆಂದರೆ ಅಪಾಯ, ಆಪತ್ತು, ಕುರು, ರೋಗ ರುಜಿನ ಎಂಬೆಲ್ಲಾ ಅರ್ಥಗಳಿವೆಯೆಂಬುದನ್ನು ತಿಳಿದುಕೊಂಡು, ಗಂಡ ಎಂಬ ಪದಕ್ಕೆ ಈಗ ಹೆಚ್ಚಾಗಿ ಬಳಸುತ್ತಿರುವ ಪತಿ / ಹಸ್ಬೆಂಡ್ ಎಂಬ ಪದವನ್ನು ವ್ಯಾಖ್ಯಾನಿಸಬಹುದು. ಸ್ತ್ರೀಯನ್ನು ಪತ್ನಿಯನ್ನಾಗಿ ಸ್ವೀಕರಿಸಿ, ಅವಳನ್ನು ಸಂತಾನಾಭಿವೃದ್ಧಿಯ ಸಾಧನ ಮತ್ತು ಭೋಗಭಾಜನಗಳನ್ನಾಗಿ ಮಾಡಿಕೊಂಡ ಪುರುಷ, ಅವಳನ್ನು ವ್ಯಕ್ತಿತ್ವ ರಹಿತಳನ್ನಾಗಿ ಮಾಡಿ, ಅವಳ ಆಸೆ ಕನಸು ಮತ್ತು ಸೃಷ್ಟಿಶೀಲ ನಡೆಯನ್ನು ಕುಂಠಿತಗೊಳಿಸಿ ಗುಲಾಮಳನ್ನಾಗಿ ಮಾಡಿಕೊಂಡನು. ಇದು ಜಗತ್ತಿನ ಎಲ್ಲೆಡೆ ಚರಿತ್ರೆಯಲ್ಲಿ ಕಂಡುಬರುವ ಸತ್ಯ. ಚರಿತ್ರೆಯಲ್ಲಿ ಪುರುಷ ನಿರಂತರವಾಗಿ ಸ್ತ್ರೀ ಮೇಲೆ ನಡೆಸುತ್ತ ಬಂದಿರುವ ಶೋಷಣೆಯ ಹಿನ್ನಲೆಯಲ್ಲಿ - ಸ್ತ್ರೀ ದೃಷ್ಟಿಯಿಂದ ನೋಡಿದಾಗ ಗಂಡ ಅಪಾಯ, ಆಪತ್ತು ಅಥವಾ ದೇಹಕ್ಕೆ ಅಂಟಿಕೊಂಡ ಕುರುವೆಂದೇ ತಿಳಿಯಬೇಕು. ಈ ಕಾರಣದಿಂದ ಸ್ತ್ರೀಗೆ ಪತಿಯೆಂದರೆ ಒಂದರ್ಥದಲ್ಲಿ ಗಂಡ ಅಪಾಯ, ಆಪತ್ತು - ಎಂದೇ ಬಗೆಯಬೇಕು!

ಆಧುನಿಕ ಕಾಲದಲ್ಲಿ ಸ್ತ್ರೀಪ್ರಪಂಚದ ವಿಕಸನಕ್ಕೆ ಮನೆ ಶಾಲೆ ಕಚೇರಿಗಳಲ್ಲಿ ಹೆಜ್ಜೆಹೆಜ್ಜೆಗೂ ನಾನಾ ಮಾನಸಿಕ ದೈಹಿಕ ಮತ್ತು ಆರ್ಥಿಕ ಗಂಡಾಂತರಗಳನ್ನು ತಂದೊಡ್ಡುವ ತಡೆಗೋಡೆಯಾಗಿ ಪುರುಷ ವ್ಯವಹರಿಸುತ್ತಿದ್ದಾನೆ ಎಂಬ ಸತ್ಯವನ್ನು ಅರ್ಥಮಾಡಿಕೊಂಡಾಗ ಗಂಡ ಎಂಬ ಶಬ್ದಕ್ಕಿರುವ ಅರ್ಥ ಅರಿವಿಗೆ ಬರುತ್ತದೆ. ಗಂಡ ಎಂಬ ಪದಕ್ಕೆ ಇಂಗ್ಲಿಷ್ ಶಬ್ದಕೋಶವೊಂದು ಎರಡು

ಭಿನ್ನವಾದ, ವಿರುದ್ಧಾರ್ಥ ನೀಡುತ್ತದೆ. ಗಂಡ ಸಮರ್ಥ ನಿರ್ವಾಹಕ ಮತ್ತು ಗಂಡ ಅಸಮರ್ಥ ನಿರ್ವಾಹಕ - ಎಂಬ ಎರಡು ಅರ್ಥಗಳೇ ಅವು. ಈ ನೆಲೆಯಲ್ಲೂ ನಾವು ಸ್ತ್ರೀ ಪುರುಷ ಸಾಮರ್ಥ್ಯತೆಯನ್ನು ಕುರಿತು ಚಿಂತಿಸಬಹುದು. ಆಧುನಿಕ ಸಮಾಜಶಾಸ್ತ್ರಜ್ಞರು ಮತ್ತು ವ್ಯವಹಾರ ನಿರ್ವಹಣಾ ಶಾಸ್ತ್ರಜ್ಞರು ಗುರುತಿಸಿರುವಂತೆ ಪುರುಷರಿಗಿಂತ ಸ್ತ್ರೀಯರು ಉತ್ತಮ ನಿರ್ವಹಣಾ ಕೌಶಲ್ಯ ಉಳ್ಳವರು. ಅತ್ಯಂತ ಉತ್ತಮ ನಿರ್ವಹಣಾ ಶಕ್ತಿಯಿರುವ ಪುರುಷರಿಗಿಂತ ಅತ್ಯಂತ ಕಳಪೆ ನಿರ್ವಹಣಾ ಶಕ್ತಿಯಿರುವ ಪುರುಷರು ಅಧಿಕ. ಆದರೆ ಸಾಧಾರಣ ಮಟ್ಟದಿಂದ ಅತ್ಯುತ್ತಮ ನಿರ್ವಹಣಾ ಸಾಮರ್ಥ್ಯವಿರುವ ಮಹಿಳೆಯರು ಜಗತ್ತಿನ ಮನೆಮನೆಯಲ್ಲೂ ಸಿಗುತ್ತಾರೆ. ಏಕೆಂದರೆ ಸ್ತ್ರೀಗೆ ನಿರ್ವಹಣೆ ಎಂಬುದು ಕೌಟುಂಬಿಕ ಕಾರಣಗಳಿಂದಾಗಿ ಅವಳಲ್ಲಿ ವಂಶವಾಹಿ ರೂಪದಲ್ಲೇ ತರಬೇತಿ ಪಡೆದುದಾಗಿರುತ್ತದೆ.

ಸ್ತ್ರೀಯ ಈ ಬಗೆಯ ನಿರ್ವಹಣಾ ಸಾಮರ್ಥ್ಯ - ಕೌಶಲ್ಯಕ್ಕೆ ಒಂದು ರೂಪದಲ್ಲಿ ಪುರುಷನೇ ಕಾರಣನೆನ್ನಬಹುದು. ಹೆಂಡತಿ ಎನ್ನುವವಳು ದ್ವಿತೀಯೆ ಎಂದು ಪರಿಗಣಿಸಿ, ಅವಳು ನಿರ್ದಿಷ್ಟ ಕೆಲಸದಲ್ಲಿ ತೊಡಗಿರುವವಳು ಎಂದು ಒಂದು ಜಾಗಕ್ಕೆ ಅಥವಾ ಕೆಲಸಕ್ಕೆ ಕಟ್ಟಿಹಾಕಿರುವುದು ಕೂಡ ಕಾರಣವಾಗಿದೆ. ಅವಳನ್ನು ಮುಖ್ಯವಾಗಿ ಗೃಹಕೃತ್ಯಕ್ಕೆ ಸೀಮಿತಗೊಳಿಸಿ ಬಂಧಿಸಿದ್ದರಿಂದ ಅವಳು ಅನಿವಾರ್ಯವಾಗಿ ಅದರ ನಿರ್ವಹಣೆಯಲ್ಲಿ ಕೌಶಲ್ಯವನ್ನು ವೃದ್ಧಿಸಿಕೊಂಡಳು.

ಪ್ರಕೃತಿ ನಿಯಮದಲ್ಲಿ ಸ್ತ್ರೀ ಪುರುಷರಿಬ್ಬರೂ ಸಮಾನರು. ಸೃಷ್ಟಿಕ್ರಿಯೆ ಮತ್ತು ಅದರ ಚಲನೆಯಲ್ಲಿ ಅವರ ಪಾಲು ಪರಸ್ಪರ ಪೂರಕ. ಗಂಡ ಹೆಂಡತಿ ಎಂಬ ಪರಿಕಲ್ಪನೆಗಳು ಅನಂತರ ಸೃಷ್ಟಿಗೊಂಡ ಅಸಮಾನ ಸಾಮಾಜಿಕ ಪದ್ಧತಿಗಳು.

೧೨-೦೯-೨೦೧೩

# ಪರದೇಶಿ

ನಮ್ಮ ಹಿಂದಿ ಸಿನೇಮಾಗಳಲ್ಲಿ 'ಪರದೇಶಿ'ಯನ್ನು ಕುರಿತಾದ ಸಾಕಷ್ಟು ಹಾಡುಗಳಿವೆ. ಸಾಮಾನ್ಯವಾಗಿ ಈ ಹಾಡುಗಳು ಪ್ರೇಮಗೀತೆಗಳು; ಪರದೇಶಿ ತರುಣನನ್ನು ಪ್ರೀತಿಸಿದ ಪ್ರಿಯತಮೆ ಅವನನ್ನು ಹಂಬಲಿಸಿ ಕರೆಯುವ ಅಥವಾ ವಿಲಾಪಿಸುವ ಹಾಡುಗಳು, ತರುಣನೂ ಪರದೇಶಿ ಪ್ರಿಯತಮೆಯನ್ನು ಕುರಿತು ಪ್ರಲಾಪಿಸುವುದುಂಟು. ಇಲ್ಲಿ 'ಪರದೇಶ'ವೆಂದರೆ ಬೇರೆಯ ದೇಶವೆಂದು ನಾವು ತಿಳಿಯಬೇಕಾದ ಆವಶ್ಯಕತೆಯಿಲ್ಲ. ಬಹುಪಾಲು ಈ ಹಾಡುಗಳು ಕಳೆದ ಶತಮಾನದ ಗ್ರಾಮೀಣ ಪ್ರದೇಶದ ಕಥಾನಕಗಳಲ್ಲಿ ಹೆಚ್ಚು ಕಾಣಸಿಗುತ್ತವೆ. ಆ ಗ್ರಾಮೀಣ ಪ್ರದೇಶದಲ್ಲಿ ಬದುಕು ಮಾಡುತ್ತಿರುವ ಜನರಲ್ಲಿ ವಿದೇಶವೆಂಬ ಕಲ್ಪನೆ ಈಗಿನ ಆಧುನಿಕ ಜಗತ್ತಿನ ವ್ಯಾಪ್ತಿಯಲ್ಲಿ ಬರುತ್ತಿರಲಿಲ್ಲ. ಅಪರಿಚಿತ ಊರು-ಪ್ರದೇಶಗಳಿಂದ ಬಂದ ಯಾವುದೇ ವ್ಯಕ್ತಿ ಅವರಿಗೆ 'ಪರದೇಶಿ'ಯಂತೆ ಭಾಸವಾಗುತ್ತಿದ್ದ. ಅಂದರೆ 'ಪರದೇಶಿ'ಯೆಂದರೆ ಒಬ್ಬ ಅಪರಿಚಿತನೂ, ಭಾಷೆ ಸಂಸ್ಕೃತಿ ನಡವಳಿಕೆಗಳಲ್ಲಿ ಭಿನ್ನನೂ, ತಮ್ಮ ವಾಸಸ್ಥಳದ ಪ್ರಾದೇಶಿಕತೆಯಿಂದ ಬಹುದೂರದ ಭೌಗೋಳಿಕ ಪರಿಸರದಿಂದ ಬಂದವನೂ ಆಗಿರುತ್ತಿದ್ದ.

ನಮ್ಮ ಹಿಂದಿನ ಕಾಲದವರಿಗೆ ಜಗತ್ತು ಅತ್ಯಂತ ಚಿಕ್ಕದಾಗಿತ್ತು. ಆಗಿನ್ನೂ 'ಜಾಗತಿಕ ಹಳ್ಳಿ'ಯ ಪರಿಕಲ್ಪನೆ ಇರಲಿಲ್ಲ. ಅತಿ ಎಂದರೆ ಜಗತ್ತು ಎಂದರೆ ಭಾರತೀಯರಿಗೆ 'ಆಸೇತು ಹಿಮಾಚಲ'ವೇ ಆಗಿತ್ತು. ಈ 'ಆಸೇತು ಹಿಮಾಚಲ' ಪರಿಕಲ್ಪನೆಯೂ ಸಹ ಸದಾ ಜಂಗಮ ಸ್ಥಿತಿಯಲ್ಲಿರುತ್ತಿದ್ದ ಸಾಧು ಸಂತರಿಗೆ ಮಾತ್ರ ಅರಿವಿದ್ದ ಸತ್ಯಸಂಗತಿಯಾಗಿತ್ತು. ಹಿಮಾಚಲದ ಆಚೆ ಇರುವ ಜಗತ್ತು ಅವರ ಕಲ್ಪನೆಗೆ ಮೀರಿದ್ದಾಗಿತ್ತು ಅಥವಾ ದಾಳಿಕೋರರ ನಿಗೂಢ ವಾಸಸ್ಥಳದಂತೆ ಗೋಚರಿಸುತ್ತಿತ್ತು. ಅಥವಾ ಖಂಡಾಂತರ ವ್ಯಾಪಾರಿಗಳಿಗೆ ಮತ್ತು ರಾಜ ಮಹಾರಾಜರುಗಳಿಗೆ ಮಾತ್ರ ತಿಳಿದ ವಿಷಯವಾಗಿತ್ತು. ಆದರೆ ಸಾಮಾನ್ಯ ಜನರಿಗೆ ಅದರಲ್ಲೂ ಗ್ರಾಮೀಣ ವಾಸಿಗಳಿಗೆ 'ಪರದೇಶ'ವೆಂದರೆ ದೂರದ - ತಾವು ಅರಿಯದ ಪ್ರದೇಶ!

ಲೋಕ ಸುತ್ತುವ, ಕೋಶ ಓದುವ ಸಂಸ್ಕೃತಿ ನಮ್ಮ ಸಾಮಾನ್ಯ ದುಡಿಯುವ ವರ್ಗದ್ದಾಗಿರಲಿಲ್ಲ. ಅವರು ತಾವು ಬದುಕುತ್ತಿದ್ದ ಪ್ರದೇಶದ ಆವರಣಕ್ಕೆ ಬದ್ಧರಾಗುತ್ತಿದ್ದರು. ಅವರು ವಾಸಿಸುತ್ತಿದ್ದ ಗ್ರಾಮದ ಸಮೀಪದ ನಗರ / ಪಟ್ಟಣವೇ ಅವರಿಗೆ ಬೆರಗಿನ ಸಂಗತಿಯಾಗಿರುತ್ತಿತ್ತು. ಅದನ್ನೂ ಸಹ ಎಲ್ಲಾ ಗ್ರಾಮಸ್ಥರು ಕಣ್ಣಿಂದ ನೋಡುತ್ತಿರಲಿಲ್ಲ. ನೋಡಿ ಬಂದವರ ಬಾಯಿಂದ ಅದರ ವರ್ಣನೆಯನ್ನು ಕೇಳಿ ಬೆರಗಾಗುತ್ತಿದ್ದರು. ಅಂದಮೇಲೆ ಅಲ್ಲಿಂದ ಬಹುದೂರದ ಭಿನ್ನ ಭಾಷೆ-ಸಂಸ್ಕೃತಿಯ ನೆಲೆಯನ್ನು ಅವರು ಪರದೇಶವೆಂದೇ ಭಾವಿಸಿ ಅದನ್ನು

ಹಾಗೆಂದು ಕರೆಯುತ್ತಿದ್ದರು.

ನಮ್ಮ ಪುರಾತನರಿಗೆ ಅಪರಿಚಿತವಾದುದರ ಬಗ್ಗೆ ಕುತೂಹಲವಿದ್ದಂತೆ ಭಯವೂ ಇತ್ತು. ಕುತೂಹಲ - ತಿಳಿಯದಿದ್ದುದರ ಬಗ್ಗೆ ಅರಿಯುವ ಸಹಜ ಕ್ರಿಯೆ. ಭಯ - ಅಪರಿಚಿತವಾದುದರ ಆಳ ಅಗಲ ಶಕ್ತಿ ಮರ್ಮಗಳ ಪರಿಚಯವಿಲ್ಲದಿದ್ದುದರ ಕಾರಣ; ಅನ್ಯ ಸಂಸ್ಕೃತಿಯೊಂದರ ಸಂಸರ್ಗದಿಂದ ತನ್ನತನವೆಂಬುದು ಎಲ್ಲಿ ಸಡಿಲವಾಗುವುದೋ ಎಂಬ ಕಾರಣ. ಈ ಕಾರಣಗಳಿಂದ 'ಪರದೇಶಿ'ಯನ್ನು ದೂರವಿಡುವ, ಅನುಮಾನದಿಂದ ನೋಡುವ ದೂರೀಕರಿಸುವ ಪ್ರಜ್ಞೆ ಸದಾ ಜಾಗೃತವಾಗಿರುತ್ತಿತ್ತು. ಆದುದರಿಂದಲೇ ತಮ್ಮ ಪ್ರದೇಶದ ತರುಣಿ / ತರುಣ 'ಪರದೇಶಿ'ಗಳನ್ನು ಪ್ರೀತಿಸುವುದನ್ನು, ಒಂದಾಗುವುದನ್ನು ಪ್ರತಿಬಂಧಿಸುತ್ತಿತ್ತು. ಇದರ ಜೊತೆಗೆ ತಮ್ಮ ವಸ್ತುವೊಂದು ಅನ್ಯ ಸಂಸ್ಕೃತಿಯೊಂದರ ಸ್ವತ್ತಾಗುವುದನ್ನು ವಿರೋಧಿಸುವ ಸ್ವಾರ್ಥವೂ ಕೆಲಸ ಮಾಡುತ್ತಿತ್ತು.

ಆದರೆ ಪ್ರೇಮಕ್ಕೆ ಅಪರಿಚಿತವಾದುದನ್ನು ಬೆಸೆಯುವುದರಲ್ಲಿ ಸಂತಸವಿದೆ. ಇದು ಪ್ರಕೃತಿ ನಿಯಮವೂ ಹೌದು. ಗಂಡು ಹೆಣ್ಣಿನ ಪ್ರೇಮ - ಕಾಮ ಸಂಬಂಧಗಳು ಅಪರಿಚಿತವಾದುದನ್ನು ಬೆಸೆಯುವ ಸಂಗತಿಯಲ್ಲಿ ಎರಡು ಅನ್ಯ ಸಂಸ್ಕೃತಿಗಳನ್ನು ಸಾಮರಸ್ಯಗೊಳಿಸುವ ಕ್ರಿಯೆಯ ಜೊತೆಗೆ, ಭಿನ್ನ ವಂಶವಾಹಿಗಳು - ರಕ್ತ ಸಂಬಂಧಗಳು ವೃದ್ಧಿಯಾಗುವಂತೆ ನೋಡಿಕೊಳ್ಳುವ ಪ್ರಕೃತಿಸಹಜ ನಡೆಯೂ ಕೆಲಸ ಮಾಡಿರುತ್ತದೆ. ಆದುದರಿಂದಲೇ ತಾವು ಹುಟ್ಟಿ ಬೆಳೆದ ಸಮಾಜ ಎಷ್ಟೇ ವಿರೋಧಿಸುತ್ತಿದ್ದರೂ 'ಪರದೇಶಿ'ಯ ಪ್ರೇಮಕ್ಕಾಗಿ ತಮ್ಮ ಪ್ರಾಣವನ್ನೇ ಅರ್ಪಿಸಲು ಸಿದ್ಧವಾಗಿಬಿಡುವ ಸೋಹ್ನಿ - ಮಹಿವಾಲ್, ಹೀರ - ರಾಂಜಾ ರಂಥ ಅವರ ಪ್ರೇಮಿಗಳು ಸದಾ ನಮ್ಮ ಆದರ್ಶರಾಗುತ್ತಾರೆ. ಟ್ರಾಯ್ ದೇಶದ ರಾಜಕುಮಾರ ಪ್ಯಾರೀಸನು ಆಗಲೇ ಮದುವೆಯಾಗಿ ತಾಯಿಯಾಗಿದ್ದ ಹೆಲೆನ್‌ಳಿಗೆ 'ಪರದೇಶಿ'ಯಾಗಿ ಪ್ರಿಯನಾಗಿಬಿಡುತ್ತಾನೆ.

ಈ ಅಪರಿಚಿತ 'ಪರದೇಶಿ' ಗುಣದ ಆಕರ್ಷಣೆ ಈಗಲೂ ಕೆಲಸ ಮಾಡುತ್ತಿರುವುದರಿಂದಲೇ ಪ್ರೀತಿಯ ಅರಳುವಿಕೆಯೂ, ಜೊತೆಗೆ ನೋವಿನ ತರಂಗಗಳೂ ಜೊತೆಜೊತೆಯಲ್ಲಿಯೇ ಸಾಗುತ್ತಿವೆ.

೨೬-೦೯-೨೦೧೩

# ದೇಸಿ ಪರದೇಸಿ

ನಾವು 'ದೇಸಿ'ಯಿಂದ ಬಹಳ ದೂರ ಬಂದುಬಿಟ್ಟಿದ್ದೇವೆ! ನಮ್ಮ ಬದುಕಿನ ಪ್ರತಿ ಉಸಿರಾಟ - ಜೀವನ ಶೈಲಿಗಳಲ್ಲಿ 'ಪರದೇಸಿ'ಗಳಾಗಿದ್ದೇವೆ. ಇದು ಸುಳ್ಳಲ್ಲ, ಕಟು ವಾಸ್ತವ. ಹಾಗೆಯೇ ಸುಮ್ಮನೆ ನಮ್ಮ ಸುತ್ತಮುತ್ತಲ ಆವರಣವನ್ನು ಅವಲೋಕಿಸಿದಾಗ ಅಲ್ಲೆಲ್ಲಾ ಪರದೇಸಿ ಸರಕುಗಳು ಅಥವಾ ಆ ವಾಸನೆಯ ವಸ್ತುಗಳು ನಮ್ಮ ಗಮನಕ್ಕೆ ಬರುತ್ತವೆ. ನಮ್ಮ ಅಡುಗೆ ಮನೆಯ ಸರಕುಗಳು, ನಾವು ಬಳಸುವ ಬೈಕು ಕಾರುಗಳು, ನಮ್ಮ ಬೆರಳ ತುದಿಯಿಂದ ಜಗತ್ತಿನ ಎಲ್ಲ ಮಾಹಿತಿಯನ್ನು ನಮ್ಮ ಕಣ್ಮುಂದೆ ಸಾಕ್ಷಾತ್ಕರಿಸುವ ಕಂಪ್ಯೂಟರ್, ನಮ್ಮ ಇಡೀ ಸಂಬಂಧಕ್ಕೆ ಹೊಸ ವ್ಯಾಖ್ಯಾನ ಬರೆಯುತ್ತಿರುವ ಮೊಬೈಲ್, ನಮ್ಮ ಮಕ್ಕಳು ಆಡುವ ಆಟಿಕೆಗಳು, ತಿನ್ನುವ ಪೆಪ್ಪರ್‌ಮೆಂಟ್ ಚಾಕೋಲೇಟ್‌ಗಳು, ನಾವು ಆಧುನಿಕರೆಂದು ಭ್ರಮಿಸಿಕೊಂಡು ಬೆಳಿಗ್ಗೆ ಸಂಜೆ ಕುಡಿಯುವ ಓಟ್ಸ್‌ನಂಥ ಗಂಜಿಗಳು, ಶೋಕಿಗೆಂದು ತಿನ್ನುವ ಡೇಟ್ಸ್‌ಗಳು...... ಹೀಗೆ ನಾವು ಲೆಕ್ಕ ಹಾಕುತ್ತಾ ಬಂದರೆ ಪರದೇಸಿ ಮಾರುಕಟ್ಟೆ ಸಂಸ್ಕೃತಿಯ ಕಬಂಧಬಾಹುಗಳ ವ್ಯಾಪಕತೆ ಅರಿವಿಗೆ ಬರುತ್ತದೆ.

ನಮ್ಮ ಸಂಸ್ಕೃತಿಯ ಅಂಶಗಳನ್ನು ಪರದೇಸಿತ್ವ ನುಂಗಿ ನೀರು ಕುಡಿಯುತ್ತಿದೆ. ನಮ್ಮ ಗಂಡಸರೆಲ್ಲರೂ ಹೆಚ್ಚುಕಡಿಮೆ ಪರದೇಸಿ ಪ್ಯಾಂಟು ಷರ್ಟುಗಳ ಕೇಶ ವಿನ್ಯಾಸದ ಜಾಡಿಗೆ ಬಂದುದಾಗಿದೆ. ಹೆಂಗಸರು - ಅದರಲ್ಲೂ ನಲ್ವತ್ತು ಐವತ್ತು ವರ್ಷಗಳ ಕೆಳಗಿನವರು ಸೀರೆಯನ್ನು ಬಿಟ್ಟು, ಪರದೇಸಿ ಉಡುಪು ಧರಿಸುವುದನ್ನು ಅಭ್ಯಾಸ ಮಾಡಿಕೊಂಡಾಗಿದೆ. ರಾತ್ರಿಯ ಹೊತ್ತಿನ ದಿರಿಸಾಗಿದ್ದ ನೈಟಿ ಹೆಚ್ಚುಕಡಿಮೆ ಸಾಮಾನ್ಯ ಉಡುಪಿನಂತೆ ಗ್ರಾಮೀಣ ಪ್ರದೇಶದಲ್ಲಿ ನಡೆದಾಡುತ್ತಿದೆ.

ದೇಸಿ ವಸ್ತುಗಳನ್ನು ಬಳಸಬೇಕೆಂಬುದು ಇಂದು ಒಂದು ಆದರ್ಶವಾಗಿದೆ; ಸಾಮಾಜಿಕ ಕಳಕಳಿಯ ಹೋರಾಟದ ಆಶಯವಾಗಿದೆ. ಆದರೆ ವಾಸ್ತವ ಬದುಕಿನಲ್ಲಿ ಪರದೇಸಿ ಸರಕುಗಳು ವ್ಯಾಮೋಹಕ್ಕಿಂತ ಮಿಗಿಲಾದ ಅನಿವಾರ್ಯ ಎನ್ನುವಷ್ಟರಮಟ್ಟಿಗೆ ಸೇರಿಹೋಗಿವೆ. ಅವುಗಳನ್ನು ನಿರಾಕರಿಸಿ ಬದುಕು ಮಾಡಲು ಅಸಾಧ್ಯವಾಗದಷ್ಟು ದೂರ ಭಾರತೀಯರ ಬದುಕು ಸಾಗಿ ಮುಂದೆ ಬಂದಿದೆ. ಕಂಪ್ಯೂಟರ್, ಟಿವಿ, ಮೊಬೈಲ್‌ಗಳಂಥ ಸಾಧನಗಳಿಲ್ಲದೆ ಇಂದಿನ ಜೀವನ ಒಂದು ಹೆಜ್ಜೆ ಇಡಲು ಅಸಮರ್ಥವಾಗಿದೆ. ಹಾಗೆ ಮುನ್ನಡೆಯುವುದು ಅಸಾಧ್ಯವೂ ಆಗಿದೆ. ಅದು ಚಲನಶೀಲತೆಯನ್ನು ಕುಂಠಿತಗೊಳಿಸಿಬಿಡುತ್ತದೆ.

ನಮ್ಮ ದಿನಬಳಕೆಯ ಸಾಮಾನ್ಯ ಸರಕುಗಳಿಂದ ಹಿಡಿದು ಐಷಾರಾಮಿ ವಸ್ತುಗಳನ್ನು

ನಾವು ಪರದೇಶದಿಂದ ಆಮದು ಮಾಡಿಕೊಳ್ಳುತ್ತೇವೆ ಅಥವಾ ಆ ದೇಶದ ಕಂಪನಿಗಳೇ ನಮ್ಮಲ್ಲಿ ನಮ್ಮ ಕೂಲಿಕಾರರಿಂದ ಉತ್ಪಾದಿಸುವ ತಂತ್ರ ಕಂಡುಕೊಂಡು ಮಾರುಕಟ್ಟೆಯನ್ನು ನಿಯಂತ್ರಣಕ್ಕೆ ತೆಗೆದುಕೊಂಡಿವೆ. ಇಂದು ಭಾರತದಲ್ಲಿ ಆರ್ಥಿಕ ತುರ್ತುಸ್ಥಿತಿ ನಿರ್ಮಾಣ ಆಗುತ್ತಿರುವುದರಿಂದ 'ಆಮದು ಸರಕುಗಳನ್ನು ಬಳಸಬೇಡಿ, ಆದಷ್ಟು ದೇಸಿ ವಸ್ತುಗಳನ್ನು ಬಳಸಿರಿ' ಎಂದು ನಮ್ಮ ರಾಜಕೀಯ ಧುರೀಣರು ಕರೆ ನೀಡುತ್ತಿದ್ದಾರೆ. ಆದರೆ ನಾವು ಹಿಂದೆ ಹೋಗದಷ್ಟು ಬಹಳ ಮುಂದೆ ಬಂದುಬಿಟ್ಟಿದ್ದೇವೆ. ಭಾರತೀಯ ಸಾಂಪ್ರದಾಯಿಕ ಆಭರಣ ಸಾಧಾನವಾದ ಚಿನ್ನವನ್ನು ಸಹ ನಾವಿಂದು ಉತ್ಪಾದಿಸುತ್ತಿಲ್ಲ ಎಂಬ ಕಟು ಸತ್ಯವನ್ನು ಜೀರ್ಣಿಸಿಕೊಳ್ಳಬೇಕಿದೆ. ಪ್ರತಿ ಗ್ರಾಂ ಚಿನ್ನವು ಸಹ ನಮಗೆ ಆಮದು ಮಾರ್ಗದಲ್ಲೇ ಬರಬೇಕು!

ಕಾಲು ಶತಮಾನಗಳ ಹಿಂದೆ ಭಾರತಕ್ಕೆ ಜಾಗತೀಕರಣದ ದಿಡ್ಡಿ ಬಾಗಿಲನ್ನು ತೆರೆದು ಪರದೇಸಿ ಸರಕುಗಳ ರುಚಿಯನ್ನು ಭಾರತೀಯ ಗ್ರಾಹಕನಿಗೆ ಅಂಟಿಸುವ ಸಂದರ್ಭದಲ್ಲಿ ಭಾರತದ ಸಾಮಾಜಿಕ ಚಿಂತಕರು ಮತ್ತು ಗಾಂಧಿವಾದದಲ್ಲಿ ನಂಬಿಕೆಯಿಟ್ಟಿದ್ದ ಆರ್ಥಿಕ ತಜ್ಞರು ದೇಶದ ಹೊಸ ಆರ್ಥಿಕ ನೀತಿಯನ್ನು ವಿರೋಧಿಸಿದ್ದರು. ಇದರಿಂದಾಗಿ ಭವಿಷ್ಯತ್ತಿನಲ್ಲಿ ಭಾರತದ ಅರ್ಥ ವ್ಯವಸ್ಥೆಯ ಮೇಲೆ ದೊಡ್ಡ ಹೊಡೆತ ಬೀಳುವುದೆಂದು ಎಚ್ಚರಿಸಿದ್ದರು. ಆಗ ಅಂದಿನ ಆಧುನಿಕ ಉಬ್ಬರದಲ್ಲಿ ತೇಲುತ್ತಿದ್ದವರು ಅವರನ್ನು ಲೇವಡಿ ಮಾಡಿದ್ದರು. ಇಂದು ಅವರೇ 'ದೇಸಿ ಸರಕುಗಳನ್ನು ಬಳಸಿ; ದೇಶದ ಅರ್ಥ ವ್ಯವಸ್ಥೆಯನ್ನು ಉಳಿಸಿ' ಎಂದು ಕರೆ ನೀಡುತ್ತಿರುವುದು ವಿಪರ್ಯಾಸ!

ಪರದೇಸಿ ಮಾರುಕಟ್ಟೆಯ ವಿಷವರ್ತುಲದಲ್ಲಿ ಸಿಲುಕಿರುವ ನಾವಿಂದು ಬಹಳ ದೂರ ಬಂದುಬಿಟ್ಟಿದ್ದೇವೆ. ಆದರೆ ನಮಗೆ ನಮ್ಮ ದೇಶ ಮುಖ್ಯ. ನಮ್ಮ ಮಕ್ಕಳ ಭವಿಷ್ಯ ಮುಖ್ಯ ಅನ್ನಿಸುವುದಾದರೆ - ಗಾಂಧೀಜಿಯವರ ತತ್ವಸಿದ್ಧಾಂತದ ಕಡೆ ಪ್ರಾಮಾಣಿಕವಾಗಿ ಗಮನಹರಿಸಬೇಕಾಗಿದೆ.

೧೦-೧೦-೨೦೧೩

# ಈರುಳ್ಳಿ

ಇಂದು ಭಾರತೀಯರಿಗೆ ಅತ್ಯಂತ ಪೂಜನೀಯವೂ ಪ್ರಿಯವೂ ಆದ ಅನೇಕ ವಸ್ತುಗಳು ಆದಿಕಾಲದಲ್ಲಿ ನಾನಾ ಮಾರ್ಗಗಳಲ್ಲಿ, ನಾನಾ ವಿಧಗಳಲ್ಲಿ ಭಾರತಕ್ಕೆ ಬಂದು ನೆಲೆ ನಿಂತಿರುವಂಥವು. ಎಲೆ ಅಡಿಕೆ, ತೆಂಗು, ಸಾಮ್ರಾಣಿ, ಸೀರೆ, ಪಂಚೆ ಮುಂತಾದ ವಸ್ತುಗಳು ಮೂಲತಃ ನಮ್ಮ ನೆಲದವಲ್ಲ ಎಂದುಕೊಂಡಾಗ ಕೆಲವರಿಗೆ ಆಶ್ಚರ್ಯವಾಗುವುದು ಸಹಜವೇ! ಮತ್ತೆ ಕೆಲವರಲ್ಲಿ ಅವುಗಳ ಮೇಲೆ ಅತೀವ ಭಕ್ತಿ ಇರುವುದರಿಂದ ಸಸ್ಯವಿಜ್ಞಾನಿಗಳು ಮತ್ತು ಚರಿತ್ರಕಾರರು ಸುಳ್ಳು ಹೇಳುತ್ತಿದ್ದಾರೆಂದು ಎಗರಿ ಬೀಳುವುದೂ ಉಂಟು. ಕನ್ನಡ ನೆಲದ ಇಂದಿನ ಮುಖ್ಯ ಆಹಾರಗಳಾದ ರಾಗಿ - ಜೋಳಗಳು ಕೂಡ ಹೊರಗಿನಿಂದ ಬಂದು ನೆಲೆ ನಿಂತ ಧಾನ್ಯಗಳು. ಖಂಡಾಂತರಗಳ ಸ್ಥಿತ್ಯಂತರದ ಸಮಯದಲ್ಲಿ ಆಫ್ರಿಕಾದಿಂದ ಸೀಳಿ ಹೊರ ಬಂದ ಭೂಮಿಯ ಜೊತೆ ರಾಗಿ ಭಾರತಕ್ಕೆ ಬಂದಿರಬಹುದು ಅಥವಾ ಪುರಾತನ ಕರಿಯ ಆಫ್ರಿಕನ್ನರು ಭಾರತಕ್ಕೆ ವಲಸೆ ಬರುವಾಗ ತನ್ನೊಡನೆ ರಾಗಿಯನ್ನು ತಂದಿರಬಹುದು ಎಂಬ ವಾದವೂ ಇದೆ. ಅದೇ ರೀತಿ ಇಂದು ಭಾರತೀಯರ ಅಡುಗೆ ಮನೆಯ ಅನಿವಾರ್ಯ ತರಕಾರಿ ಹಾಗೂ ಪ್ರಿಯ ಖಾದ್ಯಗಳಾದ ಈರುಳ್ಳಿ - ಬೆಳ್ಳುಳ್ಳಿಗಳೂ ಹೊರ ದೇಶದಿಂದಲೇ ಬಂದಿರುವಂಥವೆಂದು ಸಸ್ಯವಿಜ್ಞಾನಿ ಬಿ.ಜಿ.ಎಲ್. ಸ್ವಾಮಿ ತಿಳಿಸುತ್ತಾರೆ.

ಭಾರತದ ವೈದಿಕೇತರ ಸಮುದಾಯಗಳಲ್ಲಿ ಈರುಳ್ಳಿ ಅತ್ಯಂತ ಜನಪ್ರಿಯ ಖಾದ್ಯ. ಅದನ್ನು ಬಳಸದೆ ಯಾವುದೇ ಬಗೆಯ ಅಡುಗೆಯನ್ನು ಅವರು ಕಲ್ಪಿಸಿಕೊಳ್ಳಲಾರರು. ನಮ್ಮ ಉತ್ತರ ಕರ್ನಾಟಕದ ಜನತೆಗೆ ಜೋಳದ ರೊಟ್ಟಿಯ ಜೊತೆಗೆ ಒಂದು ಈರುಳ್ಳಿ ಇದ್ದರೆ ಪರಮಾನಂದ! ಅವರ ಊಟದ ಬಹುಪ್ರಿಯ ನಂಜಿಕೆಯ ವಸ್ತು ಅದು. ಮಾಂಸಾಹಾರಿಗಳಿಗಂತೂ ಈರುಳ್ಳಿ, ಬೆಳ್ಳುಳ್ಳಿಗಳಿಲ್ಲದೆ ಬದುಕು ಮುಂದಕ್ಕೆ ಹೋಗದು. ಹೀಗಾಗಿ ಇಂದು ಅದು ಭಾರತೀಯರ ಆಹಾರ ರುಚಿ-ಅಭಿರುಚಿಗಳಲ್ಲಿ ಬೆರೆತುಹೋಗಿದೆ; ಅನೇಕ ವೈವಿಧ್ಯಮಯ ಆಹಾರಗಳ ತಯಾರಿಕೆಗೆ ಕಾರಣವಾಗಿದೆ.

ಆದರೂ ಅಲ್ಲೋ ಇಲ್ಲೋ ಅಪರೂಪವಾಗಿ ವೈದಿಕ ಮನೆಗಳಲ್ಲಿ ಇಂದಿಗೂ ಈರುಳ್ಳಿಯನ್ನು ಬಳಸದೆ ಇರುವುದು ಗೋಚರಿಸುತ್ತದೆ. ಬಹುಪಾಲು ವೈದಿಕರು ಮನೆಯಲ್ಲಿ ಈರುಳ್ಳಿಯನ್ನು ಬಳಸಲು ಅಭ್ಯಾಸ ಮಾಡಿಕೊಂಡಿದ್ದಾರೆ. ಕಟ್ಟಾ ಸಂಪ್ರದಾಯವಾದಿಗಳ ಮನೆಯಲ್ಲಿ ಅದಕ್ಕೆ ಸ್ಥಳ ನೀಡದಿದ್ದಾಗ ಹೊರಗೆ ತಿನ್ನುವವರ ಸಂಖ್ಯೆಗೇನೂ ಕಡಿಮೆಯಿಲ್ಲ!

ವೈದಿಕ ಸಂಪ್ರದಾಯಸ್ಥ ಆಹಾರ ಪದ್ಧತಿಯಲ್ಲಿ ಈರುಳ್ಳಿ ಬೆಳ್ಳುಳ್ಳಿಗಳು ಪ್ರವೇಶ

ಮಾಡದಿರಲು ಕಾರಣ - ಅವು ಹೊರಗಿನಿಂದ ಬಂದ ವಿದೇಶಿ ಸರಕುಗಳೇ ಎಂಬುದಿರಬೇಕು. ಜೊತೆಗೆ ಅವು ಸೂಸುವ ವಾಸನೆಯೂ ಕಾರಣವಿರಬಹುದು. ವಿದೇಶಿ ಮೂಲಗಳಿಂದ ಬಂದ ಎಲೆ, ಅಡಿಕೆ, ತೆಂಗು ಮುಂತಾದ ಪದಾರ್ಥಗಳನ್ನು ಪ್ರೀತಿಯಿಂದ ಅಪ್ಪಿಕೊಂಡ ಈ ಜನ, ಚರಿತ್ರೆಯಿಂದ ವರ್ತಮಾನದ ಕಾಲದವರೆಗೆ ಈರುಳ್ಳಿ ಬೆಳ್ಳುಳ್ಳಿಗಳ ಬಗ್ಗೆ ಅಸಹನೆ ತೋರುತ್ತಲೇ ಬಂದಿದ್ದಾರೆ. ಇವುಗಳ ಆಧಾರದ ಮೇಲೆ ಅವೈದಿಕ ಆಹಾರ ಪದ್ಧತಿಯ ಬಗ್ಗೆ ತಿರಸ್ಕಾರದಿಂದ ನೋಡುವ ಮನಸ್ಥಿತಿಯು ಬೆಳೆದದ್ದು ಸುಳ್ಳಲ್ಲವೆಂಬುದುನ್ನು ಬಸವಣ್ಣನ ಕಾಲದಲ್ಲಿ ನಡೆದ ಒಂದು ಘಟನೆಯನ್ನು ಅವಲೋಕಿಸಬಹುದು :

ಕಲ್ಯಾಣದ ಬಸವಣ್ಣನ ಮನೆಗೆ ಕಿನ್ನರಿ ಬೊಮ್ಮಯ್ಯನೆಂಬ ಶರಣನು ಬಂದು, ತನಗೆ ಈರುಳ್ಳಿಯನ್ನು ಬಳಸಿ ಇಷ್ಟವಾದ ಅಡುಗೆ ಮಾಡಿ ಬಡಿಸಲು ಹೇಳುತ್ತಾನೆ.

ಅದರಂತೆ ಅಡುಗೆಯವರು ಈರುಳ್ಳಿಯನ್ನು ಹೆಚ್ಚಲು ಪ್ರಾರಂಭಿಸುತ್ತಾರೆ. ಆದರೆ ಅಲ್ಲಿಗೆ ಬಂದ ಬಸವಣ್ಣ ಈರುಳ್ಳಿಯ ಹಸಿವಾಸನೆಗೆ ಹೇಸಿ ಅದನ್ನು ಅಮೇಧ್ಯವೆಂದು ಜರಿದುಬಿಡುತ್ತಾನೆ! ಈ ಮಾತನ್ನು ಕೇಳಿಸಿಕೊಂಡ ಕಿನ್ನರಿ ಬೊಮ್ಮಯ್ಯನು ನೊಂದು ಬಸವನ ಮಹಾಮನೆಯನ್ನು ತೊರೆದು ಕಲ್ಯಾಣದಿಂದ ಹೊರನಡೆಯುತ್ತಾನೆ. ಮೂಲತಃ ವೈದಿಕ ಶೈವ ಬ್ರಾಹ್ಮಣ ಆಹಾರ ಪದ್ಧತಿಯಲ್ಲಿ ಬೆಳೆದಿದ್ದ ಬಸವಣ್ಣನಿಗೆ ಈರುಳ್ಳಿ ಪಥ್ಯವಾಗುತ್ತಿರಲಿಲ್ಲ. ಆ ಮೂಲ ವಾಸನೆ ಅವನ ಬಾಯಿಂದ 'ಅಮೇಧ್ಯ'ವೆಂಬ ಪದ ಪ್ರಯೋಗ ಮಾಡಿಸಿತು. ತನ್ನ ತಪ್ಪಿನ ಅರಿವು ಮಾಡಿಕೊಂಡ ಬಸವಣ್ಣ ಈರುಳ್ಳಿ ಗಾಡಿಗಳ ಮೆರವಣಿಗೆಯ ಮೂಲಕ ಕಿನ್ನರಿ ಬೊಮ್ಮಯ್ಯನ ಕ್ಷಮೆ ಯಾಚಿಸಿ ಮಹಾಮನೆಗೆ ಕರೆತರುತ್ತಾನೆ (ಶೂನ್ಯ ಸಂಪಾದನೆ).

ಕಳೆದ ಶತಮಾನದ ಎಂಬತ್ತರ ದಶಕದ ಆದಿಯಲ್ಲಿ ಈರುಳ್ಳಿ ಬೆಲೆ ಗಗನಕ್ಕೇರಿದ ಕಾರಣದಿಂದ ಸರ್ಕಾರಗಳೇ ಅಲ್ಲಾಡಿ ಉರುಳಿದ ಉದಾಹರಣೆ ನಮ್ಮಲ್ಲಿದೆ. ಈಗ ಮತ್ತೆ ದೇಶದಲ್ಲಿ ಈರುಳ್ಳಿಯ ಹಾಹಾಕಾರವೆದ್ದಿದೆ; ಗ್ರಾಹಕ ಅದಕ್ಕಾಗಿ ಪರಿತಪಿಸಿ ಕಣ್ಣೀರಿಡುತ್ತಿದ್ದಾನೆ. ಈ ಈರುಳ್ಳಿ ಮಹಿಮೆಯ ರೂಪ ಹೇಗೆ ವಿನ್ಯಾಸಗೊಳ್ಳುವುದೋ ಕಾದು ನೋಡಬೇಕು.

೨೪-೧೦-೨೦೧೩

# ಶ್ವಾನ ಪ್ರೀತಿ

ನಾಯಿ ತೋಳ ಸಂಕುಲಕ್ಕೆ ಸೇರಿದ ಪ್ರಾಣಿ. ಮಾನವನ ಅತ್ಯಂತ ಪುರಾತನ ದೋಸ್ತಿ. ಅದು ಕೆಲವು ಅನಿವಾರ್ಯ ಅಸಹಾಯಕ ಸ್ಥಿತಿ - ಸನ್ನಿವೇಶಗಳ ಕಾರಣದಿಂದ ಮಾನವನ ಸಂಗಡ ಜೀವಿಸಲಾರಂಭಿಸಿತು. ಅವನು ನಾಯಿಗೆ ಆಹಾರ ನೀಡಿದ. ಅದಕ್ಕೆ ಪ್ರತಿಯಾಗಿ ಅದು ಅವನಿಗೆ ಮತ್ತು ಅವನ ಆಸ್ತಿಪಾಸ್ತಿಗೆ ರಕ್ಷಕನಾಗಿ ನಿಂತಿತು. ರಕ್ಷಣೆಗೂ ಮಿಗಿಲಾದ ನಿಷ್ಠೆ ಮತ್ತು ಪ್ರೀತಿಯನ್ನು ತೋರಲಾರಂಭಿಸಿತು. ನಾಯಿ ನಿಷ್ಠೆ ಮತ್ತು ಪ್ರೀತಿಗಳು ಊಹಾತೀತವಾದವು. ತನ್ನ ಸ್ವಾಮಿಯ ಮತ್ತು ಅವನ ಆಸ್ತಿಪಾಸ್ತಿಗಳ ರಕ್ಷಣೆಗಾಗಿ ಹೋರಾಡಿ ಪ್ರಾಣಬಿಟ್ಟ ನೂರಾರು ಉದಾಹರಣೆಗಳು ಸಿಗುತ್ತವೆ. ಈಗಲೂ ಇಂಥ ಸುದ್ದಿಗಳನ್ನು ನಾವು ಕೇಳುತ್ತಿರುತ್ತೇವೆ.

ಏಕೆ ನಾಯಿಗಳಿಗೆ ಇಂಥ ಅನುಪಮ ನಿಷ್ಠೆ? ಮನುಷ್ಯ ಅವುಗಳಿಗೆ ಕೇವಲ ರಕ್ಷಣೆ - ಆಹಾರ ನೀಡಿದ ಮಾತ್ರಕ್ಕೆ ಅಂಥ ನಿಷ್ಠೆಯನ್ನು ತೋರುತ್ತಿವೆಯೇ? ಮನುಷ್ಯ ಸಾಕಿರುವ ಆನೆ, ಕುದುರೆ, ಬೆಕ್ಕು, ಹಸು, ಆಡು, ಕುರಿ ಮುಂತಾದ ಇನ್ನಿತರೆ ಪ್ರಾಣಿಗಳಲ್ಲಿ ಇಂಥ ಅಪ್ರತಿಮ ನಿಷ್ಠೆ ಇರುತ್ತದೆಯೇ? ಅಷ್ಟೇ ಏಕೆ, ಅವನೇ ಹೆತ್ತು ಸಾಕಿದ ಮಕ್ಕಳಲ್ಲಿ ಇಂಥ ನಿಷ್ಠೆ ಸದಾಕಾಲ ಇರುತ್ತದೆಯೇ?

ಮಾನವನಲ್ಲಿ ಸದಾಕಾಲ ವ್ಯಾಮೋಹ - ಸ್ವಾರ್ಥಗಳು ಮನೆ ಮಾಡಿಕೊಂಡಿರುತ್ತವೆ. ಈ ವ್ಯಾಮೋಹ - ಸ್ವಾರ್ಥಗಳು ವ್ಯಕ್ತಿ ವ್ಯಕ್ತಿಗಳಿಗೆ ಭಿನ್ನವಾಗಿರುತ್ತವೆ. ತಂದೆ ಮಗ, ತಾಯಿ, ಮಗಳು, ಅಣ್ಣ ತಮ್ಮ, ಬಂಧು ವರ್ಗ ಮುಂತಾದ ಸಂಬಂಧಗಳಲ್ಲಿ ಸ್ವಾರ್ಥದ ಏರುಪೇರಾಗುತ್ತದೆ. ಹಿಂದೆ ಅವಿಭಕ್ತ ಕುಟುಂಬಗಳಿದ್ದಾಗ 'ಊಟ' ಬಡಿಸುವ ತಾಯಿಯ ಸೌಟು ಸಂಬಂಧಗಳ ಆಧಾರದ ಮೇಲೆ ಸಾರಿನ ಪಾತ್ರೆಯ ಮೇಲೆ ಕೆಳಗೆ ಆಡುತ್ತಿತ್ತು' ಎಂದು ಗಾದೆಯೊಂದು ನುಡಿಯುತ್ತದೆ. ಸ್ವಾರ್ಥ ಮನುಷ್ಯ ಸಂಬಂಧಗಳನ್ನು ತೊತ್ತಳ ತುಳಿದು ನಾಶಮಾಡಲು ಹೇಸುವುದಿಲ್ಲವೆಂದು ನಮ್ಮ ಪುರಾಣಗಳು ಶ್ರುತಪಡಿಸುತ್ತವೆ. ರಾಜ್ಯದಾಸೆಗೆ ತಂದೆ-ತಾಯಿಗಳನ್ನೆ ಬಂಧನದಲ್ಲಿರಿಸಿ ಸಾಯಿಸಲು ಹಿಂದೆ ಮುಂದೆ ನೋಡದ, ಸ್ವಂತ ಅಣ್ಣ ತಮ್ಮಂದಿರನ್ನೇ ಸಾಯಿಸಲು ಹಿಂಜರಿಯದ ವ್ಯಕ್ತಿಗಳನ್ನು ನಾವು ಚರಿತ್ರೆಯಲ್ಲಿ ನೋಡುತ್ತೇವೆ. ಆದರೆ ತನ್ನ ಸ್ವಾರ್ಥಕ್ಕಾಗಿ ತನ್ನನ್ನು ಸಾಕಿ ಬೆಳೆಸಿದ ಯಜಮಾನ ಮತ್ತು ಅವನ ಮಕ್ಕಳನ್ನು ಹಿಂಸಿಸಿದ ನಾಯಿಯನ್ನು ನಾವು ಕಾಣಲಾಗದು.

ಚರಿತ್ರೆಯಂಚಿನಿಂದಲೂ ಮಾನವನ ಅನುಚರನಾಗಿ ಬೆಳೆದು ಬಂದಿರುವ ನಾಯಿ ಮೂಲತಃ ಅತ್ಯಂತ ಸಂಕೋಚದ, ವಿನಮ್ರತೆಯ ಪ್ರಾಣಿ. ಅದು ತನ್ನ ಮನೆಯವರ ಬಗ್ಗೆ ತೋರುವ

ವಿನಮ್ರತೆ ಅದರ ಅಂತರಾಳದಿಂದ ಹೊರಹೊಮ್ಮುವ ಭಾವನೆ. ಅದು ಆಕ್ರೋಶಗೊಳ್ಳುವುದು, ಭಯಂಕರವಾಗಿ ಬೊಗಳುವುದು ತಮ್ಮ ಸ್ವಾಮಿಯ ಮತ್ತು ಅವನ ಹೆಂಡತಿ ಮಕ್ಕಳ ಮತ್ತು ಆಸ್ತಿಪಾಸ್ತಿಗಳ ಮೇಲೆ ಅನ್ಯರ ಆಕ್ರಮಣವಾದಾಗ ಮಾತ್ರ. ಆಗ ನಿಜಕ್ಕೂ ಅದು ಗ್ರಾಮ ಸಿಂಹವೇ!

ಇಡೀ ರಾತ್ರಿ ಊರಿಗೆ ಊರೇ ಮಲಗಿ ನಿದ್ರಿಸುತ್ತಿರುವಾಗ ಊರ ನಾಯಿಗಳೆಲ್ಲ ಸೇರಿ ಊರನ್ನು ಕಾಯುವ - ರಕ್ಷಿಸುವ ಕೆಲಸವನ್ನು ಮಾಡುತ್ತವೆ. ಆ ಸಂದರ್ಭದಲ್ಲಿ ಅನೇಕ ನಾಯಿಗಳು ಚಿರತೆ - ಹುಲಿಗಳ ಬಾಯಿಗೆ ತುತ್ತಾದ ಪ್ರಸಂಗಗಳಿವೆ. ಇಂಥ ಸಂದರ್ಭಗಳನ್ನು ಹೊರತುಪಡಿಸಿ, ಮಿಕ್ಕವೇಳೆ ನಾಯಿ ತನ್ನ ಯಜಮಾನನ ಕೋಳಿ ಕುರಿಗಳನ್ನು, ಮಕ್ಕಳನ್ನು ಜತನವಾಗಿ ನೋಡಿಕೊಳ್ಳುವ ಪರಿಯೇ ಹೃದಯಕ್ಕೆ ಆಹ್ಲಾದವನ್ನು ತರುವಂಥದು.

ಯಜಮಾನನಿಲ್ಲದ ನಾಯಿ ಸಾಕುಪ್ರಾಣಿ ಎನ್ನಿಸಿಕೊಳ್ಳಲಾರದು. ಜಗತ್ತಿನ ಯಾವುದೇ ಮೂಲೆಯ ಯಾವುದೇ ಗ್ರಾಮದ ನಾಯಿಗೆ ಒಂದು ಮನೆ ಅಥವಾ ಒಬ್ಬ ಯಜಮಾನ ಆಶ್ರಯ ನೀಡಿರುತ್ತಾನೆ. ಯಜಮಾನನಿಲ್ಲದ ಬೀಡಾಡಿ ನಾಯಿ ಆಧುನಿಕತೆಯ ಅನೇಕ ಅನಿಷ್ಟ ಉತ್ಪನ್ನಗಳಲ್ಲಿ ಒಂದು. ಇದು ನಗರಸಂಸ್ಕೃತಿಯು ವಿದೇಶಿ ತಳಿಗಳಿಗೆ ಮಾರುಹೋಗಿ ನಮ್ಮ ನಾಡ ತಳಿಗಳನ್ನು ತುಚ್ಛವಾಗಿ ಕಂಡು, ಅವುಗಳನ್ನು ಅನಾಥಗೊಳಿಸಿ ಬೀದಿಗೆ ತಳ್ಳಿರುವ ಕಾರಣದಿಂದ ಉಂಟಾದ ದುಷ್ಪರಿಣಾಮ. ಹೀಗೆ ನಗರಗಳಲ್ಲಿ ಅನಾಥವಾದ ನಾಯಿಗಳು ವೃದ್ಧಿಗೊಂಡು ಆಹಾರಕ್ಕಾಗಿ ದಿನನಿತ್ಯ ಹೋರಾಡಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಇಂಥ ಬೀಡಾಡಿ ನಾಯಿಗಳಿಗೆ ನಮ್ಮ ರಸ್ತೆಯಲ್ಲಿರುವ ಹೋಟೆಲ್ಲುಗಳು, ಡಾಬಾಗಳು ಬಿಸಾಡುವ ತ್ಯಾಜ್ಯವೇ ಮುಖ್ಯ ಆಹಾರ. ಅದನ್ನು ಕಬಳಿಸಿ ಬದುಕಲು ತಮ್ಮ ಸಹಜ ಸಂಕೋಚ ಮತ್ತು ವಿನಮ್ರತೆಯ ಸ್ವಭಾವವನ್ನು ಕಳೆದುಕೊಂಡು ಈಗ ಅವು ವ್ಯಗ್ರಗೊಳ್ಳುತ್ತಿವೆ. ಇದರಲ್ಲಿ ನಮ್ಮ ಪಾಲು ಅಧಿಕವಾಗಿಲ್ಲವೆ?

೦೭-೧೧-೨೦೧೩

# ಧರ್ಮ ಮತ್ತು ಪ್ರೇಮ

ಮಹಾಭಾರತದ ಆರಂಭದಲ್ಲಿ ವಿದುರನು ಹಸ್ತಿನಾವತಿಯ ಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸುವ ಮುನ್ನ ಭೀಷ್ಮನಲ್ಲಿಗೆ ಬಂದು ಆಶೀರ್ವದಿಸಲು ಕೋರಲು ಭೀಷ್ಮನು ವಿದುರನಿಗೆ ಧರ್ಮ ಮತ್ತು ಪ್ರೇಮಗಳ ಬಗ್ಗೆ ಅರಿವನ್ನುಂಟು ಮಾಡುವ ಮಾತುಗಳನ್ನಾಡುತ್ತಾನೆ. 'ನೀನು ಹಸ್ತಿನಾವತಿಯ ದೊರೆಗಳಿಗೆ ಬಂಧು. ಅಲ್ಲಿ ಧರ್ಮವೇ ಮುಖ್ಯವಾಗಿರಬೇಕೇ ಹೊರತು ಪ್ರೇಮವಲ್ಲ. ಧರ್ಮವೆಂಬುದು ಸೂರ್ಯನಿದ್ದ ಹಾಗೆ. ಅದು ಶಾಶ್ವತ ಮೌಲ್ಯ, ಸತ್ಯ. ಅದು ನೀತಿ - ನಿಯತಿಯ ಮೇಲೆ ನಿಂತಿರುತ್ತದೆ. ಪ್ರೇಮವೆಂಬುದು ಚಂದ್ರನಿದ್ದ ಹಾಗೆ. ವಿಕಾಸ ಮತ್ತು ಕುಂದುಗಳು ಅದರ ನಿಯತಿ. ಪ್ರೇಮವೆಂಬುದು ವ್ಯಕ್ತಿ ವ್ಯಕ್ತಿಗಳ ನಡುವೆ, ಸಮಯ ಸಂದರ್ಭಗಳಿಗನುಗುಣವಾಗಿ ಭಾವನೆಗಳ ಒತ್ತಡಕ್ಕೆ ಒಳಗಾಗುತ್ತದೆ. ಅದರಲ್ಲಿ ಬೆಳಕು ಮಂದವಾಗುತ್ತಾ ಅಥವಾ ಕತ್ತಲು ಬೆಳಕಾಗುತ್ತಾ ಸ್ಥಿರತೆಯನ್ನು ಕಾಯ್ದುಕೊಳ್ಳಲು ವಿಫಲವಾಗುತ್ತದೆ. ಅಂದರೆ ಆ ಭಾವ ಒತ್ತಡಗಳ ನಡುವೆ ಅಧಿಕಾರ ಸ್ಥಾನದಲ್ಲಿರುವವರು ತೆಗೆದುಕೊಳ್ಳುವ ತೀರ್ಮಾನಗಳು ದಾರಿ ತಪ್ಪುವ ಸಾಧ್ಯತೆ ಇರುತ್ತದೆ. ಆದುದರಿಂದ ಸದಾ ಸತ್ಯವೆ ಆಗಿರುವ ಧರ್ಮ ನಿನ್ನ ನಡೆಯಾಗಿರಲಿ' ಎಂದು ತಿಳಿಹೇಳುತ್ತಾನೆ.

ಇಲ್ಲಿ ಭೀಷ್ಮನು ಹೇಳುವ 'ಧರ್ಮ ಮತ್ತು ಪ್ರೇಮ'ಗಳು ಸಮಕಾಲೀನ ಸಂದರ್ಭದಲ್ಲಿ ವ್ಯಾಖ್ಯಾನಗೊಳ್ಳುತ್ತಿರುವ ಮತ್ತು ಅನುಷ್ಠಾನಗೊಳ್ಳುತ್ತಿರುವ ಬಗೆಯನ್ನು ವಿಶ್ಲೇಷಿಸಬೇಕು. ಭೀಷ್ಮನ ಮಾತಿನ 'ಧರ್ಮ' ಇಂದು ಆಚರಿಸುತ್ತಿರುವ ಮತೀಯತೆ ಮತ್ತು ಅದರ ಪೂರಕ ವಿಧಿ ವಿಧಾನಗಳಲ್ಲ. ಅದು ಸತ್ಯಮಾರ್ಗದಲ್ಲಿ ನಡೆಯುವ ಜೀವನ ವಿಧಾನ. ಅನೀತಿ ಮತ್ತು ದುಷ್ಟ ಮಾರ್ಗಗಳನ್ನು ವಿರೋಧಿಸುವಂಥದ್ದು; ಒಳ್ಳೆಯತನವನ್ನು ಪೋಷಿಸುವಂಥದ್ದು. ಅದು ಸೂರ್ಯ ಪ್ರಕಾಶದಂತೆ ಜೀವಪರವಾದದ್ದು ಮತ್ತು ಉಬ್ಬರವಿಳಿತಗಳಿಲ್ಲದೆ ಸದಾ ಒಂದೇ ನೆಲೆಯಲ್ಲಿರುವಂಥದ್ದು. ಸದಾ ನ್ಯಾಯಪರವೂ ನಿಷ್ಕಾಮವೂ ಸ್ವಾರ್ಥರಹಿತವೂ ಆಗಿರುವಂಥದ್ದು.

'ಪ್ರೇಮ'ವೆಂಬ ಮಾತಿನ ಅರ್ಥ ರಾಗದ್ವೇಷಗಳಿಂದ ಕೂಡಿರುವಂಥದ್ದು. ಮುಖ್ಯವಾಗಿ ಆಡಳಿತಗಾರನಿಗೆ ರಕ್ತಸಂಬಂಧದ ಮೋಹವಿರಬಾರದು. ವಿದುರನಿಗೆ ಧೃತರಾಷ್ಟ್ರನೂ ಪಾಂಡುವೂ ಸೋದರರಾಗಬೇಕು; ಒಂದೇ ತಂದೆಗೆ ಜನಿಸಿದ ಮಕ್ಕಳಾದ್ದರಿಂದ ಸಹಜವಾಗಿ ಈ 'ಪ್ರೇಮ'ವೆಂಬ ಮೋಹಕ್ಕೆ ಮತ್ತು ಅದರ ಆಧಾರಿತ ಭಾವನೆಗಳ ಏರಿಳಿತಕ್ಕೆ ಒಳಗಾಗುವ ಸಾಧ್ಯತೆಯಿರುತ್ತದೆ. ಆದುದರಿಂದ ಭೀಷ್ಮನು 'ಪ್ರೇಮ'ದ ಬಗ್ಗೆ ಲಘುವಾಗಲು ವಿದುರನಿಗೆ ತಿಳಿಸುತ್ತಾನೆ.

ಈಗ 'ಪ್ರೇಮ'ವೆಂಬುದು ಅರ್ಥ ವಿಸ್ತರಿಸಿಕೊಂಡು ಅಥವಾ ಅರ್ಥಾಂತರಗೊಂಡು ಹೆಣ್ಣು

ಗಂಡಿನ ಸಂಬಂಧವನ್ನು ಹೆಚ್ಚಾಗಿ ಸೂಚಿಸುತ್ತದೆ. ಮಹಾಭಾರತದಲ್ಲಿ ಅದು ರಕ್ತಸಂಬಂಧ - ಸೋದರ ಸಂಬಂಧಗಳ ಮೇಲೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಆದರೂ ವರ್ತಮಾನದ ಗಂಡು ಹೆಣ್ಣಿನ ಸಂಬಂಧದಿಂದ ಉಂಟಾಗುವ ಸಂತಾನದ ವ್ಯಾಮೋಹವನ್ನು ಮತ್ತು ಆ ಸಂತಾನವನ್ನು ಉದ್ಧಾರ ಮಾಡಹೊರಡುವ ರೀತಿರಿವಾಜುಗಳನ್ನು ಗಮನಿಸಿದಾಗ ಭೀಷ್ಮನ ಮಾತಿನ ಮೂಲಾರ್ಥ ಜೀವಂತವಾಗಿರುವುದನ್ನು ಅರ್ಥ ಮಾಡಿಕೊಳ್ಳಬಹುದು. ಇಂದಿನ ನಮ್ಮ ರಾಜಕಾರಣ ಮತ್ತು ಅಧಿಕಾರಿಶಾಹಿತನಗಳು 'ಧರ್ಮ'ಕ್ಕಿಂತ ಮಿಗಿಲಾಗಿ ಈ 'ಪ್ರೇಮ'ವೆಂಬ ಚಂದ್ರನಿಯತಿ ಮಾಯೆಗೆ ಒಳಗಾಗಿ ಬದುಕುತ್ತಿರುವುದನ್ನು ನಾವು ಗಮನಿಸಬೇಕು. ಶಾಶ್ವತ ಕರ್ಮವಾಗಬೇಕಾದ ಪ್ರಜಾಪಾಲನೆ, ಸಾಮಾಜಿಕ ನ್ಯಾಯವನ್ನು ನೀಡುವಿಕೆ, ಲಿಂಗ ಸಮಾನತೆಯ ದೃಷ್ಟಿ - ಇಂದು ಕಡಿಮೆಯಾಗಿದೆ. ಅಧಿಕಾರವಿರುವುದು ನಮ್ಮ ಕುಟುಂಬದ - ರಕ್ತಸಂಬಂಧಗಳ ಅಭಿವೃದ್ಧಿಗಾಗಿ, ಅವರ ಸುಖ ಸಾಧನಗಳನ್ನು ಹೆಚ್ಚಿಸುವುದಕ್ಕಾಗಿ ಎಂಬ ಮರೀಚಿಕೆಯ ಬೆನ್ನು ಹತ್ತಿ ನಮ್ಮ ರಾಜಕಾರಣ ಮತ್ತು ಆಡಳಿತಾಂಗಗಳು ಸಾಗುತ್ತಿರುವುದು ವಿಷಾದವನ್ನುಂಟು ಮಾಡುತ್ತದೆ.

ಭೀಷ್ಮನು ಧರ್ಮ ಮತ್ತು ಪ್ರೇಮಗಳ ಬಗ್ಗೆ ಒಂದು ಸಾರ್ವಕಾಲಿಕ ವ್ಯಾಖ್ಯಾನ ಮಾಡಿರುವಂತೆ ಕಾಣುತ್ತದೆ. ಆದರೆ ಭೀಷ್ಮ ಹೇಳುವ 'ಧರ್ಮ' ಅರ್ಥಾಂತರಗೊಂಡು 'ಮತ'ವೆಂಬ ಅರ್ಥದಲ್ಲಿ ವ್ಯಾಖ್ಯೆಗೊಳ್ಳುತ್ತದೆ. ಭೀಷ್ಮನ 'ಧರ್ಮ' ಮರೆಯಾಗಿ, ಅವನು ಯಾವುದನ್ನು ಬದುಕಿನ ಗುರಿಯಾಗಿಟ್ಟುಕೊಳ್ಳುವುದು ತಪ್ಪು ಎಂದಿದ್ದನೋ ಆ ರಕ್ತಸಂಬಂಧದ ಮೋಹ ಅಧಿಕವಾಗಿ ನಮ್ಮ ಬದುಕನ್ನು ವ್ಯಾಪಿಸಿಕೊಂಡಿದೆ. ಇದರಿಂದಾಗಿ ಸಾಮಾಜಿಕ ಸ್ವಾಸ್ಥ್ಯ ಕದಡಿದೆ; ಬದುಕಿನಲ್ಲಿ ಅಸಮಾನತೆ, ಅಸಮಾಧಾನ, ದ್ವೇಷ ಅಸೂಯೆಗಳು ಅಧಿಕವಾಗುತ್ತಿವೆ.

ಭೀಷ್ಮನು ಅಧಿಕಾರ ನಡೆಸುವುದರ ಬಗ್ಗೆ ಅಂದು ಚಿರಸತ್ಯವೊಂದನ್ನು ಬೆಳಕನ್ನು ನಮಗೆ ತಿಳಿಸಿದ್ದಾನೆ. ಅದರಲ್ಲಿ ರಾಜಕಾರಣದ ಮರ್ಮವಿದೆ. ಅದನ್ನು ಅರ್ಥಮಾಡಿಕೊಳ್ಳುವುದರಲ್ಲಿ ಇತಿಹಾಸವೂ ವರ್ತಮಾನವೂ ವಿಫಲವಾಗಿದೆ.

೨೧-೧೧-೨೦೧೩

# ತಾಯಿ ಇದ್ದರೆ ತವರು ಹೆಚ್ಚು

ಹಲಸಂಗಿ ಸೋದರರು ಸಂಪಾದಿಸಿ, ವರಕವಿ ಬೇಂದ್ರೆ ಅವರ ಮುನ್ನುಡಿಯೊಂದಿಗೆ ಪ್ರಕಟವಾದ 'ಗರತಿಯ ಹಾಡು' ಜನಪದ ಗೀತ ಸಂಕಲನ ಇಂದಿಗೂ ಜಾನಪದವನ್ನು ಅಧ್ಯಯನ ಮಾಡುವವರಿಗೆ, ನಮ್ಮ ಪುರುಷಪ್ರಧಾನ ವ್ಯವಸ್ಥೆ ಸೃಷ್ಟಿ ಮಾಡಿರುವ ಲಿಂಗ ಅಸಮಾನತೆಯ ಸೂಕ್ಷ್ಮಗಳನ್ನು ಅರಿಯುವವರಿಗೆ ಅತ್ಯಂತ ಮುಖ್ಯ ಆಕರ ಗ್ರಂಥವಾಗಿದೆ. ಸ್ತ್ರೀಯನ್ನು ಪುರುಷ ಸೃಷ್ಟಿ ಮಾಡಿರುವ ಮೌಲ್ಯಗಳನ್ನೇ ಸತ್ಯವೆಂದು ಮಾನ್ಯ ಮಾಡಿ, ಅವುಗಳನ್ನು ಪಾಲಿಸುವುದು ಪತಿವ್ರತಾ ಧರ್ಮವೆಂದು ಚಾಚೂ ತಪ್ಪದಂತೆ ಪರಿವರ್ತಿಸಿರುವ ತಂತ್ರಗಾರಿಕೆಯನ್ನು ಗ್ರಹಿಸಬಹುದು. ಈ ಸಂಕಲನದಲ್ಲಿರುವ ಒಂದು ತ್ರಿಪದಿಯು ಹೀಗಿದೆ : 'ತಾಯಿದ್ರೆ ತವರ್ಹೆಚ್ಚು ತಂದಿದ್ರೆ ಬಳಗ್ಹೆಚ್ಚು! ಸಾವಿರಕೆ ಹೆಚ್ಚು ಪತಿ ಪುರುಷ! ಹೊಟ್ಟೆಯ ! ಮಾಣಿಕದ ಹರಳು ಮಗನ್ಹೆಚ್ಚು' ಈ ತ್ರಿಪದಿಯ ಮೊದಲ ಸಾಲನ್ನು ಸ್ವಲ್ಪ ಸೂಕ್ಷ್ಮವಾಗಿ ವಿವೇಚಿಸಬೇಕು.

ಯಾವುದೇ ಹೆಣ್ಣುಮಗಳಿಗೆ ಮದುವೆಯಾಗಿ ಗಂಡನ ಮನೆಗೆ ಹೋದಮೇಲೆ ತವರಿನ ಹಂಬಲ ತುಡಿಯುತ್ತಿರುತ್ತದೆ. ಆ ಹಂಬಲ ಆ ಕಾಲದಲ್ಲಿ ನಡೆಯುತ್ತಿದ್ದ ಬಾಲ್ಯ ವಿವಾಹಗಳಾಗಿರುತ್ತಿದ್ದರಿಂದ ಇನ್ನೂ ತೀವ್ರವಾಗಿರುತ್ತಿತ್ತು. ಆದರೆ ಆ ತವರಿನಲ್ಲಿ ಅವಳನ್ನು ಪ್ರೀತಿಸಿ ಬವಣಿಸಲು ತಾಯಿ ಇರಬೇಕು. ತಾಯಿಯ ಸಾಂತ್ವನ ಆರೈಕೆಗಳು ಗಂಡನ ಮನೆಯ ಅವಳ ದುಃಖ ದುಮ್ಮಾನಗಳನ್ನು, ಸುಖ ಸಂತೋಷಗಳನ್ನು ಆಲಿಸಿ ಸಮಾಧಾನಪಡಿಸುವ ಅಥವಾ ಆನಂದ ಪಡುವ ಮನಸ್ಥಿತಿಗೆ ತರುತ್ತಿದ್ದವು. ಆದರೆ ತಾಯಿ ಇಲ್ಲದ ತವರಿನಲ್ಲಿ ಈ ಸಾಂತ್ವನ, ಆರೈಕೆ, ಪ್ರೀತಿ ಎಲ್ಲಿ ಸಿಗಲು ಸಾಧ್ಯ? ಆದುದರಿಂದ ಗರತಿ 'ತಾಯಿಲ್ಲ ತವರಿಗೆ ಹೋಗಬೇಡ ನನ ಮನವೆ! ನೀರಿಲ್ಲ ಕೆರೆಗೆ ಕರಬಂದು! ಹೋಗಾಗ ನೋಡದರ ದುಃಖಗಳ' - ಎಂದು ತನಗೆ ತಾನೇ ಸಮಾಧಾನ ಪಡಿಸಿಕೊಳ್ಳುತ್ತಾಳೆ. ಅಂದರೆ ಹೆಣ್ಣುಮಗಳಿಗೆ ತಾಯಿ ಸತ್ತ ನಂತರ ತನ್ನ ತವರಿನ ಋಣ - ಪ್ರೀತಿ ತೀರಿತ್ತೆಂದೇ ಅರ್ಥ.

ತಾಯಿ ಇಲ್ಲದ ಮನೆಯಲ್ಲಿ ತಂದೆ ಇರುತ್ತಾನೆ. ಆದರೆ ಅವನಿಂದ ಹೆಣ್ಣುಮಗಳಿಗೆ 'ತವರಿನ ಸುಖ' ಸಿಗುತ್ತದೆಯೇ ಎಂಬುದು ಇಲ್ಲಿ ಮುಖ್ಯ ಸಂಗತಿಯಾಗುತ್ತದೆ. ಈ ಸಂಗತಿಯನ್ನೇ ಮೇಲಿನ ತ್ರಿಪದಿ 'ತಂದಿದ್ರೆ ಬಳಗ್ಹೆಚ್ಚು' ಎಂದು ಸೂಕ್ಷ್ಮವಾಗಿ ಸೂಚಿಸಿದೆ. ತಂದೆ ತಾಯಿ ಸತ್ತಮೇಲೆ ಮದುವೆಯಾಗದೆ ಇರುತ್ತಾನೆಯೇ? ಅವನು ಮರು ಮದುವೆಯಾಗಲು ವ್ಯವಸ್ಥೆ ನೂರೆಂಟು ನೆಪಗಳನ್ನು ಹೆಣೆದಿರುತ್ತದೆ. ಅದರಂತೆ ಅವನು ಮತ್ತೊಂದು ಮನೆಯ ಹೆಣ್ಣುಮಗಳನ್ನು ಮದುವೆಯಾಗಿ ಮನೆಗೆ ಕರೆತರುತ್ತಾನೆ. ಹೊಸದಾಗಿ ತಂದೆ ಮನೆಗೆ ಬಂದವಳು

ಮೊದಲ ಹೆಂಡತಿಯ ಮಗಳಿಗೆ 'ತಾಯಿ'ಯಾಗದೆ ಕೇವಲ 'ಚಿಕ್ಕವ್ವ'ಳಾಗುತ್ತಾಳೆ. ಅವಳಿಗೆ ಇವಳು ಮಲಮಗಳಾಗುತ್ತಾಳೆ. ಅವಳ ತಂದೆಯಿಂದ ಜನಿಸುವ ತನ್ನ ಮಕ್ಕಳು ಮುಖ್ಯರಾಗುತ್ತಾರೆ. ಬಲಮಗಳು ದೂರದ ನೆಂಟಿಯಾಗುತ್ತಾಳೆ.

ತವರಿನ ಶಿಶುವಾಗಿ ಅರಳಿದ್ದ ಇವಳಿಗೆ ತನ್ನ ತಂದೆ ಮತ್ತೊಂದು ಮದುವೆ ಆಗುವುದರ ಮೂಲಕ ಹೊಸ ಸಂಬಂಧಗಳು ಮೂಡುತ್ತವೆ. ಹೊಸ ಚಿಕ್ಕವ್ವ, ಅವಳಿಗೆ ಜನಿಸುವ ಮಕ್ಕಳು ಸೋದರ - ಸೋದರಿಯಾಗುತ್ತಾರೆ; ಅವಳ ತಂದೆ ತಾಯಿ ತಮ್ಮ ಬಂಧುಗಳೆಲ್ಲರೂ ಹೊಸ ಬಳಗವಾಗಿ ಹರಡುತ್ತಾರೆ. ಆದರೆ ಹೆತ್ತ ತಾಯಿಯ ಸಾಂತ್ವನ - ಸುಖವನ್ನು ಅವರ್‍ಯಾರು ತರಲಾರರು. ಇದನ್ನೇ ಗರತಿಯು 'ತಂದಿದ್ರೆ ಬಳಗ್ಹೆಚ್ಚು' ಎಂಬ ಮಾತಿನಲ್ಲಿ ಧ್ವನಿಸಿದ್ದಾಳೆ.

ಇಲ್ಲಿ ಜನಪದ ಸಂಸ್ಕೃತಿ ಮಾತೃವಿಗಿರುವ ಪ್ರಾಧಾನ್ಯತೆಯನ್ನು, ಅವಳ ಮಹತ್ವ ಹೆಚ್ಚುಗಾರಿಕೆಯನ್ನು ಕುರಿತು ಮಾತನಾಡುತ್ತಿದೆ.

ಇದೇ ಸಂದರ್ಭದಲ್ಲಿ 'ಮಹಾಭಾರತ'ದಲ್ಲಿ ಬರುವ ಈ ಉಕ್ತಿಯನ್ನು ಗಮನಿಸಿ : 'ತಂದೆ ಆಕಾಶದಷ್ಟು ವಿಸ್ತಾರದವನು, ಬಾಹುಳ್ಯವುಳ್ಳವನು; ತಾಯಿ ಭೂಮಿಯಷ್ಟು ಸಹನೆಯವಳು, ಸೃಷ್ಟಿಶೀಲಳು'. ಗಗನ ಮತ್ತು ಭೂಮಿಯ ಸಂಕೇತಗಳು ತಾಯಿ ತಂದೆಯಲ್ಲಿರುವ ಅಸಮಾನತೆಯನ್ನು ತೋರಿಸುವ ಪ್ರಯತ್ನ ಮಾಡುತ್ತಿವೆ ಎಂದೆನ್ನಿಸುತ್ತದೆ. ಅವರು ಸಮಾನರಲ್ಲ; ತಂದೆ ದೊಡ್ಡವನು, ತಾಯಿ ಚಿಕ್ಕವಳು. ಅವಳಿಗೆ ಸೃಷ್ಟಿಸುವ ಕೆಲಸವಷ್ಟೆ! ಜೊತೆಗೆ ಸಹನೆಯನ್ನು ಅವಳು ಮೈಗೂಡಿಸಿಗೊಂಡಿರಬೇಕು. ಸಹನೆಯೆಂದರೆ, ಗಂಡಸಿನ ಪಾರಮ್ಯವನ್ನು ಸಹಿಸಿಕೊಳ್ಳುವ ಮತ್ತು ಮಕ್ಕಳ ಪಾಲನೆ ಪೋಷಣೆ ಮಾಡಿ ಬೆಳೆಸುವ, ದುಃಖ ಅವಮಾನಗಳನ್ನು ತಾಳಿಕೊಳ್ಳುವ ಸಹನೆಯನ್ನು ಅವಳು ಜನ್ಮತಃ ರೂಢಿಸಿಕೊಳ್ಳಬೇಕು. 'ಗಗನ'ವೆಂದರೆ ಭೂಮಿಯಂತಹ ಕೋಟಿ ಕೋಟಿ ಗ್ರಹ ತಾರೆಗಳನ್ನೊಳಗೊಂಡ ವಿಸ್ತಾರ ಕ್ಷೇತ್ರ. ಅದು ತಂದೆ! ತಾಯಿ ಕೇವಲ ಒಂದು ಗ್ರಹ, ಭೂಮಿ! ಗಗನದ ರಕ್ಷೆಯಲ್ಲಿ ಭೂಮಿ ಬದುಕಬೇಕು!

'ಮಹಾಭಾರತ' ರಚಿತವಾದ ಕಾಲಕ್ಕಾಗಲೇ ಪುರುಷಪ್ರಧಾನ ವ್ಯವಸ್ಥೆ ಸ್ಥಾಪನೆಯಾಗಿತ್ತು ಎಂಬುದನ್ನು ಅಲ್ಲಿನ ಸ್ತ್ರೀಪಾತ್ರಗಳು ನರಳುವ ಬಗೆಯಲ್ಲೇ ಗುರುತಿಸಬಹುದು; ಪುರುಷ ವಿಜೃಂಭಣೆ ಮೆರೆಯುವುದನ್ನು ಕಾಣಬಹುದು. ಗಗನ (ದೈವ) ಕೃಪೆಯಿಂದಲೇ ಪಾಂಡವರಾದಿಯಾಗಿ ಹಲವರು ಇಲ್ಲಿ ಜನಿಸುವುದರಿಂದ 'ಗಗನ' ಮಹತ್ತಾಗಿ 'ಭೂಮಿ' ಅಧೀನವಾಗಿಬಿಡುತ್ತದೆ.

೦೫-೧೨-೨೦೧೩

# ಸಮಾನತೆ!

ಬೆಳಿಗ್ಗೆ

'ಐದೂವರೆ ಆಯ್ತು. ಇನ್ನೂ ಮಲಗೇ ಇದ್ದೀಯಲ್ಲ? ಎದ್ದೇಳು. ಎಷ್ಟು ಕೆಲಸ ಆಗಬೇಕು. ಬಿಸಿನೀರು ರೆಡಿಯಾಗಬೇಕು, ಮಕ್ಕಳಿಗೆ ಸ್ನಾನ ಮಾಡಿಸಬೇಕು, ತಿಂಡಿ ಸಿದ್ಧವಾಗಬೇಕು. ಹ್ಞಾ....... ಅಮ್ಮನಿಗೆ ಗಂಜಿ ಮಾಡಬೇಕು. ಮರೆತುಬಿಡಬೇಡ. ನಿನ್ನೆ ನಾವು ತಿಂದ ತಿಂಡಿಯನ್ನು ಅವಳಿಗೆ ನೀಡಿದೆ. ಅದರಿಂದ ಅವಳ ಆರೋಗ್ಯ ಏರುಪೇರಾಗಿದೆ. ನಿನಗೆ ಸ್ವಲ್ಪಾನು ಜವಾಬ್ದಾರಿ ಇಲ್ಲ. ಹೂಂ.... ಎದ್ದೇಳು.'

'ಮಕ್ಕಳಿಗೆ ಸ್ನಾನ ಆಯ್ತ? ಈಗ್ಲೆ ಯೂನಿಫಾರಂ ತೊಡಿಸಬೇಡ. ನಿನ್ನೆ ಬಟ್ಟೆ ಮೇಲೆಲ್ಲಾ ತಿಂಡಿ ಚೆಲ್ಲಿಕೊಂಡು ಗಲೀಜು ಮಾಡಿಸಿಕೊಂಡರು. ನೀನೇ ಸ್ವಲ್ಪ ತಿನ್ನಿಸಿದರೆ ಆಗೋದಿಲ್ವೆ?'

'ನಿನಗೆ ಎಷ್ಟು ಸಾರಿ ಹೇಳಿಲ್ಲ? ಸ್ನಾನದ ಮನೆಯಲ್ಲಿ ನನ್ನ ಬನಿಯನ್ - ಟವಲ್‌ಗಳನ್ನು ಇಡು ಅಂತಾ. ಇದೇನು? ನೀರು ಉಗುರು ಬೆಚ್ಚಗಿದೆಯಲ್ಲ? ನನಗೆ ಸ್ವಲ್ಪ ಬಿಸಿ ಜಾಸ್ತಿ ಇರಬೇಕಂತಾ ನಿನಗೆ ಗೊತ್ತಿಲ್ವ?'

'ಅಮ್ಮನನ್ನು ಹನ್ನೊಂದು ಗಂಟೆಗೆ ಡಾಕ್ಟರ್ ಹತ್ರ ಕರೆದುಕೊಂಡು ಹೋಗಿ ಬಿಪಿ, ಶುಗರ್ ಟೆಸ್ಟ್ ಮಾಡಿಸಿಕೊಂಡು ಬಾ. ಆಟೋ ಮೆಲ್ಲಗೆ ಚಲಿಸಲು ಹೇಳು.'

'ಹಾ, ಮರೆತೆ, ಸ್ಕೂಲ್‌ನ ಬ್ರೇಕ್ ಟೈಮಲ್ಲಿ ಸ್ಕೂಲ್‌ಗೆ ಹೋಗಿ ಮಕ್ಕಳಿಗೆ ತಿಂಡಿ ತಿನ್ನಿಸಿ ಬಾ, ಇಲ್ಲದಿದ್ದರೆ ಅವ್ರು ತಿನ್ನೊಲ್ಲ.'

ಮಧ್ಯಾಹ್ನ

'ಎಷ್ಟೊತ್ತು ಬೇಕು, ಫೋನ್ ತಕೋಳೋಕೆ? ಮಲಗಿದ್ದೀಯಾ? ಸದಾ ನಿದ್ದೆ!'

'ಅಮ್ಮನಿಗೆ ಡಾಕ್ಟರ್ ಹತ್ರ ಕರ್‍ಕೊಂಡೋಗಿದ್ದೀಯ? ಎಲ್ಲ ನಾರ್ಮಲ್ ಆಗಿದೆ ತಾನೆ? ಔಷಧಿ ತಂದೆಯೋ ಇಲ್ವೊ? ಇಲ್ಲದಿದ್ದರೆ, ಮತ್ತೆ ಸಂಜೆ ಹೋಗ್ಬೇಕಾಗುತ್ತೆ.'

'ಅಮ್ಮನಿಗೆ ಊಟ ಕೊಟ್ಟೆಯಾ? ಅವರಿಗೆ ಮಧ್ಯಾಹ್ನದ ನಿದ್ದೆಗೆ ಭಂಗ ಬರದಂತೆ ಟಿವಿಗೆ ಸೌಂಡ್ ಕೊಡಬೇಡ.'

'ಸ್ಕೂಲ್ ಬ್ರೇಕ್ ಟೈಮಲ್ಲಿ ಸ್ಕೂಲಿಗೆ ಹೋಗಿ ಮಕ್ಕಳಿಗೆ ತಿಂಡಿ ತಿನ್ನಿಸಿ ಬಂದೆಯಾ?'

'ಇಂದು ನೀನು ಕೊಟ್ಟ ಮಧ್ಯಾಹ್ನದ ಲಂಚ್ ಉಪ್ಪು, ಖಾರ ಏನೂ ಇಲ್ಲ. ಅಡಿಗೆ ಮಾಡುವಾಗ ಅದೇನ್ ಯೋಚನೆ ಮಾಡ್ತಿರ್ತಿಯೋ.'

'ಮಕ್ಕಳು ಶಾಲೆಯಿಂದ ಬರುವ ಹೊತ್ತಿಗೆ ಅವರಿಗೆ ಏನಾದರೂ ತಿಂಡಿ ಮಾಡಿಡು. ನನಗೂ ಅದನ್ನೇ ಕೊಟ್ಟರಾಯಿತು.'

**ಸಂಜೆ**

'ಗಿಡಗಳಿಗೆ ನೀರೇ ಹಾಕಿಲ್ವಲ್ಲ, ಎಲ್ಲವು ಬಾಡಿ ಎಲೆ ಇಳಿಬಿದ್ದಿವೆ. ಏಕೆ? ದಿನಕ್ಕೆ ಹತ್ತು ಬಾರಿ ಕಾಂಪೌಂಡ್‌ನಲ್ಲಿ ತಿರುಗಾಡ್ತಿಯಾ, ಕಣ್ಣು ಕಾಣೋದಿಲ್ವೆ? ಅದಕ್ಕೆ ನೀರು ಹಾಕಿದ್ರೆ ನಿನಗೂ ವ್ಯಾಯಾಮವಾಗುತ್ತೆ.'

'ಅಮ್ಮನಿಗೆ, ಮಕ್ಕಳಿಗೆ ಸಂಜೆ ತಿಂಡಿ ಕೊಟ್ಟೆಯಾ? ಕೈಕಾಲ್ ತೊಳ್ಕೋ ಬರ್‍ತೀನಿ. ನನಗೆ ತಿಂಡಿ ಟೀ ರೆಡಿ ಮಾಡು.'

'ಯಾವಾಗ್ ನೋಡಿದ್ರು ಸೀರಿಯಲ್ಲು, ಸೀರಿಯಲ್ಲು. ಆ ಗೋಳನ್ನು ಏನ್ ನೋಡ್ತಿಯಾ? ಬೇಕಾದರೆ ನಾಳೆ ಮಧ್ಯಾಹ್ನ ರಿಪೀಟ್ ಆದಾಗ ನೋಡ್ಕೊ. ಈಗ ನಾನು ನ್ಯೂಸ್ ಕೇಳಬೇಕು.'

'ಮಕ್ಕಳು ಆಟ ಆಡಿದ್ದು ಸಾಕು. ಅವರನ್ನು ರೂಮಿಗೆ ಕರ್‍ಕೊಂಡು ಹೋಗಿ ಹೋಂ ವರ್ಕ್ ಮಾಡಿಸು. ಟಿವಿ ಸದ್ದು ಕೇಳಿಸದ ಹಾಗೆ ಬಾಗಿಲು ಹಾಕಿಕೋ.'

'ನೀನು ಆಗಲೇ ಕೊಟ್ಟ ಟೀ ಅಂತಾ ಬಿಸಿಯಿರಲಿಲ್ಲ. ಸ್ವಲ್ಪ ಸ್ಟ್ರಾಂಗಾಗಿ ಬಿಸಿ ಬಿಸಿ ಟೀ ಮಾಡಿ ತರ್‍ತೀಯಾ?'

**ರಾತ್ರಿ**

'ಅಮ್ಮನಿಗೆ ಫ್ರೆಷ್ ಆಗಿ ಅನ್ನ ಮಾಡಿದ್ದೀಯಾ ತಾನೆ? ಮಧ್ಯಾಹ್ನದ ಅನ್ನವನ್ನೇ ಮತ್ತೆ ಬಿಸಿ ಮಾಡಿಕೊಟ್ಟರೆ ಅವರಿಗೆ ಜೀರ್ಣವಾಗೋಲ್ಲ.'

'ನೋಡು, ಮಕ್ಕಳು ಆಹಾರವನ್ನೆಲ್ಲ ಚೆಲ್ಲುತ್ತಿದ್ದಾರೆ. ನೀನೆ ಊಟಮಾಡಿಸಬಾರದೆ?'

'ಅಮ್ಮನಿಗೆ ಮಾತ್ರೆ ಎಲ್ಲ ನೀಡಿದೆಯಾ? ಅವರು ತೆಗೆದುಕೊಳ್ಳುವಂತೆ ನೋಡಿಕೊಳ್ಳಬೇಕು, ಗೊತ್ತಾ?'

'ಮಕ್ಕಳಿಗೆ ನಿದ್ರೆ ಬರುತ್ತಿದೆ. ಅವರಿಗೆ ಹಾಸಿಗೆ ರೆಡಿ ಮಾಡಿ ಮಲಗಿಸು.'

'ಎಲ್ಲ ಬಾಗಿಲುಗಳನ್ನು ಲಾಕ್ ಮಾಡಿ ಭದ್ರ ಮಾಡಿರುವಿಯಾ? ಮರೆತು ಹಾಗೇ ಬಂದು ಬಿಡಬೇಡ'.

'ಅದೇನು? ಅಡುಗೆ ಮನೆ ಬಿಟ್ಟು ಬರಲು ಅಷ್ಟು ಹೊತ್ತು? ಆಗಲೇ ರಾತ್ರಿ ಹನ್ನೊಂದಾಯ್ತು. ಯಾಕೋ ಬೆನ್ನು ನೋಯ್ತಿದೆ. ಮುಲಾಮು ಹಚ್ಚಿ. ಸ್ವಲ್ಪ ಮಸಾಜು ಮಾಡು.'

'ಯಾಕೋ ಚಳಿ ಅನ್ನಿಸ್ತಿದೆ. ಸ್ವಲ್ಪ ಹತ್ತಿರ ಮಲಕ್ಕೋ.'

(ಇಲ್ಲಿ ಕೇವಲ ಗಂಡು ಧ್ವನಿ ಕೇಳುತ್ತಿದೆ. ಆದರೆ ಹೆಣ್ಣಿನ ಧ್ವನಿ....?)

೧೯-೧೨-೨೦೧೩

# ನಮ್ಮ ಸಂಸ್ಥೆಯ ಉತ್ತಮ ಪ್ರಕಟಣೆಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| 1 | ನಡುರಾತ್ರಿಯಲ್ಲಿ ಸ್ವಾತಂತ್ರ್ಯ | ಹೆಚ್.ಆರ್. ಚಂದ್ರವದನರಾವ್ | 150-00 |
| 2 | ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು | ಸೇವಂತಿ ಡಿ. ರೈ. | 75-00 |
| 3 | ಕನ್ನಡ ವಕ್ರೋಕ್ತಿ ಜೀವಿತ | ಆರ್. ಲಕ್ಷ್ಮೀನಾರಾಯಣ | 375-00 |
| 4 | ವಚನ ಪಂಪಭಾರತ | ಪ್ರೊ. ಹೆಚ್. ಸಿದ್ಧಲಿಂಗಯ್ಯ | 150-00 |
| 5 | ಜಗದ ನಂಟ | ಪ್ರೊ. ಚಂದ್ರಶೇಖರಯ್ಯ | 150-00 |
| 7 | ಮುತ್ಸದ್ದಿ ಪಟೇಲ್ | ಪ.ರಾ. ಶ್ರೀನಿವಾಸ್ | 300-00 |
| 8 | ಭಗವಾನ್ ಶ್ರೀ ರಮಣ ವಚನಾಮೃತ | ಡಿ.ಎ. ಶಂಕರ್ | 105-00 |
| 12 | ಏಳು ಗ್ರೀಕ್ ನಾಟಕಗಳು | ಸಿ.ಪಿ.ಕೆ. | 300-00 |
| 13 | ಕವಿ ವಿಭೂತಿಗೆ ನಮೋ | ಕೋ. ಚೆನ್ನಬಸಪ್ಪ | 90-00 |
| 15 | ಅಲಂಕಾರ ಸರ್ವಸ್ವಮ್ | ವಿದ್ವಾನ್ ಎಚ್.ವಿ. ನಾಗರಾಜರಾವ್ | 200-00 |
| 16 | ಕುವೆಂಪು ಸಂಪುಟ | ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ | 75-00 |
| 17 | ಯುಗದ ಉತ್ಸಾಹ | ಡಾ. ಎಂ. ಚಿದಾನಂದಮೂರ್ತಿ | 350-00 |
| 18 | ಗಿರೀಶ ಕಾರ್ನಾಡರ ನಾಟಕಗಳು ಕನ್ನಡದ ಪ್ರತಿಕ್ರಿಯೆ | ಕೆ. ಮರುಳಸಿದ್ದಪ್ಪ | 350-00 |
| 19 | ಮುದ್ದುರಾಮನ ಬದುಕು ಬೆಳಕು | ಕೆ.ಸಿ. ಶಿವಪ್ಪ | 120-00 |
| 20 | ಬದುಕಿಗೊಂದು ಬರವಸೆ | ಕೆ.ಸಿ. ಶಿವಪ್ಪ | 150-00 |
| 21 | ಇಂಗ್ಲೀಷ್-ಕನ್ನಡ ರಸಾಯನಶಾಸ್ತ್ರ ನಿಘಂಟು | ಆರ್.ಎಲ್. ಮಂಗಳೂರ್ | 500-00 |
| 22 | ಗೃಹವೈದ್ಯ | ಡಾ. ರಾಜೇಂದ್ರಪ್ರಸಾದ್ | 40-00 |
| 23 | ಸಂಗೀತಗಾರರ ಸಂಗೀತಗಾರ ಪಂ. ಮಲ್ಲಿಕಾರ್ಜುನ ಮನ್ಸೂರ | ಸಂ. ಟಿ.ಎಸ್. ವೇಣುಗೋಪಾಲ್ | 65-00 |
| 25 | ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು | ಡಾ. ರಾಗೌ | 325-00 |
| 27 | ಗುಪ್ತಗಾಮಿನಿ | ಬಿ.ವಿ. ವಸಂತಕುಮಾರ್ | 50-00 |
| 28 | ಶರಣು ಶರಣಾರ್ತಿ | ಬಿ.ವಿ. ವಸಂತಕುಮಾರ್ | 70-00 |
| 29 | ರಾಗಿ ಮತ್ತು ಡಯಾಬಿಟೀಸ್ | ಪೂರಿಗಾಲಿ ಬಾಲಕೃಷ್ಣನ್ | 115-00 |
| 30 | ಶಾಸನ ಮತ್ತು ಜನಪದದಲ್ಲಿ ರಾಗಿ | ಪೂರಿಗಾಲಿ ಬಾಲಕೃಷ್ಣನ್ | 80-00 |
| 31 | ಕನ್ನಡದಲ್ಲಿ ಕಾಲಜ್ಞಾನ ಸಾಹಿತ್ಯ | ಮಾಣಕರಾವ್ ಧನಶ್ರೀ | 300-00 |
| 32 | ಕುವೆಂಪು ಮತ್ತು ರಾಜಕೀಯ ಪ್ರಜ್ಞೆ | ಡಾ. ದೇಜಗೌ | 115-00 |
| 33 | ಕ್ಯಾನ್ಸರನ್ನು ಗೆದ್ದ ಸಂತಸ | ಕೃಷ್ಣವಟ್ಟಂ | 100-00 |
| 34 | ಚಿಂತನ ಮಂಥನ ಭಾಗ ೧ | ಕೃಷ್ಣವಟ್ಟಂ | 600-00 |
| 35 | ಚಿಂತನ ಮಂಥನ ಭಾಗ ೨ | ಕೃಷ್ಣವಟ್ಟಂ | 60-00 |
| 36 | ಸಾಮಾಜಿಕ ನೆಲೆ | ಪ್ರೊ. ಶಿವರಾಮ ಕಾಡನಕುಪ್ಪೆ | 150-00 |
| 37 | ವೈದ್ಯ ಪಥದಲ್ಲಿ ಮೊದಲ ಹೆಜ್ಜೆ | ಡಾ. ಸಚ್ಚಿದಾನಂದಮೂರ್ತಿ | 250-00 |
| 38 | ಕನ್ನಡದ ಕಂಪಿನಲ್ಲಿ ಗಾನಕೋಗಿಲೆ ಡಾ. ಎಸ್. ಜಾನಕಿ | ಹೆಚ್.ಎಸ್. ರವಿ | 80-00 |
| 39 | ಬಾಳು ಬದುಕು | ಡಾ. ಎಸ್.ಆರ್. ಗುಂಜಾಳ | 80-00 |
| 40 | ಎಚ್.ಎಂ. ಚನ್ನಯ್ಯ ಸಮಗ್ರ ಸಾಹಿತ್ಯ ಭಾಗ-೧ | ಡಾ. ನಂದೀಶ್ ಹಂಚೆ | 350-00 |

| | | | |
|---|---|---|---|
| 41 | ಎಚ್.ಎಂ. ಚನ್ನಯ್ಯ ಸಮಗ್ರ ಸಾಹಿತ್ಯ ಭಾಗ-೨ | ಡಾ. ನಂದೀಶ್ ಹಂಚೆ | 400-00 |
| 42 | ವ್ಯಕ್ತಿವಿವೇಕ | ವಿದ್ವಾನ್ ಎಚ್.ವಿ. ನಾಗರಾಜರಾವ್ | 350-00 |
| 43 | ಧ್ವನ್ಯಾಲೋಕ ಮತ್ತು ಲೋಚನ | ಪ್ರೊ. ಎಂ.ಎ. ಹೆಗಡೆ | 400-00 |
| 44 | ಮೌನ ಸ್ಪಂದನ | ಕೆ.ಸಿ. ಶಿವಪ್ಪ | 110-00 |
| 45 | ಚಿತ್ತಪರಿಪಾಕ | ಕೆ.ಸಿ. ಶಿವಪ್ಪ | 160-00 |
| 46 | ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ | ಡಾ. ಎಂ.ಆರ್. ರವಿ | 160-00 |
| 47 | ಈ ಜೀವನ ನಮ್ಮದು | ಡಾ. ಎಂ.ಆರ್. ರವಿ | 90-00 |
| 48 | ಬಸವಣ್ಣನವರು | ಡಾ. ಎಂ. ಚಿದಾನಂದಮೂರ್ತಿ | 100-00 |
| 49 | ಶಿಕ್ಷಣ ದರ್ಪಣ | ತೇಸಿ. ವಿಶ್ವೇಶ್ವರಯ್ಯ | 175-00 |
| 50 | ಮಹಾಯಾತ್ರಿಕ | ಮಲೆಯೂರು ಗುರುಸ್ವಾಮಿ | 250-00 |
| 51 | ರಾಜ ಒಡೆಯರ್ | ಎಂ.ಎಸ್. ವೇದಾ | 180-00 |
| 52 | ಕರ್ನಾಟಕದ ರೂವಾರಿ | ದೇಜಗೌ | 250-00 |
| 53 | ಬೆಳಕಿಗೊಂದು ಹೆಜ್ಜೆ | ಸಿ.ಜಿ. ಉಷಾದೇವಿ | 50-00 |
| 54 | ಜೈನಪುರಾಣ ಕಥಾಪ್ರಪಂಚ | ಡಿ.ಎ. ಶಂಕರ್ | 160-00 |
| 55 | ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ | ಡಾ. ಎಂ.ಎಸ್. ನಂದೀಶ್ ಹಂಚೆ | 300-00 |
| 56 | ಯಾರನ್ನೂ ನಿರ್ಲಕ್ಷಿಸಬೇಡಿ ಪ್ಲೀಸ್... | ಡಾ. ಎಂ.ಆರ್. ರವಿ | 100-00 |
| 58 | ಬಸವಪ್ಪಶಾಸ್ತ್ರಿಗಳ ಸಮಗ್ರ ನಾಟಕ ಸಂಪುಟ | ಡಾ. ಎಂ.ಎಸ್. ನಂದೀಶ್ ಹಂಚೆ | 500-00 |
| 59 | ಲಕ್ಷ್ಮೀಶನ ವಚನ ಜೈಮಿನಿಭಾರತ | ಪ್ರೊ. ಹೆಚ್. ಸಿದ್ದಲಿಂಗಯ್ಯ | 300-00 |
| 60 | ಮಹಾಭಾರತದ ಕಥೆಗಳು | ಡಾ. ಹುಣಸೂರು ಎಸ್. ರಾಘವೇಂದ್ರ ರಾವ್ | 300-00 |
| 60 | ಶ್ರೀ ರಾಮಾಯಣ | ಡಾ. ಹುಣಸೂರು ಎಸ್. ರಾಘವೇಂದ್ರ ರಾವ್ | 400-00 |
| 61 | ಆಸ್ಪತ್ರೆಯಲ್ಲಿ ಐವತ್ತನಾಲ್ಕು ದಿನಗಳು | ಶಿವರಾಮು ಕಾಡನಕುಪ್ಪೆ | 130-00 |
| 62 | ಒಂದು ಅಡಿ ಭೂಮಿ ಮತ್ತು ಬೊಗಸೆ ತುಂಬ ಪ್ರೀತಿ | ಡಾ. ನಿರಂಜನ ವಾನಳ್ಳಿ | 150-00 |
| 63 | ಕುವೆಂಪು ಧ್ಯಾನದಲ್ಲಿ | ಡಾ. ಸಿ. ನಾಗಣ್ಣ | 90-00 |
| 64 | ದುರ್ಯೋಧನನ್ | ಡಾ. ಬಿ.ವಿ. ವಸಂತಕುಮಾರ್ | 90-00 |
| 65 | ರನ್ನನ ಗದಾಯುದ್ಧ | ಸಿ.ಪಿ.ಕೆ. | 90-00 |
| 66 | ಮತ್ತೆ ಬಂದ ವಸಂತ | ಡಾ\|\| ಹೆಚ್.ಎಸ್. ರುದ್ರೇಶ್ | 280-00 |
| 67 | ಅಪೂರ್ವ ಮಣಿಗಳು | ಡಾ\|\| ಹೆಚ್.ಎಸ್. ರುದ್ರೇಶ್ | 130-00 |
| 69 | ಇರುವುದೆಲ್ಲವ ಬಿಟ್ಟು | ಡಾ. ನಂದಾ ಕುಮಾರಸ್ವಾಮಿ | 180-00 |
| 71 | ಪುಸ್ತಕ ಸಂಸ್ಕೃತಿ : ಭುವನದ ಭಾಗ್ಯ | ಸಿಪಿಕೆ | 30-00 |
| 72 | ಕಥಾಗುಚ್ಛ | ಮಂಜುಳ ಭದ್ರಸ್ವಾಮಿ | 50-00 |
| 73 | ಕ್ರೀಡಾ ಮಹಿಳೆ | ಡಾ. ಸೀತಾಹನಸೋಗೆ | 50-00 |
| 74 | ನಡುಗಡ್ಡೆ | ನಾಗಚಂದ್ರ | 75-00 |
| 75 | ಸಿಪಿಕೆ ಸಾಹಿತ್ಯ ಸಾಧನೆ | ದೇಜಗೌ | 50-00 |
| 77 | ಬೌದ್ಧಧರ್ಮ ದರ್ಶನ | ಡಾ. ಶ್ರೀ ಶರತ್‌ಚಂದ್ರಸ್ವಾಮಿಗಳು | 750-00 |
| 77 | ಅಶಾಂತ ಸಂತ ಅನಂತ | ಡಾ. ಜಯಪ್ರಕಾಶ ಮಾವಿನಕುಳಿ | 300-00 |
| 77 | ಪೂರ್ವರಂಗ | ಮಲ್ಲೇಪುರಂ ಜಿ. ವೆಂಕಟೇಶ | 200-00 |

'ಬೀಜ ಮತ್ತು ಭೂಮಿ' ಒಂದು ವೈಚಾರಿಕ ಕೃತಿ. ಭೂತ ಕಾಲದ ರೂಢಿಗತ ಮೌಲ್ಯಗಳನ್ನು ಶೋಧಿಸಿ, ವರ್ತಮಾನದ ಬದುಕಲ್ಲಿ ಬೆಳಕು ಮೂಡಿಸಿಕೊಳ್ಳುವುದು ಹೇಗೆಂಬುದನ್ನು ಇಲ್ಲಿನ ಅನೇಕ ಬರಹಗಳು ಅನಾವರಣಗೊಳಿಸುತ್ತವೆ. ಮಾನವ ಬದುಕು ಸದಾ ಜೀವಪರವಾಗಿರುವುದರಿಂದ ಮಾತ್ರ ಅದರ ಆರೋಗ್ಯಪೂರ್ಣ ಅರಳುವಿಕೆಯು ಸಾಧಿತವಾಗಿ ಸಮಾನತೆಯ ಭಾವವಾಹಿನಿಯು ಮೂಡಲು ಸಾಧ್ಯವೆಂಬುದನ್ನು ಈ ಲೇಖಕರು ಸ್ಪಷ್ಟಪಡಿಸುತ್ತಾರೆ.

ಲಿಂಗ ಸಮಾನತೆ, ಸಾಮಾಜಿಕ ಸಮಾನತೆ ಮತ್ತು ಜೀವಿಗಳ ನಡುವಿನ ಸಮಾನತೆಯನ್ನು ಇಂದಿನ ಬದುಕು ಪ್ರಜ್ಞಾಪೂರ್ವಕವಾಗಿ ಮೂಡಿಸಿಕೊಂಡಾಗ ಮಾತ್ರ ಆರೋಗ್ಯಕರ ನೆಲೆಯನ್ನು ಮುಟ್ಟಬಲ್ಲದು ಎಂಬುದನ್ನು ಇಲ್ಲಿನ ಬರಹಗಳು ತಿಳಿಸುತ್ತವೆ.

ವರ್ತಮಾನದ ಬದುಕಿನಲ್ಲಿ ನಾವು ಗಳಿಸುತ್ತಿರುವ ವಿದ್ಯೆ ನಮ್ಮನ್ನು ವೈಚಾರಿಕ ಮತ್ತು ವೈಜ್ಞಾನಿಕ ನೆಲೆಯಲ್ಲಿ ಗಟ್ಟಿಗೊಳಿಸಿದಾಗ ಮಾತ್ರ ನಮ್ಮ ಬದುಕು ಭವಿಷ್ಯದೆಡೆಗೆ ಉಜ್ವಲಮುಖಿಯಾಗುತ್ತದೆ ಎಂಬುದು ಲೇಖಕರ ಸ್ಪಷ್ಟ ನಿಲುವು.

ನಮ್ಮ ನಾಡಿನ ಸಾಂಸ್ಕೃತಿಕ, ಸಾಮಾಜಿಕ ಲೋಕದ ಮುಖ್ಯ ಚಿಂತಕರಲ್ಲಿ ಒಬ್ಬರಾದ ಶಿವರಾಮು ಕಾಡನಕುಪ್ಪೆ ಅವರು ಕನ್ನಡದ ಜನಪ್ರಿಯ ವಾರಪತ್ರಿಕೆಯೊಂದರಲ್ಲಿ ಬರೆದ ಅಂಕಣ ಬರಹಗಳ ವಿಶಿಷ್ಟ ಕೃತಿ ಇದು.



